# ಇತಿಹಾಸ ದರ್ಶನ

ಸಂಪುಟ ೪/೧೯೮೯




ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

# ಇತಿಹಾಸ ದರ್ಶನ

ಸಂಪುಟ ೪/೧೯೮೯

**೧೯೮೮ರಲ್ಲಿ ತುಮಕೂರಿನಲ್ಲಿ ಸಮಾವೇಶಗೊಂಡ ಅಕಾದೆಮಿಯ ದ್ವಿತೀಯ ವಾರ್ಷಿಕ ಸಮ್ಮೇಳನದಲ್ಲಿ ಸಾದರಪಡಿಸಿದ ಪ್ರಬಂಧಗಳ ಸಂಪುಟ**




ಸಂಪಾದಕರು
ಡಾ॥ ಸೂರ್ಯನಾಥ ಕಾಮತ್
ಲಕ್ಷ್ಮಣ್ ತೆಲಗಾವಿ




ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

ITIHASA DARSHANA
Proceedings of the Second Annual
Conference of the Karnataka Itihasa
Academy (Regd.) held at Tumkur
on 23rd & 24th October 1988

Volume 4, July 1990

Edited by Dr. Suryanath Kamath
& Laxman Telagavi

Published by Karnataka Itihasa Academy (Regd.)
'Ranganatha Nilaya', No. 13 (Old No. 4)
15th Cross, New Temple Road
Malleshwaram, Bangalore 560 003



ರೂ. ೬೦-೦೦

ಲಕ್ಷ್ಮೀ ಮುದ್ರಣಾಲಯ
ಸಂಖ್ಯೆ ೧೬೬, ೭ನೇ ತಿರುವು, ೪ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು ೫೬೦ ೦೧೮
ದೂರವಾಣಿ ೬೨೭೬೪೫

# ಸಂಪಾದಕೀಯ

ತುಮಕೂರಿನಲ್ಲಿ ೧೯೮೮ರಲ್ಲಿ ನಡೆದ ಅಕಾದೆಮಿ ಎರಡನೆಯ ವಾರ್ಷಿಕ ಸಮ್ಮೇಳನದ ಕಾಲದಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನವನ್ನು ಈ ನಾಲ್ಕನೆಯ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ. ಅಲ್ಲಿ ಮಂಡಿಸಲಾದ ಪ್ರಬಂಧಗಳಲ್ಲಿ ಮೂರು ಬೇರೆಡೆ ಪ್ರಕಟವಾದುದರಿಂದ ಅವುಗಳನ್ನು ಇಲ್ಲಿ ಸೇರಿಸಿಲ್ಲ. ಇನ್ನು ಏಳು ಪ್ರಬಂಧಗಳು ಸೂಕ್ತ ಅಂತಿಮ ಸ್ವರೂಪದಲ್ಲಿ ಸಕಾಲದಲ್ಲಿ ನಮ್ಮ ಕೈಗೆ ಸೇರಲಿಲ್ಲ.

ಅಕಾದೆಮಿಯು ಪಿ.ಯು.ಸಿ. ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಇತಿಹಾಸ ಪ್ರಶಸ್ತಿ ಪರೀಕ್ಷೆಯು ನಿರೀಕ್ಷೆ ಮೀರಿ ಜನಪ್ರಿಯವಾಗಿದೆ. ಈ ವರ್ಷ ಫೆಬ್ರುವರಿಯಲ್ಲಿ ನಾಲ್ಕು ಸಾವಿರಕ್ಕೂ ಮೀರಿ ವಿದ್ಯಾರ್ಥಿಗಳು ಪರೀಕ್ಷೆಗೆ ಹಾಜರಾದರು. ಬೆಂಗಳೂರು, ಮೈಸೂರು, ಧಾರವಾಡ, ಕಲ್ಬುರ್ಗಿಗಳಲ್ಲಿ ಪರೀಕ್ಷೆ ನಡೆಸಲಾಯಿತು. ಕರ್ನಾಟಕ ಇತಿಹಾಸದ ಅಧ್ಯಯನ ಉತ್ಸಾಹಿಗಳ ಅಪೇಕ್ಷೆಯಂತೆ ಈ ವರ್ಷದಿಂದ ವಿದ್ಯಾರ್ಥಿಗಳಲ್ಲದೇ ಇರುವವರೂ ಸೇರಿದಂತೆ ಇತರರಿಗಾಗಿ 'ಪರಿಣತಿ' ಪರೀಕ್ಷೆಯನ್ನು ಪ್ರತ್ಯೇಕವಾಗಿ ನಡೆಸುವ ನಿರ್ಣಯ ಕೈಗೊಳ್ಳಲಾಗಿದೆ. ಕಳೆದವರ್ಷ ಬೆಂಗಳೂರು ನಗರದ ವಿದ್ಯಾರ್ಥಿಗಳಿಗಾಗಿ ಕರ್ನಾಟಕದ ಇತಿಹಾಸದ ಬಗೆಗೆ ರಸಪ್ರಶ್ನೆ('ಕ್ವಿಜ್') ಕಾರ್ಯಕ್ರಮ ನಡೆಸಲಾಯಿತು. ಇದನ್ನು ಬೆಂಗಳೂರು ಆಕಾಶವಾಣಿಯು ಬಿತ್ತರಿಸಿತ್ತು. ಕರ್ನಾಟಕದ ಇತಿಹಾಸದ ಬಗೆಗೆ ಸಂಶೋಧನೆ, ಅದರ ಅಧ್ಯಯನ ಹಾಗೂ ಅದರ ಬಗೆಗೆ ಸಾರ್ವಜನಿಕರಲ್ಲಿ ಕುತೂಹಲ ಕೆರಳಿಸುವ ಕಾರ್ಯವನ್ನು ಅಕಾದೆಮಿಯು ಯಶಸ್ವಿಯಾಗಿ ಮಾಡುತ್ತಾ ಬಂದಿದೆ. ನಮ್ಮ ಇತಿಹಾಸ, ಪರಂಪರೆಗಳ ರಕ್ಷಣೆಗಾಗಿ ನಾವು ಸೂಚಿಸುವ ಕಾರ್ಯಕ್ರಮವೊಂದನ್ನು ಇದೇ ಸಂಪುಟದ ಪುಟ viiiರಲ್ಲಿ ಮುದ್ರಿಸಿದೆ.

ಈ ಸಂಪುಟದ ಮುದ್ರಣ ಕಾರ್ಯದಲ್ಲಿ ನಮ್ಮೊಡನಿದ್ದು ಕರಡು ತಿದ್ದುವ ಕೆಲಸದಲ್ಲಿ ನೆರವಾದ ಮಿತ್ರ ಶ್ರೀ ಕೆ. ಎಲ್. ರಾಜಶೇಖರ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ಮುದ್ರಣವನ್ನು ಅಚ್ಚುಕಟ್ಟಾಗಿ ಸಕಾಲದಲ್ಲಿ ಮಾಡಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಹಾಗೂ ಅವರ ಸಿಬ್ಬಂದಿಯವರಿಗೆ ವಂದನೆಗಳು. ಈ ಸಂಪುಟದ ಸಂಪಾದನೆಯ ಹೊಣೆಯನ್ನು ನಮಗೆ ವಹಿಸಿದ ಅಕಾದೆಮಿಯ ಪದಾಧಿಕಾರಿಗಳಿಗೆ ನಾವು ಕೃತಜ್ಞರಾಗಿದ್ದೇವೆ.

೨೧-೭-೧೯೯೦ | ಸೂರ್ಯನಾಥ ಕಾಮತ್
ಬೆಂಗಳೂರು | ಲಕ್ಷ್ಮಣ್ ತೆಲಗಾವಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ)

ಬೆಂಗಳೂರು

**ಕಾರ್ಯಕಾರಿ ಸಮಿತಿ**

(ದಿನಾಂಕ ೨೧ ಜುಲೈ ೧೯೯೦ರಲ್ಲಿ ಇದ್ದಂತೆ)

ಡಾ॥. ಜಿ. ಎಸ್. ದೀಕ್ಷಿತ್, ಬೆಂಗಳೂರು
ಅಧ್ಯಕ್ಷರು

ಕೆ. ಅಭಿಶಂಕರ್, ಬೆಂಗಳೂರು
ಡಾ॥ ಅ. ಸುಂದರ, ಧಾರವಾಡ
ಉಪಾಧ್ಯಕ್ಷರುಗಳು

ಎಂ. ಜಿ. ನಾಗರಾಜ್, ರಾಮನಗರ
ಪ್ರಧಾನ ಕಾರ್ಯದರ್ಶಿ

ಡಾ॥ ಎ. ವಿ. ನರಸಿಂಹಮೂರ್ತಿ, ಮೈಸೂರು
ಕಾರ್ಯದರ್ಶಿ

ಎಂ. ಬಿ. ಪಾಟೀಲ, ಬೆಂಗಳೂರು
ಕೋಶಾಧಿಕಾರಿ

ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು
ಡಾ॥ ಚೂಡಾಮಣಿ ನಂದಗೋಪಾಲ್, ಬೆಂಗಳೂರು
ಡಾ॥ ಎಸ್. ರಾಜಶೇಖರ, ಧಾರವಾಡ
ಪ್ರೊ॥ ಮಾಧವ ನಾ. ಕಟ್ಟಿ, ಮೈಸೂರು
ಡಾ॥ ಕೆ. ಜಿ. ವಸಂತಮಾಧವ, ಮೂಲ್ಕಿ (ದ.ಕ.)
ಲಕ್ಷ್ಮಣ್ ತೆಲಗಾವಿ, ಬೆಂಗಳೂರು
ಕೆ. ಆರ್. ಗಣೇಶ, ಬೆಂಗಳೂರು
ಎಚ್. ಎಸ್. ಗೋಪಾಲರಾವ್, ಬೆಂಗಳೂರು
ಡಾ॥ ಪರ್ವಿನ್ ರುಕ್ಸಾನಾ, ಗುಲ್ಬರ್ಗಾ
ಎಚ್. ಶ್ರೀಶೈಲ ಆರಾಧ್ಯ, ಚಿತ್ರದುರ್ಗ
ಎಚ್. ಪಿ. ಶಶಿಧರಮೂರ್ತಿ, ಮೈಸೂರು
ಎಚ್. ರೇವಣಸಿದ್ದಪ್ಪ, ತುಮಕೂರು
ಬಿ. ನಾರಾಯಣಮ್ಮ, ಬೆಂಗಳೂರು
ಡಾ॥ ಎಲ್. ಆರ್. ಕುಲಕರ್ಣಿ, ಬೀದರ್
ಎ. ಎಸ್. ಜಾಗೀರ್‌ದಾರ್, ಬಿಜಾಪುರ
ಕೆ. ಜಗನ್ನಾಥಶಾಸ್ತ್ರಿ, ಶಿವಮೊಗ್ಗ
ಸದಸ್ಯರು

## ಪರಿವಿಡಿ

### ಕರ್ನಾಟಕ ಇತಿಹಾಸ ಅಕಾದೆಮಿ

## ಇತಿಹಾಸ ಪ್ರೇಮಿಗಳಿಗೆ ಕರೆ

# 'ಐತಿಹಾಸಿಕ ಪರಂಪರೆ ಉಳಿಸಿ'

ಕರ್ನಾಟಕದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಜನಜಾಗೃತಿ ಚಳವಳಿ ನಡೆಸಲು ಕರ್ನಾಟಕ ಇತಿಹಾಸ ಅಕಾದೆಮಿ ಯತ್ನಿಸುತ್ತಿದೆ. ಪ್ರಾಚೀನ ಕೋಟೆಗಳು, ಕಟ್ಟಡಗಳು, ದೇವಾಲಯಗಳು, ಮಸೀದಿಗಳು, ಇಗರ್ಜಿ(ಚರ್ಚು)ಗಳು, ಶಾಸನಗಳು, ವೀರಗಲ್ಲು ಮುಂತಾದ ಸ್ಮಾರಕಶಿಲೆಗಳು, ತಾಮ್ರಪಟಗಳು, ತಾಳೆಗರಿಯ ಹೊತ್ತಿಗೆಗಳು, ಐತಿಹಾಸಿಕ ದಾಖಲೆಗಳಾಗಬಲ್ಲ ಕಾಗದಪತ್ರಗಳು, ನಾಣ್ಯಗಳು, ಕಲಾಕೃತಿಗಳು (ಶಿಲ್ಪ, ಕರ-ಕುಶಲ ಕಲೆಯ ವಸ್ತುಗಳು, ವರ್ಣಚಿತ್ರಗಳು), ಆಯುಧಗಳು ಮುಂತಾದ ಪ್ರಾಚೀನ ವಸ್ತುಗಳ ರಕ್ಷಣೆಗಾಗಿ ಪ್ರಚಾರಮಾಡುವುದು ಈ ಚಳವಳಿಯ ಉದ್ದೇಶ.

### ಚಟುವಟಿಕೆಯ ಸ್ವರೂಪ

- ಪ್ರಾಚೀನ ವಸ್ತು ಮತ್ತು ಕಲಾಕೃತಿಗಳ (ಆ್ಯಂಟಿಕ್ವಿಟೀಸ್) ನೋಂದಾವಣೆಗೆ ಪ್ರೇರಣೆ ನೀಡುವುದು.
- ಪ್ರಾಚೀನ ಶಾಸನ, ಪ್ರತಿಮೆ, ಸ್ಮಾರಕಶಿಲೆಗಳ ರಕ್ಷಣೆಯ ಅವಶ್ಯಕತೆಯ ಬಗೆಗೆ ಅವುಗಳ ಪರಿಸರದ ಜನರಿಗೆ ತಿಳುವಳಿಕೆ ನೀಡುವುದು.
- ಪ್ರಾಚೀನ ಕಟ್ಟಡಗಳ ನಾಶ, ದುರುಪಯೋಗ, ಅವುಗಳ ಪರಿಸರದ ಮೇಲೆ ಒತ್ತುವರಿ ನಡೆಸುವುದರ ವಿರುದ್ಧ ಧ್ವನಿಯೆತ್ತುವುದು (ಪ್ರಚಾರ, ಸರಕಾರಕ್ಕೆ ಬರೆಯುವುದು, ಪತ್ರಿಕೆಗಳಿಗೆ ಬರೆಯುವುದು).
- ಓಲೆಗರಿಗಳ ಅಸ್ತಿತ್ವದ ಬಗೆಗೆ ಅಧಿಕೃತ ಸಂಗ್ರಾಹಕರಿಗೆ (ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳ ಸಂಬಂಧಿಸಿದ ಶಾಖೆಗಳು) ಮಾಹಿತಿ ನೀಡುವುದು. ಐತಿಹಾಸಿಕ ಮಹತ್ವದ ಕಾಗದಪತ್ರಗಳ ಬಗೆಗೆ ರಾಜ್ಯ ಪತ್ರಾಗಾರಕ್ಕೆ ಮಾಹಿತಿ ನೀಡುವುದು.

ಅಧ್ಯಾಪಕರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ಈ ಚಟುವಟಿಕೆಯಲ್ಲಿ ವಿಶೇಷವಾಗಿ ಪಾಲುಗೊಳ್ಳಲು ಅಕಾದೆಮಿ ಕರೆ ನೀಡುತ್ತದೆ.



ಡಾ. ಜಿ.ಎಸ್. ಗಾಯಿ ಅವರು

ಕರ್ನಾಟಕ ಇತಿಹಾಸ ಅಕಾದೆಮಿಯ ದ್ವಿತೀಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು

ಡಾ॥ ಜಿ. ಎಸ್. ಗಾಯಿ

# ಸಮ್ಮೇಳನದ ಅಧ್ಯಕ್ಷರ ಭಾಷಣ*

ಭಾರತೀಯ ಇತಿಹಾಸದ ಅಧ್ಯಯನಕ್ಕೆ ಏಕೈಕ ಪ್ರಮುಖ ಮಾರ್ಗದರ್ಶಿಯೆಂದರೆ ಶಾಸನಗಳು. ಯಾವುದೇ ಪ್ರಾಂತ, ಕಾಲ ಅಥವಾ ವಂಶದ ಐತಿಹ್ಯವನ್ನು ಪುನರ್ಪರಿಶೀಲಿಸಲು ಈ ಅಸಂಖ್ಯ ಶಾಸನಗಳನ್ನು ಕೂಲಂಕಷವಾಗಿ ಪರಿಶೀಲಿಸಬೇಕಾಗುವುದು. ಸಮಕಾಲೀನ ಇತಿಹಾಸದ ಬಗ್ಗೆ ಸಪ್ರಮಾಣ ಬರಹಗಳು ದೊರೆಯುಲು ಪ್ರಾರಂಭವಾದದ್ದು, ಮುಸಲ್ಮಾನರ ಆಡಳಿತದ ನಂತರವೇ. ಹಲವಾರು ಪ್ರಾಂತ್ಯಗಳು ಈಗ ಭೌಗೋಳಿಕವಾಗಿ ಮಹಾರಾಷ್ಟ್ರ, ಆಂಧ್ರ ಹಾಗೂ ತಮಿಳುನಾಡುಗಳಿಗೆ ಸೇರಿದ್ದರೂ ಅಲ್ಲಲ್ಲೇ ಕಾಣಸಿಗುವ ಶಾಸನಗಳ ಅನ್ವಯ ಅವು ಪ್ರಾಚೀನ ಹಾಗೂ ಮಧ್ಯಯುಗದ ಕರ್ನಾಟಕಕ್ಕೆ ಸೇರಿದವುಗಳಾಗಿದ್ದವು. ಈ ದಿಶೆಯಲ್ಲಿ ಇತ್ತೀಚೆಗೆ ಪ್ರಕಟವಾದ ಶ್ರೀನಿವಾಸ ರಿತ್ತಿ ಹಾಗೂ ಆನಂದ ಕುಂಬಾರ ಅವರಿಂದ ಸಂಪಾದಿಸಲ್ಪಟ್ಟ 'ಶೋಲಾಪುರ್ ಜಿಲ್ಲಾ ಶಾಸನಗಳು' ಎಂಬ ಪುಸ್ತಕವು ಉಲ್ಲೇಖನೀಯ. ಪ್ರಕಟಿತ ೪೦ ಶಾಸನಗಳ ಪೈಕಿ ೩೯ ಶಾಸನಗಳು ಕನ್ನಡ ಲಿಪಿ ಹಾಗೂ ಭಾಷೆಯಲ್ಲಿದ್ದರೆ, ಒಂದು ಮಾತ್ರ ನಾಗರಿ ಲಿಪಿ ಹಾಗೂ ಸಂಸ್ಕೃತ ಭಾಷೆಯಲ್ಲಿದೆ. ಪ್ರಾಚೀನ ಹಾಗೂ ಮಧ್ಯಯುಗದ ಯಾವುದೇ ಒಂದು ಶಾಸನವೂ ಮರಾಠೀ ಭಾಷೆ ಅಥವಾ ಲಿಪಿಯಲ್ಲಿಲ್ಲ. ಅಂದರೆ, ಶೋಲಾಪುರ್ ಜಿಲ್ಲೆ ಈಗ ಮಹಾರಾಷ್ಟ್ರದಲ್ಲಿದ್ದರೂ ಒಂದು ಕಾಲಕ್ಕೆ ಸಮಗ್ರ ಕರ್ನಾಟಕದ ಅವಿಭಾಜ್ಯ ಅಂಗವಾಗಿತ್ತು.

ಬ್ರಿಟಿಷರ ಕಾಲದ ಆಧುನಿಕ ಇತಿಹಾಸದ ಬಗ್ಗೆ ಹೇಳುವುದಾದರೆ, ಬ್ರಿಟಿಷರ ಆಳ್ವಿಕೆಯ ವಿರುದ್ಧ ಎದ್ದ ಭಾರತೀಯ ಸೈನಿಕರ ದಂಗೆಯೇ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂಬುದು ಹಲವರ ಅಭಿಮತ. ಆದರೆ ಈ ದಂಗೆಯನ್ನು ಸ್ವಾತಂತ್ರ್ಯ ಸಂಗ್ರಾಮವೆನ್ನುವುದು ಒಂದು ಅಪಪ್ರಯೋಗ. ಭಾರತೀಯ ಸೈನಿಕರ ನಿಷ್ಠಾವಂತ ಸೇವೆಯನ್ನು ಅವರ ಸೇವಾ ಜ್ಯೇಷ್ಠತೆಯನ್ನು ಕಡೆಗಣಿಸಿ, ಬ್ರಿಟಿಷರನ್ನು ಉನ್ನತ ಹುದ್ದೆಗಳಿಗೆ ನೇಮಿಸಿದುದೇ ಈ ದಂಗೆಗೆ ಮುಖ್ಯ ಕಾರಣ. ಆದರೆ ಈ ದಂಗೆ ಪ್ರಾರಂಭದಲ್ಲಿಯೇ ಹತ್ತಿಕ್ಕಲ್ಪಟ್ಟಿತು. ಅಲ್ಲದೆ, ಈ ದಂಗೆಯು ಉತ್ತರಭಾರತದ ಕೆಲವು ಪ್ರಾಂತ್ಯಗಳಿಗೆ ಸೀಮಿತವಾಗಿತ್ತೇ ವಿನಾ ದಕ್ಷಿಣದ ಕಡೆ ಹರಡಲಿಲ್ಲ. ಝಾನ್ಸಿರಾಣಿ ಲಕ್ಷ್ಮಿಬಾಯಿಯಾಗಲೀ ಕಿತ್ತೂರು ಚೆನ್ನಮ್ಮನಾಗಲೀ ಬ್ರಿಟಿಷರ ವಿರುದ್ಧ ನಡೆಸಿದ ಯಾವುದೇ ಯುದ್ಧವೂ ಸ್ವಾತಂತ್ರ್ಯ ಸಂಗ್ರಾಮವೆನಿಸುವುದಿಲ್ಲ. ಏಕೆಂದರೆ ಅವುಗಳ ಧ್ಯೇಯೋದ್ದೇಶಗಳೇ ಬೇರೆಯಾಗಿದ್ದವು. ಆದರೆ ಇವೇ ಮೊದಲಾದ ದಂಗೆಗಳು ಬ್ರಿಟಿಷರ ಆಳ್ವಿಕೆಯ ವಿರುದ್ಧ ಭಾರತೀಯರಲ್ಲಿ ಒಂದು ತೆರನಾದ ಅಸಮಾಧಾನವನ್ನು ಮೂಡಿಸಿದವೆಂಬುದನ್ನು ಅಲ್ಲಗಳೆಯುವಂತಿಲ್ಲ. ಭಾರತೀಯರಿಗೆ ಸ್ವಾತಂತ್ರ್ಯ ಗಳಿಸಿಕೊಡಬೇಕೆಂಬ ಬಯಕೆ ಮೊಟ್ಟಮೊದಲ ಬಾರಿಗೆ ೧೮೮೫ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಪ್ರಾರಂಭವಾದಾಗ ಉಂಟಾಯಿತು. ಗೋಪಾಲಕೃಷ್ಣ ಗೋಖಲೆ, ದಾದಾಬಾಯಿ ನವರೋಜಿ ಹಾಗೂ ಫಿರೋಜಷಾ ಮೆಹತಾರಂತಹ ದಕ್ಷ,

* ಸಾರಾಂಶ

ಧೀಮಂತ ದೇಶಪ್ರೇಮಿಗಳಿದ್ದರೂ ೧೮೮೫ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಮೊದಲ ಅಧಿವೇಶನವು ಬೊಂಬಾಯಿಯಲ್ಲಿ ನಡೆದಾಗ, ಅದರ ರೂವಾರಿ ಹಾಗೂ ಅಧ್ಯಕ್ಷನಾಗಿದ್ದವನು ಎ. ಓ. ಹ್ಯೂಮ್ ಎಂಬ ಈಸ್ಟ್ ಇಂಡಿಯಾ ಕಂಪೆನಿಯ ನಿವೃತ್ತ ಬ್ರಿಟಿಷ್ ಅಧಿಕಾರಿ ಎಂಬುದು ಗಮನಾರ್ಹ ಸಂಗತಿ. ಸ್ವತಃ ಗೋಖಲೆಯವರೇ ಅಂದಿನ ಪರಿಸ್ಥಿತಿಯ ಚಿತ್ರಣವನ್ನು ಈ ಮಾತುಗಳಲ್ಲಿ ನೀಡಿದ್ದಾರೆ: ಬ್ರಿಟಿಷರ ವಿರುದ್ಧ ದೇಶದ ನಾನಾ ಭಾಗಗಳಲ್ಲಿ ಹರಡುತ್ತಿದ್ದ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಗಮನದಲ್ಲಿಟ್ಟು, ಅಧಿಕಾರಿವರ್ಗ ತಂತಮ್ಮ ಸ್ಥಾನಗಳನ್ನು ಕಾಪಾಡಿಕೊಳ್ಳಲು ಪರಿಹಾರಗಳನ್ನು ಹುಡುಕುತ್ತಿದ್ದರು. ಇದಕ್ಕಾಗಿ ಅವರು, ಅಂದಿನ ಭಾರತೀಯ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತು, ಬ್ರಿಟಿಷರೊಡನೆಯೂ ವಿಶ್ವಾಸಾರ್ಹ ಸ್ಥಾನದಲ್ಲಿದ್ದ ಎ. ಓ. ಹ್ಯೂಮ್‌ನನ್ನು ಆರಿಸಿದರು. ಭಾರತಕ್ಕೆ ಆಧಿಪತ್ಯ ನೀಡುವುದೋ ಅಥವಾ ಸ್ವಾತಂತ್ರ್ಯ ನೀಡುವುದೋ ಎಂಬುದನ್ನು ನಿರ್ಣಯಿಸಲು, ಅವಿದ್ಯಾವಂತ ಗ್ರಾಮೀಣ ಸೈನಿಕರೊಡನೆ ಚರ್ಚಿಸುವುದಕ್ಕಿಂತ, ವಿದ್ಯಾವಂತ ವ್ಯಕ್ತಿಗಳೊಡನೆ ಒಡಂಬಡಿಕೆ ಮಾಡುವುದೇ ಸೂಕ್ತವೆಂದು ಈತ ಅಧಿಕಾರಿಗಳಿಗೆ ಕಿವಿಮಾತು ಹೇಳಿದ. ಇತ್ತ ಭಾರತೀಯ ವಿದ್ಯಾವಂತ ವ್ಯಕ್ತಿಗಳು ಸಹಾ ಸ್ವಾತಂತ್ರ್ಯಕ್ಕಾಗಿ ತಮ್ಮ ಅಹವಾಲುಗಳನ್ನು ಬ್ರಿಟಿಷರಿಗೆ ಮುಟ್ಟಿಸಲು ಅವರೊಡನೆ ನೇರ ಮುಖಾಬಿಲೆ ಮಾಡುವುದಕ್ಕಿಂತ, ಅವರಿಗೆ ಆಪ್ತನಾದ ಹ್ಯೂಮ್ ಮೂಲಕ ಸಂಧಾನ ನಡೆಸುವುದು ಸೂಕ್ತವೆಂದೆಣಿಸಿದರು. ಹಾಗಾಗಿ ಅವರೂ ಹ್ಯೂಮ್‌ನನ್ನು ಭೇಟಿಯಾದರು. ಇದರ ಪ್ರತಿಫಲವೇ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್. ಆದ್ದರಿಂದಲೇ ಇದರ ಮೊದಲ ಅಧಿವೇಶನಾಧ್ಯಕ್ಷನಾಗಿ ಹ್ಯೂಮ್ ಆದದ್ದು.

ಕೊನೆಯಲ್ಲಿ, ನಮ್ಮ ತರುಣ ಇತಿಹಾಸಜ್ಞರು ಸತ್ಯಾನ್ವೇಷಣೆಯನ್ನೇ ಗುರಿಯಾಗಿರಿಸಿಕೊಂಡು ತಮ್ಮ ಇತಿಹಾಸದ ಅಧ್ಯಯನವನ್ನು ನಡೆಸಿ, ಯಾವುದೇ ಪೂರ್ವಾಗ್ರಹವಿಲ್ಲದೆ ಸತ್ಯವನ್ನು ದಿಟ್ಟವಾಗಿ ಮಹಾಜನತೆಯ ಮುಂದಿಡಬೇಕೆಂದೂ ತಮ್ಮ ಕೈಂಕರ್ಯದಲ್ಲಿ ಧೃತಿಗೆಡದೆ ಮುನ್ನಡೆದು, ಬೇರೆ ಯಾವ ವ್ಯಕ್ತಿ ಶಕ್ತಿಗಳಿಂದಲೂ ಪ್ರಭಾವಿತರಾಗಬಾರದೆಂದೂ ವಿನಂತಿಸುತ್ತೇನೆ. ಈ ದಿಶೆಯಲ್ಲಿ, ಕರ್ನಾಟಕ ಇತಿಹಾಸದ ಹಲವಾರು ಅಧ್ಯಾಯಗಳನ್ನು ಹೊಸದಾಗಿ ಬರೆಯಬೇಕಾಗುವುದು.

(ಕನ್ನಡಾನುವಾದ/ಟಿ. ಜಿ. ನರಸಿಂಹಮೂರ್ತಿ)




ಶ್ರೀ ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀಶ್ರೀ ಶಿವಕುಮಾರ ಸ್ವಾಮಿಗಳವರಿಂದ
ಅಕಾದೆಮಿಯ ವಾರ್ಷಿಕ ಸಮ್ಮೇಳನದ ಉದ್ಘಾಟನೆ. ಎಡ ಬಲಗಳಲ್ಲಿರುವವರು:
ಡಾ. ಸೂರ್ಯನಾಥ ಕಾಮತ್ ಮತ್ತು ತುಮಕೂರು ಇತಿಹಾಸ ಪರಿಷತ್ತಿನ
ಅಧ್ಯಕ್ಷರಾದ ಶ್ರೀ ಟಿ.ಕೆ. ನಂಜುಂಡಪ್ಪ ಅವರು




ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಂದ ಆಶೀರ್ವಚನ.
ವೇದಿಕೆಯಲ್ಲಿರುವವರು: ಡಾ. ಜಿ. ತಿಮ್ಮಯ್ಯ, ಡಾ. ಜಿ.ಎಸ್. ಗಾಯಿ ಮತ್ತು
ಶ್ರೀ ಆರ್.ಎಸ್. ಆರಾಧ್ಯ ಅವರು




ಅಕಾದೆಮಿಯ ಪ್ರಥಮ ಸಮ್ಮೇಳನಾಧ್ಯಕ್ಷ ಡಾ. ಎಂ. ಚಿದಾನಂದಮೂರ್ತಿ
ಅವರಿಂದ ಡಾ. ಜಿ.ಎಸ್. ಗಾಯಿ ಅವರಿಗೆ ಸನ್ಮಾನ




ಸಮ್ಮೇಳನದ ಸಮಾರೋಪದಲ್ಲಿ ಮಾತನಾಡುತ್ತಿರುವವರು ಡಾ. ಸೂರ್ಯನಾಥ
ಕಾಮತ್. ವೇದಿಕೆಯಲ್ಲಿರುವವರು: ಸರ್ವಶ್ರೀ ಕೆ. ಅಭಿಶಂಕರ್,
ಆರ್. ಎಸ್. ಆರಾಧ್ಯ, ಎಂ.ಬಿ. ಪಾಟೀಲ ಮೊದಲಾದವರು

ಸೌಜನ್ಯ/ಎಚ್. ರೇವಣಸಿದ್ದಪ್ಪ



ಹುಲಿಬೇಟೆಯ ವೀರಗಲ್ಲು, ಕೈದಾಳ (ಲೇಖನ – ೫)



ಮರವಂತೆ ವೀರಗಲ್ಲು (ಲೇಖನ – ೮)









ಹಂಪಿ – ಕಮಲಾಪುರ: ಬಿಳಿ ಜೇಡಿಮಣ್ಣಿನ ಗೊಂಬೆ; ಬಲಬದಿ, ಹಿಂಭಾಗ, ಎಡಬದಿ ಮತ್ತು ಮುಂಭಾಗ





ಹಜಾರರಾಮ ದೇವಾಲಯ ಮಂಟಪದ ಪದ್ಮಾಕಾಂತ ಸ್ತಂಭಗಳು ( ಲೇಖನ – ೧೧)



ಅಚ್ಯುತರಾಯ ದೇವಾಲಯ ಕಲ್ಯಾಣಮಂಟಪದ ಪದ್ಮಾಕಾಂತ ಸ್ತಂಭಗಳು



ಸೂಳಿಭಾವಿಯ ಬಾದಾಮಿ ಚಾಲುಕ್ಯರ ಕಾಲದ ಪ್ರತೋಳಿ ( ಲೇಖನ – ೧೮)



ದಕ್ಷಿಣ ದ್ವಾರಬಂಧದ ಮೇಲಣ ಕೂಟ – ಪಂಜರ – ಶಾಲಗಳ ಸಾಲು.
ಮಧ್ಯದಲ್ಲಿರುವುದು ಆದಿತ್ಯನ ಚಿಕಣಿ ಪ್ರತಿಮೆ



ಪ್ರತೋಳಿಯ ಮಂಟಪದ ದಕ್ಷಿಣ ದ್ವಾರಬಂಧ ಮತ್ತು
ಅದರ ಮೇಲಣ ಕೂಟ – ಪಂಜರ– ಶಾಲಗಳ ಸಾಲು



ಉತ್ತರ ದ್ವಾರಬಂಧದ ಮೇಲಣ – ವೃಷಭಾರೂಢ ಶಿವ, ಹಂಸಾರೂಢ ಬ್ರಹ್ಮ
ಮತ್ತು ಗರುಡಾರೂಢ ವಿಷ್ಣು ಶಿಲ್ಪ ಪಟ್ಟಿಕೆ



ಐಹೊಳೆಯ ದುರ್ಗದ ಗುಡಿಯ ಸಭಾಮಂಟಪದ ದ್ವಾರಬಂಧದ ಮೇಲಣ
ಕೂಟ – ಪಂಜರ – ಶಾಲಗಳ ಸಾಲು ಹಾಗೂ ಮಧ್ಯ ಶಾಲದಲ್ಲಿರುವ ಆದಿತ್ಯ
ಮತ್ತು ಬ್ರಹ್ಮ ದೇವತೆಗಳ ಚಿಕಣಿ ಪ್ರತಿಮೆಗಳು



ಸರೂರಿನ ರೇವಣಸಿದ್ಧ ದೇವಾಲಯದ ಐದು ಗರ್ಭಗೃಹ ಶಿಖರಗಳಲ್ಲಿ ಮೂರು
ಶಿಖರವಿರುವ ಪಾರ್ಶ್ವದ ಚಿತ್ರ (ಲೇಖನ – ೧೯)



ಪ್ರಾಣಾರ್ಪಣೆ ಮಾಡಿಕೊಳ್ಳುತ್ತಿರುವ
ಮಹಿಳೆಯ ಚಿತ್ರ



ದೇವಾಲಯ ಪಕ್ಕದ ಗುಡ್ಡದ ಮೇಲೆ ತೈಲಾಭಿಷೇಕಕ್ಕಾಗಿ ನಿರ್ಮಿಸಿರುವ
ತೊಟ್ಟಿಯ ಚಿತ್ರ



ದೇವಾಲಯದ ಬಳಿಯಿರುವ
ನೂರಾರು ಸಮಾಧಿಗಳ ನೋಟ



ಪಂಡಿತ ಶಿವನಾಥ ಶಾಸ್ತ್ರಿ (ಲೇಖನ – ೩೩)



ಸರ್ ಆರ್ಕಾಟ್ ನಾರಾಯಣಸ್ವಾಮಿ ಮುದಲಿಯರ್



ಡಬ್ಲ್ಯು. ಎಚ್. ಹನುಮಂತಪ್ಪ



ಬೆಂಗಳೂರಿನಲ್ಲಿರುವ ಬ್ರಹ್ಮಸಮಾಜ

ಡಾ॥ ಎಂ. ಎಸ್. ಕೃಷ್ಣಮೂರ್ತಿ

# ಕುಂತಿಬೆಟ್ಟದ ಪ್ರಾಕ್ತನಾನ್ವೇಷಣೆ : ಒಂದು ಟಿಪ್ಪಣಿ

ಫ್ರೆಂಚ್‌ರಾಕ್ಸ್[1] ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದ ಕುಂತಿಬೆಟ್ಟವು ನೆಲಸಿರುವುದು ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ದೇವರಾಯನಕೊಪ್ಪಲು ಗ್ರಾಮದ ಸರಹದ್ದಿನಲ್ಲಿ ; ಪಾಂಡವಪುರದ ಪೂರ್ವಕ್ಕೆ ಒಂದೂವರೆ ಕಿಲೋಮೀಟರ್ ದೂರದಲ್ಲಿ. ಪಾಂಡವಪುರದ ಮೊದಲಿನ ಹೆಸರು ಹಿರೋಡೆ ಎಂದು. ಸಾಂಪ್ರದಾಯಿಕವಾಗಿ ಇದು ಮಹಾಭಾರತದ ಕಾಲಕ್ಕೆ ಸಂಬಂಧಿಸಿದೆ. ಐತಿಹ್ಯದ ಪ್ರಕಾರ, ಬಕಾಸುರನು ಇದರ ಸಮೀಪದಲ್ಲಿಯೇ ವಾಸಿಸುತ್ತಿದ್ದನು. ಅವನ ನಿತ್ಯಾಹಾರವನ್ನು ಈ ಊರಿನಿಂದಲೂ ಇದರ ಸಮೀಪದ ಚಿಕ್ಕಾಡೆ ಎಂಬ ಹಳ್ಳಿಯಿಂದಲೂ ಕಳುಹಿಸಿಕೊಡಲಾಗುತ್ತಿದ್ದಿತು. ತಮ್ಮ ವನವಾಸದ ಅವಧಿಯಲ್ಲಿ ಪಾಂಡವರು ಇತ್ತ ಬಂದು ಇಲ್ಲಿ ಸ್ವಲ್ಪ ಕಾಲ ನೆಲಸಿರುವಾಗ, ಭೀಮನು ಬಕಾಸುರನನ್ನು ಕೊಂದನಂತೆ. ಪಾಂಡವರನ್ನು ಹೀಗೆ ತನ್ನ ಹಿನ್ನೆಲೆಯಲ್ಲಿ ಹೊಂದಿರುವ ಇಲ್ಲಿಯ ಬೆಟ್ಟವು ಕುಂತಿಬೆಟ್ಟವೆಂದು ಕರೆಯಲ್ಪಟ್ಟು, ಮಹಾಭಾರತದೊಡನೆ ತನ್ನ ಸಂಬಂಧವನ್ನು ಸ್ಥಾಪಿಸಿಕೊಂಡಿದೆ.

ಕುಂತಿಬೆಟ್ಟವು ಸಮುದ್ರಮಟ್ಟಕ್ಕೆ ೨೮೮೨ ಅಡಿಗಳಷ್ಟು ಎತ್ತರವಿದ್ದು, ಉತ್ತರದಿಂದ ದಕ್ಷಿಣಕ್ಕೆ ಸಾಗಿದೆ. ಈ ಬೆಟ್ಟವು ನಡುವೆಯಿರುವ ಚಿಕ್ಕ ಕೂಡೇಣಿನಿಂದ ಬೇರ್ಪಟ್ಟು ಎರಡು ಪ್ರತ್ಯೇಕ ಶಿಖರಗಳಿಂದ ಕೂಡಿದೆ. ಅವುಗಳಿಗೆ ಅಕ್ಕತಂಗಿಬೆಟ್ಟ(ಕುಂತಿಬೆಟ್ಟ) ಮತ್ತು ವನಕೆ ಬೆಟ್ಟವೆಂದು ಹೆಸರುಗಳಿವೆ. ಬೆಟ್ಟವು ಬೃಹದಾಕಾರದ ಸಹಜ ಗ್ರ್ಯಾನೈಟ್ ಬಂಡೆಗಳಿಂದ ಆವೃತ್ತವಾಗಿದ್ದು, ಕಡಿದಾದ ಪ್ರಪಾತಗಳಿಂದಲೂ ಕಲ್ಲಾಸರೆಗಳಿಂದಲೂ ಪ್ರಕೃತಿನಿರ್ಮಿತ ಗುಹೆಗಳಿಂದಲೂ ತುಂಬಿದೆ.

ಕಳೆದ ಶತಮಾನದ ಕಡೆಯ ಪಾದದಲ್ಲಿ ರಾಬರ್ಟ್ ಬ್ರೂಸ್‌ಫುಟ್[2] ಈ ಪ್ರದೇಶದಲ್ಲಿ ಪರಿವೀಕ್ಷಣ ಕಾರ್ಯವನ್ನು ಕೈಗೊಂಡು ನವಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳ ಅವಶೇಷಗಳನ್ನು ಶೋಧಿಸಿದನು. ಈ ಶತಮಾನದ ಆದಿಭಾಗದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ನಿರ್ಮಿಸಲಾದ ಅಣೆಕಟ್ಟಿನಿಂದಾಗಿ ಈ ಪ್ರದೇಶದ ಬಾಹ್ಯ ಭೂರಚನೆಯು ಸಂಪೂರ್ಣವಾಗಿ ಬದಲಾಯಿತು. ಬೆಟ್ಟದ ಪಶ್ಚಿಮಭಾಗದ ಬುಡದಲ್ಲಿರುವ ಸಮತಟ್ಟಾದ ಭೂಪ್ರದೇಶವು ಫಲವತ್ತಾದ ಮತ್ತು ಹಸಿರುರಾಜಿಯಿಂದ ಕೂಡಿದ ಭತ್ತದ ಮತ್ತು ಕಬ್ಬಿನ ಗದ್ದೆಗಳಾಗಿ ಪರಿವರ್ತನೆಗೊಂಡಿತು. ಹಾಗೆಯೇ, ಬೆಟ್ಟದ ಪೂರ್ವ ಮತ್ತು ದಕ್ಷಿಣದಿಕ್ಕಿನ ವಿಶಾಲ ಭೂಪ್ರದೇಶಗಳಲ್ಲಿ ಒಣಬೇಸಾಯವನ್ನು ಕೈಗೊಳ್ಳಲಾಗಿದೆ. ಉತ್ತರದಿಕ್ಕಿನ ಪ್ರದೇಶವನ್ನು ದೊಡ್ಡದಾದ ಕೆರೆಯು ಆವರಿಸಿಕೊಂಡಿದೆ.

1. ಟಿಪ್ಪುಸುಲ್ತಾನನ ಕಾಲದಲ್ಲಿ ಈ ಭಾಗದಲ್ಲಿ ಫ್ರೆಂಚ್ ಸೇನೆಯು ಬೀಡುಬಿಟ್ಟಿದ್ದರಿಂದ ಈ ಹೆಸರು ಬಂದಿತು.
2. *The Foote Collections of Pre-historic and Proto-historic Antiquities,* Madras Government Museum, Madras, 1916, pp. 73—74

ಈಚೆಗೆ ನಾನು ಕುಂತಿಬೆಟ್ಟ ಮತ್ತು ಪರಿಸರದಲ್ಲಿ ವ್ಯಾಪಕ ಪರಿವೀಕ್ಷಣ ಕಾರ್ಯವನ್ನು ಕೈಗೊಂಡಿದ್ದೆನು. ನನ್ನ ಪರಿಶೀಲನೆಯಲ್ಲಿ ಈ ಪ್ರದೇಶದವರಿಗೆ ಈವರೆಗೆ ಪರಿಚಿತವಲ್ಲದ ಸಂಸ್ಕೃತಿಗಳ ಅವಶೇಷಗಳನ್ನು ಸಂಗ್ರಹಿಸಿಕೊಂಡೆನು. ಬೆಟ್ಟದ ಪೂರ್ವದಿಕ್ಕಿನ ಅಡಿಯಲ್ಲಿ ನಾನು ಆದಿಶಿಲಾಯುಗದ ಕೆಲವು ಉಪಕರಣಗಳನ್ನು ಸಂಗ್ರಹಿಸಿದೆನು. ಬೆಟ್ಟದ ಪಶ್ಚಿಮ ತಪ್ಪಲಿನಲ್ಲಿರುವ ಕೆಲವು ಎಕರೆಗಳಷ್ಟು ಖುಷ್ಕಿಭೂಮಿಯು ಮಾನವನ ವಾಸದ ನೆಲೆಯಾಗಿದ್ದಿತೆಂಬ ಕುರುಹುಗಳನ್ನು ಹೊಂದಿದ್ದು, ಈ ಭಾಗವೇ ಪ್ರಾಕ್ತನಾನ್ವೇಷಣೆಗೆ ಅನುಕೂಲಕರವಾಗಿದೆ. ಈ ನೆಲೆಯು ಪರಿಸರದಲ್ಲಿರುವ ಗದ್ದೆಗಳ ಭೂಪ್ರದೇಶಕ್ಕಿಂತ ಎತ್ತರದಲ್ಲಿದೆ. ಈ ಭೂಮಿಯಲ್ಲಿ ಒಣಬೇಸಾಯ ನಡೆಯುತ್ತಿದ್ದರೂ ಇಲ್ಲಿ ಸಾಕಷ್ಟು ಪ್ರಮಾಣದಲ್ಲಿ ಮಡಕೆ ಚೂರುಗಳೂ ಇವುಗಳೊಡನೆ ಬಳೆಯ ಚೂರುಗಳೂ ಕವಡೆಗಳೂ ಮತ್ತಿತರ ಪ್ರಾಚೀನ ವಸ್ತುಗಳೂ ದೊರೆಯುತ್ತವೆ. ಇಲ್ಲಿ ಉತ್ಖನನ ಕಾರ್ಯ ನಡೆಸಿದರೆ ಸಾಕಷ್ಟು ಉತ್ತಮ ಫಲಿತಾಂಶ ದೊರೆಯಬಹುದು.

ಈ ಪರಿಸರದ ಪಶ್ಚಿಮಭಾಗದಲ್ಲಿರುವ ಬೂದಿ ಮಿಶ್ರಿತ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸಲು ರೈತರು ಸಾಕಷ್ಟು ಅಗೆದಿದ್ದು, ಇಲ್ಲಿಯೂ ಮಡಕೆಯ ಚೂರುಗಳು, ವಿವಿಧ ಗಾತ್ರದ ಮೂಳೆಯ ತುಂಡುಗಳು ಮತ್ತಿತರ ವಸ್ತುಗಳು ಕಂಡುಬರುತ್ತವೆ. ಇಲ್ಲಿಯ ಬೂದಿಮಿಶ್ರಿತ ಮಣ್ಣಿನ ದಿಬ್ಬವು ಸುಮಾರು ಐದರಿಂದ ಎಂಟು ಅಡಿಗಳಷ್ಟು ಎತ್ತರವಾಗಿದೆ. ಈ ಸಂಗ್ರಹವು ಉತ್ತರಕರ್ನಾಟಕದ ನವಶಿಲಾಯುಗದ ಬೂದಿದಿಬ್ಬಗಳನ್ನು ನೆನಪಿಗೆ ತರುತ್ತದೆ. ಇಲ್ಲಿ ದೊರೆತಿರುವ ಮಡಕೆಗಳು ಬೃಹತ್‌ಶಿಲಾಯುಗ ಮತ್ತು ಆದಿಐತಿಹಾಸಿಕ ಯುಗದ ಮಡಕೆಗಳನ್ನು ಒಳಗೊಂಡಿವೆ.

ಬೆಟ್ಟವನ್ನು ತಾಕಿದಂತಿರುವ ಪೂರ್ವದಿಕ್ಕಿನ ನಿವೇಶನದಲ್ಲಿ ಜೇಡಿಮಣ್ಣು ಸಂಗ್ರಹಗೊಂಡಿದ್ದು, ಗ್ರಾಮಸ್ಥರು ಈ ಮಣ್ಣನ್ನು ಇಟ್ಟಿಗೆ ತಯಾರಿಸಲು ಅಗೆದಿರುವರು. ಇಲ್ಲಿಯೇ, ಮಣ್ಣನ್ನು ಹದಗೊಳಿಸುವಾಗ ದೊರೆತ ಮಡಕೆಯ ಚೂರುಗಳು ಮತ್ತು ಶಿಲಾಯುಧಗಳನ್ನು ಎಸೆದಿದ್ದು ಅಂತಹ ಕೆಲವನ್ನು ನಾನು ಸಂಗ್ರಹಿಸಿದೆನು. ಈ ಬಗೆಯ ಮಡಕೆಯ ಚೂರುಗಳು ನವಶಿಲಾಯುಗ, ಬೃಹತ್‌ಶಿಲಾಯುಗ ಮತ್ತು ಇತಿಹಾಸಾರಂಭದ ಯುಗಗಳಿಗೆ ಸೇರಿದಂತಹವು. ಶಿಲಾಯುಧಗಳಲ್ಲಿ ಬಹುಪಾಲು ಕೈಗೊಡ್ಡಲಿ ಮತ್ತು ಚಾಕುಗಳು.

ಬೆಟ್ಟದಲ್ಲಿ ಹಲವಾರು ಕಲ್ಲಾಸರೆ ಮತ್ತು ಪ್ರಕೃತಿ ನಿರ್ಮಿತ ಗುಹೆಗಳಿವೆ. ಇವು ಪ್ರಾಚೀನ ಮಾನವನ ವಾಸಕ್ಕೆ ಅನುಕೂಲವಾಗಿರುವಂತಹವು. ಇಲ್ಲಿಯ ಗುಹೆಯೊಂದರಲ್ಲಿ ನನಗೆ ಆದಿಶಿಲಾಯುಗದ ವಸ್ತು ಮತ್ತು ನವಶಿಲಾಯುಗದ ಕುಡಿಕೆಯ ಚೂರುಗಳು ದೊರೆತವು. ಕೆಲವು ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳಿರುವ ಕುರುಹುಗಳೂ ಕಂಡುಬಂದವು. ನೈಸರ್ಗಿಕ ಪರಿಣಾಮಗಳಿಂದ ಅವು ಮಾಸಲಾಗಿ ಗುರುತು ಹಿಡಿಯಲಾಗದಷ್ಟು ಅಳಿಸಿ ಹೋಗಿವೆ.

**ಅವಶೇಷಗಳು**

**ಆದಿಶಿಲಾಯುಗ :** ಈ ಬೆಟ್ಟದಲ್ಲಿ ಆದಿಶಿಲಾಯುಗಪೂರ್ವದ ಮತ್ತು ಮಧ್ಯಆದಿಶಿಲಾಯುಗದ ಕಲ್ಲಿನ ಉಪಕರಣಗಳು ಕಂಡುಬಂದಿವೆ. ಅವುಗಳೆಂದರೆ, ಕೈಗೊಡ್ಡಲಿ, ಸ್ಕ್ರೇಪರ್, ಡಿಸ್ಕಾಯ್ಡ್ ಮತ್ತು ಫ್ಲೇಕ್‌ಗಳು. ಕೈಗೊಡ್ಡಲಿಗಳನ್ನು ಬೆಣಚುಕಲ್ಲಿನಿಂದ ತಯಾರಿಸಿದ್ದು, ಅವು ಗಾತ್ರದಲ್ಲಿ ಮೂರು ಅಂಗುಲದಿಂದ ಐದು ಅಂಗುಲದವರೆಗೂ ಇವೆ. ಈ ಆಯುಧಗಳನ್ನು ತರುವಾಯದಲ್ಲಿ ಮತ್ತೊಮ್ಮೆ ಉಜ್ಜಿರುವುದು ಗೋಚರಿಸುತ್ತದೆ.

ಇಲ್ಲಿಯ ಬೆಟ್ಟದಲ್ಲಿ ವಿಪುಲವಾಗಿ ದೊರೆಯುವ ಅಗ್ನಿಶಿಲೆಯಲ್ಲಿ ತಯಾರುಮಾಡಿದ ಸ್ಕ್ರೇಪರ್ ದೊರೆತಿದ್ದು, ಇದರಲ್ಲಿ ಕೆಲವೇ ಚಕ್ಕೆಗಳನ್ನು ತೆಗೆಯಲಾಗಿದೆ ಹಾಗೂ ಇದರ ಉಳಿದ ನಯವಾದ ಮೈಯನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಇದೇ ಶಿಲಾವರ್ಗಕ್ಕೆ ಸೇರಿದ ಹಾಗೂ ಎಲ್ಲ ಮಗ್ಗುಲುಗಳಲ್ಲೂ ಕೆತ್ತಿದ ನಾಲ್ಕು ಅಂಗುಲ ವ್ಯಾಸದ ಡಿಸ್ಕಾಯ್ಡ್ ಸಹಾ ದೊರೆತಿದೆ. ಇದರ ಒಂದು ಪಕ್ಕವನ್ನು ವಕ್ರವಕ್ರವಾಗಿ ಕೆತ್ತಲಾಗಿರುವುದರಿಂದ ಇದು 'ಅಬ್ಬೆವಿಲಿಯನ್' ವಿಧದ ಕೃತಿಗಳನ್ನು ನೆನಪಿಗೆ ತರುತ್ತದೆ.

ಆದಿಶಿಲಾಯುಗದ ಇತರ ಉಪಕರಣಗಳಲ್ಲಿ ಅಗ್ನಿ

ಶಿಲೆಯ ಕೋರ್‌ಗಳಿದ್ದು, ಇವುಗಳಿಂದಲೂ ಚಕ್ಕೆಗಳನ್ನು ತೆಗೆಯಲಾಗಿದೆ. ಇದೇ ಶಿಲೆಯ ಡೈಕ್‌ಗಳು ಈ ಪರಿಸರದಲ್ಲಿ ವಿಪುಲವಾಗಿದ್ದು, ಆದಿಮಾನವನು ಇವುಗಳನ್ನು ಫ್ಲೇಕ್ ಉಪಕರಣಗಳನ್ನು ತಯಾರಿಸಲು ಉಪಯೋಗಿಸಿಕೊಂಡಿರುವನು. ಈ ಉಪಕರಣಗಳು ನೀಳವಾಗಿ ಸೂಕ್ಷ್ಮಚಕ್ಕೆಗಳಿಂದ ಕೂಡಿದ್ದು, ಸುಂದರವಾಗಿರುವುವು. ಈ ಫ್ಲೇಕ್‌ಗಳು ಮತ್ತು ಕೋರ್‌ಗಳ ಕಾಲಮಾನವನ್ನು ಮಧ್ಯಆದಿಶಿಲಾಯುಗದವೆಂದು ತೋರಿಸಬಹುದು.

ಈ ವಸ್ತುಗಳಲ್ಲದೆ, ಅಗ್ನಿಶಿಲೆ ಮತ್ತು ಬೆಣಚುಕಲ್ಲುಗಳಲ್ಲಿ ಮಾಡಿದ ಕೆಲವು ಗುಂಡುಗಳೂ ದೊರೆತಿವೆ. ಆದಿಮಾನವನು ಇವುಗಳನ್ನು ಬಹುಶಃ ಕವಣೆಕಲ್ಲುಗಳನ್ನಾಗಿ ಬಳಸಿಕೊಂಡಿದ್ದಿರಬಹುದು.

ನವಶಿಲಾಯುಗ : ರಾಬರ್ಟ್ ಬ್ರೂಸ್‌ಫುಟ್ ಈ ಪರಿಸರದಲ್ಲಿ ನವಶಿಲಾಯುಗದ ಉಪಕರಣಗಳನ್ನು ಸಂಗ್ರಹಿಸಿದ್ದನು. ಹಾಗಿದ್ದರೂ ಆ ಸಂಸ್ಕೃತಿಗೆ ಸೇರಿದ ಒಂದೇ ಒಂದು ಕಲ್ಲುಗೊಡ್ಡಲಿಯೂ ನನ್ನ ಕಣ್ಣಿಗೆ ಬೀಳಲಿಲ್ಲ. ಇದಕ್ಕೆ ಕಾರಣವಾದರೂ, ಅತ್ಯಂತ ಪರಿಶ್ರಮದಿಂದ ತಯಾರಿಸಿ ಹೊಳಪನ್ನು ನೀಡಿದ ಸಾಧನಗಳಾದುದರಿಂದ ಅವುಗಳನ್ನು ಸ್ಥಳೀಯರು ಕುತೂಹಲದಿಂದ ಆಯ್ದು ಸಂಗ್ರಹಿಸಿಟ್ಟುಕೊಂಡಿರುವುದಾಗಿದೆ. ಅಲ್ಲದೆ, ಈ ಸಾಧನಗಳು ದೊರೆಯುವ ಪರಿಸರದಲ್ಲಿ ಬೇಸಾಯ ನಡೆಸುತ್ತಿರುವುದರಿಂದಲೂ ಅವು ದೊರೆಯದಂತಾಗಿವೆ ಎನ್ನಬಹುದು. ಆದಾಗ್ಯೂ ಮಡಕೆಗಳ ಕೆಲವು ಚೂರುಗಳು ಇಲ್ಲಿ ಕಂಡುಬಂದಿವೆ. ಇವು ಕೆಲವೇ ತುಣುಕುಗಳಿದ್ದರೂ ಇಲ್ಲಿ ನವಶಿಲಾಯುಗದ ಸಂಸ್ಕೃತಿಯು ಇದ್ದಿತೆಂಬುದನ್ನು ತೋರಿಸಿಕೊಡುತ್ತವೆ. ಇಲ್ಲಿಯ ಪರಿಸರದಲ್ಲೂ ಕಲ್ಲಾಸರೆಯ ನೆಲೆಗಳಲ್ಲೂ ಹೊಳಪುಳ್ಳ ಬೂದುಬಣ್ಣದ ಮಡಕೆ ಚೂರುಗಳು ಮತ್ತು ಮೇಲ್ಭಾಗದಲ್ಲಿ ಕೊಂಚ ಹೊಳಪು ಹೊಂದಿದ್ದು ಒಳಭಾಗದಲ್ಲಿ ಒರಟಾಗಿರುವ ರಚನೆಯುಳ್ಳ ಮಡಕೆ ಚೂರುಗಳು ಕಂಡುಬರುತ್ತವೆ. ಇವುಗಳಲ್ಲದೆ, ಬೂದಿಶಿಲೆಯಲ್ಲಿ ಸಿದ್ಧಪಡಿಸಲಾದ ಮತ್ತು ಮದುವಾದ ಕವಣೆಕಲ್ಲುಗಳೂ ದೊರೆತಿವೆ. ಕಲ್ಲುಗೊಡ್ಡಲಿಯೊಂದರ ತುಂಡಾಗಲೀ ಅಥವಾ ಕುಂಬಾರನು ಬಳಸಿರುವ ಹೊಳಪು ಕೊಡುವ ಕಲ್ಲು ತುಂಡಾಗಲೀ ಆಗಿರುವ ಹೊಳಪುಳ್ಳ ಮತ್ತು ಮೆದುವಾಗಿರುವ ಕಲ್ಲು ತುಂಡು ಸಹಾ ದೊರೆತಿದೆ.

ಬೃಹತ್‌ಶಿಲಾ ಸಂಸ್ಕೃತಿ : ಈ ಪರಿಸರದಲ್ಲಿ ಅಪಾರವಾಗಿ ಕಂಡುಬರುವ ಮಡಕೆಯ ಚೂರುಗಳಿಂದ ಈ ಸಂಸ್ಕೃತಿಯನ್ನು ಸಮರ್ಥಿಸಬಹುದಾಗಿದೆ. ಆದರೆ ಒಂದಾದರೂ ಬೃಹತ್‌ಶಿಲಾ ಸಮಾಧಿಯು ನನ್ನ ಕಣ್ಣಿಗೆ ಬೀಳಲಿಲ್ಲ. ಸಮಾಧಿಯ ಎಡೆಯು ಸಹಜವಾಗಿಯೇ ದೂರವಿರುತ್ತಿದ್ದುದರಿಂದಲೂ ಈಗ ಆ ಆವರಣವೆಲ್ಲ ಕೃಷಿಭೂಮಿಯಾಗಿರುವ ಕಾರಣದಿಂದಲೂ ಈ ಸಮಾಧಿಗಳು ನಾಶಗೊಂಡಿದ್ದಿರಬೇಕು.

ಈ ಸಂಸ್ಕೃತಿಯ ವಿಶಿಷ್ಟವೆನಿಸಿದ ಕಪ್ಪು ಮಡಕೆ, ಕಪ್ಪುಮಿಶ್ರಿತ ಕೆಂಪು ಮಡಕೆ ಮತ್ತು ಕೆಂಪು ಮಡಕೆಗಳನ್ನು ಈ ಭಾಗದಲ್ಲಿ ಸಾಕಷ್ಟು ನೋಡಬಹುದು. ಮಡಕೆಗಳನ್ನು ಚೆನ್ನಾಗಿ ಹದಮಾಡಿದ ಜೇಡಿಮಣ್ಣಿನಿಂದ ತಯಾರಿಸಲಾಗಿದೆ. ಇವುಗಳನ್ನು ಚೆನ್ನಾಗಿ ಸುಟ್ಟಿರುವುದರಿಂದ ಕೆಲವು ಮಡಕೆಗಳು ಸಾಕಷ್ಟು ಹೊಳಪುಳ್ಳದ್ದಾಗಿವೆ. ಅಲ್ಲದೆ, ಮಡಕೆಗಳು ಹಲವು ವಿಧವಾಗಿವೆ. ಕೆಳಮುಖವಾಗಿ ಬಾಗಿದ ಕಂಠವುಳ್ಳ ಬುಗುರಿಯಾಕಾರದ ಬೋಗುಣಿ, ಚಪ್ಪಟೆಯಾಕಾರದ ಹಾಗೂ ಲಂಬವಾಗಿರುವ ಕಂಠವುಳ್ಳ ಅಂತಹದೇ ಬೋಗುಣಿ, ದುಂಡುಕಂಠದ ಬೋಗುಣಿ, ತಟ್ಟೆ, ಲೋಟ, ವಿವಿಧ ಗಾತ್ರದ ಗಡಿಗೆ, ದುಂಡುತಳದ ಮತ್ತು ಹೊಳೆಯುವ ಅಗಲ ಬಾಯುಳ್ಳ ಸಣ್ಣ ಮಡಕೆ, ಮುಚ್ಚಳ, ಕುಂಭಗಳ ಕಾಲು, ಇತ್ಯಾದಿಗಳು ಇವುಗಳಲ್ಲಿ ಕೆಲವು. ಕೆಲವು ಮಡಕೆ ಚೂರುಗಳ ಮೇಲೆ ಈ ಯುಗದ ವಿಶಿಷ್ಟವೆನಿಸಿದ ಗ್ರಾಫಿಟಿ ಚಿಹ್ನೆಗಳು ಕಂಡುಬರುತ್ತವೆ.

ಇತಿಹಾಸಾರಂಭದ ಯುಗ : ಜನವಸತಿಯ ತಾಣವೆನಿಸಿದ ಈ ಪರಿಸರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಮಡಕೆಯ ಚೂರುಗಳು ದೊರಕುತ್ತಿದ್ದು, ಇತಿಹಾಸಾರಂಭ ಕಾಲದ ಮಾನವ ಬದುಕಿನ ವಿಶಿಷ್ಟತೆಯ ಕುರುಹುಗಳಾಗಿವೆ. ಅವುಗಳಲ್ಲಿ ಆಂಧ್ರಯುಗದ ಕಪ್ಪುಮಿಶ್ರಿತ ಕೆಂಪು ಮಡಕೆ, ಕೆಂಪು ಮಡಕೆ, ಕಪ್ಪು ಮಡಕೆ, ಕಂದು ಬಣ್ಣದ ಮಡಕೆ, ಬೂದುಬಣ್ಣದ ಮಡಕೆ, ರಸೆಟ್ ಲೇಪಿತ ಹಾಗೂ ಹೊಳಪುಳ್ಳ ಕೆಂಪು ಮಡಕೆ ಮತ್ತು ರೆಸೆಟ್ ಲೇಪಿತ ಕೇಯೊಲಿನ್‌ನಲ್ಲಿ ಚಿತ್ರಿಸಿದ ಮಡಕೆಗಳು ಮುಖ್ಯವಾದುವು. ಮಡಕೆ ಚೂರು, ಬೋಗುಣಿ, ತಟ್ಟೆ,

ಲೋಟ, ಮುಚ್ಚಳ, ಸಂಗ್ರಹಿಸುವ ಜಾಡಿ, ಕಾಲುಗಳುಳ್ಳ ಜಾಡಿ, ಇತ್ಯಾದಿಗಳೂ ಶೋಧಿತವಾಗಿವೆ. ಇವುಗಳಲ್ಲೆಲ್ಲ ಬಣ್ಣದಿಂದ ಚಿತ್ರಿತವಾದ ಮಡಕೆಗಳು ಗಮನಾರ್ಹವಾದುವು. ಕಪ್ಪುಮಿಶ್ರಿತ ಕೆಂಪುವರ್ಣದಿಂದ ಕೂಡಿದ ಈ ಮಡಕೆಗಳ ಮೇಲೆ ಕೆಯೋಲಿನ್‌ನಲ್ಲಿ ಚಿತ್ರಿಸಿದ ಕತ್ತರಿ ಗುರುತಿನ ಗೆರೆಗಳಿವೆ. ಈ ಮಡಕೆಗಳು ರಸೆಟ್ ಲೇಪಿತವಾಗಿದ್ದು, ಅವುಗಳ ಮೇಲೆ ವರ್ಣವನ್ನು ಬಳಿಯಲಾಗಿದೆ.

ಈ ಯುಗದ ಕೆಲವು ಮಡಕೆಗಳು ಹೊಂದಿರುವ ಅಲಂಕಾರಗಳಲ್ಲಿ ಅಡ್ಡಡ್ಡಲಾದ ಸಮಾನಾಂತರವಾದ ಮತ್ತು ಓರೆಯಾದ ಗೆರೆಗಳೂ ಚಿವುಟಿ ಮೂಡಿಸಲಾದ ಅಲಂಕಾರಗಳೂ ಮಡಿಕೆಯಾದ ಮೇಲ್ಮೈಯೂ ಗಮನಾರ್ಹವಾದುವು.

ಒಟ್ಟಿನಲ್ಲಿ, ಕುಂತಿಬೆಟ್ಟ ಮತ್ತು ಪರಿಸರವು ಮಂಡ್ಯ ಜಿಲ್ಲೆಯ ಪ್ರಾಕ್ಚಾರಿತ್ರಿಕ ನೆಲೆಗಳಲ್ಲಿ ಅತ್ಯಂತ ಉತ್ಕೃಷ್ಟವಾದುದೆಂದು ಹೇಳಬಹುದು. ಇಲ್ಲಿಯ ಅವಶೇಷಗಳು, ಈ ಎಡೆಯು ಆದಿಶಿಲಾಯುಗದಿಂದ ಇಂದಿನವರೆಗೆ ಸತತವಾಗಿ ಮಾನವನ ವಾಸಕ್ಕೆ ಯೋಗ್ಯವಾಗಿದ್ದಿತೆಂಬುದನ್ನು ಸಮರ್ಥಿಸುತ್ತವೆ. ಈಗಾಗಲೇ ಬೆಳಕಿಗೆ ಬಂದಿರುವ ದಕ್ಷಿಣಕರ್ನಾಟಕದ ರಾಮನಾಥಪುರ (ಹಾಸನ ಜಿಲ್ಲೆ), ಶಿವನಸಮುದ್ರ, ತಲಕಾಡು ಮತ್ತು ರಂಗನಾಥಪುರ (ಮೈಸೂರು ಜಿಲ್ಲೆ)ಗಳ ಆದಿಶಿಲಾಯುಗದ ನೆಲೆಗಳ ಸಾಲಿಗೆ ಈ ಎಡೆಯನ್ನೂ ಈಗ ಸೇರಿಸಬಹುದಾಗಿದೆ.

ಈಚೆಗೆ ಡಾ॥ ಬಿ. ಕೆ. ಗುರುರಾಜರಾವ್ ಅವರು ಮೈಸೂರು ನಗರದಲ್ಲಿ ದೊರೆತ ಮಧ್ಯಆದಿಶಿಲಾಯುಗಕ್ಕೆ ಸೇರಿದ ಕೆಲವು ಉಪಕರಣಗಳನ್ನು ಬೆಳಕಿಗೆ ತಂದಿದ್ದಾರೆ. ಹಾಗೆಯೇ, ಶ್ರೀರಂಗಪಟ್ಟಣದ ಸೂಕ್ಷ್ಮಶಿಲಾಯುಗದ ಫ್ಯಾಕ್ಟರಿಯ ಬಗೆಗೆ ಸಿ. ಮಹದೇವ ವರದಿ ಮಾಡಿದ್ದಾರೆ. ಇವುಗಳ ಹಿನ್ನೆಲೆಯಲ್ಲಿ ಮೈಸೂರು ಮತ್ತು ಮಂಡ್ಯ ಜಿಲ್ಲೆಯ ಕೆಲವು ಎಡೆಗಳು ಆದಿಶಿಲಾಯುಗಪೂರ್ವದಿಂದಲೂ ಮಾನವನ ವಾಸಕ್ಕೆ ಯೋಗ್ಯವಾಗಿದ್ದುವೆಂದು ಕುಂತಿಬೆಟ್ಟದ ಉದಾಹರಣೆಯೊಡನೆ ಹೇಳಬಹುದು. ಆದರೆ ಪ್ರಮುಖವಾಗಿ ಹೇಳಬೇಕಾದ ಮಾತೆಂದರೆ, ಕುಂತಿಬೆಟ್ಟವು ಆದಿಶಿಲಾಯುಗದಿಂದ ಇಂದಿನವರೆಗೆ ಅಳಿಯದ ಏಕಪ್ರಕಾರದ ಸಾಂಸ್ಕೃತಿಕ ಸನ್ನಿವೇಶವನ್ನು ಉಳಿಸಿಕೊಂಡು ಬಂದಿರುವಂತಹ ವಿರಳ ಎಡೆಯಾಗಿದೆ.

(ಕನ್ನಡಾನುವಾದ/ಲಕ್ಷ್ಮಣ್ ತೆಲಗಾವಿ)

ಜಿ. ಎನ್. ಶೇಟ್

# ಕದಂಬರ ಕಾಲದ ಪೆಟ್ಟಿಗೆತಲೆಕಟ್ಟಿನ ಲಿಪಿ : ಕೆಲವು ವಿಚಾರಗಳು

ಕ್ರಿಸ್ತಶಕ ಮೂರನೇ ಶತಮಾನದಿಂದ ಏಳನೇ ಶತಮಾನದವರೆಗಿನ ಬನವಾಸಿಯ ಕದಂಬರ ಆಳ್ವಿಕೆಯು, ಕರ್ನಾಟಕ ಇತಿಹಾಸವನ್ನು ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದೆ. ಇವರು ಶಾತವಾಹನರ ಪ್ರಾಬಲ್ಯ ಮತ್ತು ವೈಭವಗಳ ಉತ್ತರಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದವರು. ಈ ಕದಂಬರ ಆಳ್ವಿಕೆಯಲ್ಲಿ ಕರ್ನಾಟಕದ ಸಂಸ್ಕೃತಿಯು ಒಂದು ಹೊಸ ಮೈಲಿಗಲ್ಲನ್ನು ಸ್ಥಾಪಿಸಿತು. ಇವರು ರಾಜಕೀಯವಾಗಿ ಬಲಿಷ್ಠರಾದಾಗ ದಕ್ಷಿಣದಲ್ಲಿ ಪಲ್ಲವ ಮತ್ತು ಗಂಗರೂ ಉತ್ತರದಲ್ಲಿ ವಾಕಾಟಕರೂ ಸಮಕಾಲೀನರಾಗಿದ್ದು, ಇವರೊಂದಿಗೆ ಸ್ನೇಹದಿಂದಿದ್ದರು. ಈ ಸ್ನೇಹವು ವಾಕಾಟಕ ಮತ್ತು ಗುಪ್ತರೊಡನೆ ಬೆಳೆಸಿದ ವೈವಾಹಿಕ ಸಂಬಂಧದಿಂದ ಮತ್ತಷ್ಟು ಬಲಗೊಂಡಿತು. ಸಾಂಸ್ಕೃತಿಕ ಚರಿತ್ರೆಗೂ ಕದಂಬರು ತಮ್ಮದೇ ಕೊಡುಗೆ ನೀಡಿರುತ್ತಾರೆ.

ಕದಂಬರ ಶಾಸನಗಳ ವೈಶಿಷ್ಟ್ಯವೆಂದರೆ, ಪೆಟ್ಟಿಗೆ ತಲೆಕಟ್ಟಿನ ಲಿಪಿಗಳ ಬಳಕೆ. ಕದಂಬರ ಶಾಸನಗಳಲ್ಲಿಯ ಅಕ್ಷರಗಳು ತಲೆಯ ಮೇಲೆ ಪೆಟ್ಟಿಗೆಯನ್ನು ಹೋಲುವ ಚೌಕಾಕಾರವನ್ನು ಹೊಂದಿರುವುದರಿಂದ ಇವನ್ನು ಪೆಟ್ಟಿಗೆ ತಲೆಕಟ್ಟಿನ ಲಿಪಿಗಳೆಂದು ಕರೆಯುತ್ತಾರೆ. ಈ ಲಿಪಿಗಳು ಇವರ ಸಮಕಾಲೀನರಾದ ವಾಕಾಟಕರ ಮತ್ತು ಮಧ್ಯ ಭಾರತದ, ಅದರಲ್ಲೂ ಮುಖ್ಯವಾಗಿ ಮಧ್ಯಪ್ರದೇಶದ ಅಕ್ಷರಗಳ ಲಕ್ಷಣಗಳನ್ನು ಹೊಂದಿವೆ. ವಾಕಾಟಕ ಮತ್ತು ಕದಂಬರ ಶಾಸನಗಳಲ್ಲಿಯ ಪೇಟಿಕಾಶಿರದ ಅಕ್ಷರಗಳಲ್ಲಿಯೂ ಪೆಟ್ಟಿಗೆಯ ಒಳಭಾಗವನ್ನು ಕೆತ್ತಿ ಆಳ ಮಾಡಿದ್ದರೆ, ವಾಕಾಟಕರ ಬರಹದಲ್ಲಿ ಗೆರೆಗಳಲ್ಲಿ ಮಾತ್ರವೇ ಪೆಟ್ಟಿಗೆಯನ್ನು ತೋರಿಸಿರುತ್ತಾರೆ. ಈ ಹೊಸ ಬಗೆಯ ಪೇಟಿಕಾಶಿರದ ಅಕ್ಷರಗಳನ್ನು ಯಾರು ಅನ್ವೇಷಿಸಿದರು ಅಥವಾ ಯಾರು ಯಾರಿಂದ ಸ್ವೀಕರಿಸಿದರೆಂಬ ಪ್ರಶ್ನೆಗೆ ಉತ್ತರ ಹುಡುಕುವುದು ಕಷ್ಟ.

ಆದಾಗ್ಯೂ ಪೇಟಿಕಾಶಿರದ ಅಕ್ಷರ ಹೇಗೆ ರೂಢಿಗೆ ಬಂದಿತೆಂಬ ಪ್ರಶ್ನೆಯ ಕಡೆಗೆ ನಾವು ಮೊದಲು ಗಮನ ಹರಿಸೋಣ. ಸಾಹಿತ್ಯಕ ಅಥವಾ ಇತರೆ ಬರವಣಿಗೆಗಳಿಗೆ ಈ ಲಿಪಿಯನ್ನು ವಿಪುಲವಾಗಿ ಬಳಸತೊಡಗಿದ್ದುದರಿಂದ ಈ ಲಿಪಿಯ ಬೆಳವಣಿಗೆಗೆ ಹೆಚ್ಚಿನ ಕೊಡುಗೆ ನೀಡಿದಂತಾಗಿದೆ. ಭೂರ್ಜಪತ್ರ ಅಥವಾ ಬಟ್ಟೆಯ ಮೇಲೆ ಮಸಿಯಂತಹ ದ್ರವದಿಂದ ಬರೆದಾಗ ಯಾವುದೇ ಅಕ್ಷರದ ಆರಂಭದ ಭಾಗವು ದಟ್ಟವಾಗಿರುವುದುಂಟು. ಹೀಗೆ ದಟ್ಟವಾಗಿ ಬಣ್ಣ ಅಥವಾ ಮಸಿಬಿದ್ದ ಅಕ್ಷರಭಾಗಗಳನ್ನು ಆಕಸ್ಮಿಕವೆಂಬಂತೆ ಭಾವಿಸದೆ ಅನುಕರಣೆ ಮಾಡಿದುದರಿಂದ ಮುಂದೆ ಬುದ್ಧಿಪೂರ್ವಕವಾಗಿ ಅಕ್ಷರದ ಮೇಲ್ಭಾಗವನ್ನು ದಟ್ಟವಾಗಿಸಿದರು. ಬಹುಶಃ ಈ ಕಾರಣದಿಂದಲೇ ಶಾತವಾಹನರ ಕಾಲದ ಅಕ್ಷರಗಳಲ್ಲಿ ತ್ರಿಕೋನಾಕಾರದ ತಲೆಕಟ್ಟು ರೂಢಿಗೆ ಬಂದಿತು. ಇದರ ಮುಂದಿನ ವಿಸ್ತರಣೆಯಾಗಿ ಅಕ್ಷರದ ಮೇಲ್ಭಾಗಗಳನ್ನು ಅತಿಶಯವಾಗಿ ತಿದ್ದಿದುದರ ಪರಿಣಾಮವಾಗಿ ಪೇಟಿಕಾಶಿರದ ಅಕ್ಷರಗಳ ಮೂಡುವಿಕೆಗೆ ಕಾರಣವಾಯಿತು. ಇದು ನಿಜವಾದಲ್ಲಿ, ಮಧ್ಯಭಾರತದ ಭಾಗದಲ್ಲಿಯೇ ಪೇಟಿಕಾಶಿರದ ಮೂಲವನ್ನು ಹುಡುಕಬಹುದಾಗಿದೆ. ಸಾಮಾನ್ಯವಾಗಿ ದಕ್ಷಿಣದಲ್ಲಿ ಬರವಣಿಗೆಯ ಮಾಧ್ಯಮವಾಗಿ ತಾಡಪತ್ರದ ಮೇಲೆ ಮೊನಚಾದ ಕಂಠದಿಂದ ಕೊರೆಯುತ್ತಿದ್ದರು. ಆದರೆ

ಉತ್ತರದಲ್ಲಿ ಮಸಿಯಲ್ಲಿ ಬರೆಯುತ್ತಿದ್ದುದನ್ನು ಗುಪ್ತರ ಕಾಲದ ಬೋವರ್ ಹಸ್ತಪ್ರತಿಯಲ್ಲಿಯೇ ಕಾಣಬಹುದಾಗಿದೆ. ಆದ್ದರಿಂದ ಪೇಟಿಕಾಶಿರದ ಲಿಪಿ ಇಂತಹ ಕಡೆಯೇ ಉದಿಸಿತೆಂಬುದನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗದಿದ್ದರೂ ಅದು ಉತ್ತರಭಾರತದಲ್ಲಿ ಉದಿಸಿರಬಹುದು. ಮುಂದೆ ಇದು ದಕ್ಷಿಣದಲ್ಲಿ ಸೌಂದರ್ಯೀಕರಣಗೊಂಡು ಬಳಕೆಗೆ ಬಂದಿತು.

ಅ ಕ ರ ಥ ಬ ಪ ವ ಮ ಲ

ಕದಂಬ ಶಾಂತಿವರ್ಮನ ತಾಳಗುಂದಶಾಸನ, ಮೃಗೇಶವರ್ಮನ ಬನವಾಸಿ ಶಾಸನ ಮತ್ತು ರವಿವರ್ಮನ ಗುಡ್ನಾಪುರ ಶಾಸನಗಳಲ್ಲಿ ನಾವು ಲಿಪಿವೈಶಿಷ್ಟ್ಯದ ಗಹನತೆ ಮತ್ತು ಕಲಾತ್ಮಕ ಬರವಣಿಗೆಯನ್ನು ಕಾಣಬಹುದಾಗಿದೆ. 'ಅ', 'ಕ', 'ರ' ಅಕ್ಷರಗಳಲ್ಲಿ ಕೆಳಮುಖವಾಗಿ ಬೆಳೆದ ಗೆರೆಗಳು ಮೇಲ್ಮುಖವಾಗಿ ತಿರುಗಿರುವ ಲಕ್ಷಣಗಳನ್ನು ಕಾಣಬಹುದಾಗಿದೆ. 'ಬ' ಮತ್ತು 'ಪ'ಗಳಲ್ಲಿ ಎಡಗಡೆಯ ಗೆರೆಯು ಮಧ್ಯದಲ್ಲಿ ಬಾಗಿದೆ. 'ಥ' ಅಕ್ಷರವು ಕೇವಲ ವೃತ್ತಾಕಾರದಲ್ಲಿರದೆ ಚಪ್ಪಟೆ ತಳವನ್ನು ಹೊಂದಿ ಉದ್ದಕ್ಕೆ ಬೆಳೆದು ಮಧ್ಯದಲ್ಲಿ ಕಚ್ಚಿನಂತಹ ಚುಕ್ಕೆಯನ್ನು ಹೊಂದಿದೆ. 'ವ' ಮತ್ತು 'ಮ' ಅಕ್ಷರಗಳ ವೃತ್ತಾಕಾರವು ತಳಗಡೆ ಬಾಗಿದ ಗೆರೆಯನ್ನು ಹೊಂದಿದ್ದು, ಬಲಗಡೆಯಿಂದ ಮೇಲಕ್ಕೇರಿ ಪೇಟಿಕಾಶಿರದ ಅಲಂಕಾರದಿಂದ ಕೂಡಿದೆ. 'ಲ'ಕಾರದ ಬಲಭಾಗದ ಗೆರೆಯು ಮೇಲೇರಿ ಅಕ್ಷರದ ಕೆಳಭಾಗವನ್ನು ಮುಟ್ಟುವಷ್ಟು ಬಾಗಿದೆ. ಕದಂಬರ ಶಾಸನಗಳು ಇಂತಹ ಲಿಪಿ ಬದಲಾವಣೆಗಳಿಗೆ ಉತ್ತಮ ಉದಾಹರಣೆಗಳಾಗಿವೆ.

ಕದಂಬರ ಶಾಸನಗಳನ್ನು ಪರೀಕ್ಷಿಸಿದರೆ, ನಿಧಾನವಾಗಿ ಯಾದರೂ ಲಿಪಿಗಳು ವಿಕಾಸ ಹೊಂದಿರುವುದನ್ನು ಕಾಣಬಹುದು. ಪೇಟಿಕಾಶಿರದ ಲಿಪಿಗಳ ಕಾರಣದಿಂದಲೇ ಈ ಬೆಳವಣಿಗೆಯಾಯಿತೆಂದು ನಿರ್ಧರಿಸುವುದು ಕಷ್ಟ. ಏಕೆಂದರೆ ಪೇಟಿಕಾಶಿರದ ಲಿಪಿಯನ್ನು ಬಳಸಿರುವ ಕದಂಬರ ಶಾಸನಗಳು ೫೫ ರಿಂದ ೬೦ರವರೆಗೆ ಮಾತ್ರ ದೊರೆತಿವೆ. ಆದರೆ ಶಿಲಾಶಾಸನಗಳಲ್ಲಿ ಕಂಡುಬರುವ ಪೆಟ್ಟಿಗೆಯಾಕಾರದ ಲಿಪಿಗಳು ಲಿಪಿವಿನ್ಯಾಸವನ್ನು ನಿರ್ಧರಿಸಲು ಖಂಡಿತವಾಗಿಯೂ ಸಹಾಯಕವಾಗಿವೆ. ಇಂತಹ ಸುಂದರ ಬರವಣಿಗೆಯು ತೆಗೆದುಕೊಂಡಿರುವ ಕಾಲವನ್ನು ಗಣನೆಗೆ ತೆಗೆದುಕೊಂಡರೆ, ಸಾಮಾನ್ಯ ಉದ್ದೇಶಗಳಿಗೆ, ದೈನಂದಿನ ರಾಜ್ಯಾಡಳಿತದ ದಾಖಲೆಗಳು, ಕಾವ್ಯ, ನಾಟಕ ಇತ್ಯಾದಿ ಕಾವ್ಯಾತ್ಮಕವಾದ ಹಸ್ತಪ್ರತಿಗಳನ್ನು ನಕಲುಮಾಡುವುದು ಮುಂತಾದ ಕೆಲಸಗಳಲ್ಲಿ ಸಾಮಾನ್ಯವಾಗಿ ಇದೇ ಲಿಪಿಯನ್ನು ಬಳಸುತ್ತಿದ್ದರೆಂದು ಭಾವಿಸಲಾಗದು. ಇದಕ್ಕೆ ಭಿನ್ನವಾಗಿ, ಇದರೊಂದಿಗೇ ಸಾಮಾನ್ಯ ಬರವಣಿಗೆಗಾಗಿ ಒರಟು ರೀತಿಯ ಬರವಣಿಗೆಯೂ ಬಳಕೆಯಲ್ಲಿದ್ದು, ಅದು ಸಹಾ ಆ ಕಾಲದ ಲಿಪಿಯ ಬದಲಾವಣೆಗೆ ಸಾಕಷ್ಟು ಕೊಡುಗೆಯನ್ನು ನೀಡಿದೆಯೆನ್ನಬಹುದು. ಈ ಎಲ್ಲಾ ಬದಲಾವಣೆಗಳು ಕದಂಬರ ಪೇಟಿಕಾಶಿರದ ಲಿಪಿಗಳಲ್ಲಿ ಎದ್ದು ಕಾಣುತ್ತವೆ.

ಒಟ್ಟಿನಲ್ಲಿ, ಮೇಲಿನ ಚರ್ಚೆಯಿಂದ ಈ ಕೆಳಗಿನಂತೆ ಎರಡು ಗಮನಾರ್ಹ ಅಂಶಗಳನ್ನು ಪ್ರಸ್ತಾಪಿಸಬಹುದು:

ಅ) ಪೇಟಿಕಾಶಿರದ ಲಿಪಿಗಳು ಬಹುಶಃ ಭಾರತದ ಯಾವುದೋ ಭಾಗದಲ್ಲಿ ಉದಯಿಸಿ ವಾಕಾಟಕ ಮತ್ತು ಕದಂಬರ ಆಶ್ರಯದಲ್ಲಿ ದಕ್ಷಿಣದಲ್ಲಿ ಬಳಕೆಗೆ ಬಂದವು.

ಆ) ಕರ್ನಾಟಕದ ಲಿಪಿ ಬೆಳವಣಿಗೆಯಲ್ಲಿ ಈ ಪೇಟಿಕಾ ಶಿರದ ಲಿಪಿಯ ಯಾವ ಕೊಡುಗೆಯೂ ಇಲ್ಲ. ಕದಂಬರ ಕಾಲದ ಶಾಸನಗಳಲ್ಲಿ ಗಮನಿಸಲಾದ ಬದಲಾವಣೆಗಳು ಸಾಮಾನ್ಯ ಬಳಕೆಗಾಗಿ ಉಪಯೋಗಿಸಿದ ಒರಟು ಲಿಪಿಯಲ್ಲಿ ಉಂಟಾದ ಬದಲಾವಣೆಗಳ ಲಕ್ಷಣಗಳನ್ನು ಪ್ರತಿಫಲಿಸುತ್ತವೆ.*

(ಕನ್ನಡಾನುವಾದ/ದೇವರ್ಕೊಂಡಾರೆಡ್ಡಿ)

## ಆಧಾರ ಗ್ರಂಥಗಳು


1. Srinivas Ritti, B. R. Gopal (Ed.) : *Studies in Indian History,* (Dr P. B. Desai Felicitation Volume)
2. K. V. Ramesh (Ed.) : *Srikanthika* (Dr. Srikantha Sastri Felicitation Volume)
3. B. R. Gopal : *Corpus Inscriptions of Kadambas*
4. *Epigraphia Indica* (Relevant Volumes)
5. *Indian Antiquary* (Relevant Volumes)


---


* ಈ ಲೇಖನ ಬರೆಯಲು ಪ್ರೋತ್ಸಾಹ ಮತ್ತು ಸಹಕಾರಗಳನ್ನು ನೀಡಿದ ಡಾ॥ ಎಚ್. ಎಸ್. ರಿತ್ತಿ (ಮಾರ್ಗದರ್ಶಕರು), ಡಾ॥ ಎಸ್. ವಿ. ಪಾಡಿಗಾರ್ ಮತ್ತು ಡಾ॥ ಎಚ್. ಆರ್. ರಘುನಾಥಭಟ್ ಅವರುಗಳಿಗೆ ಋಣಿಯಾಗಿದ್ದೇನೆ.

ದೇವರಕೊಂಡಾರೆಡ್ಡಿ

# ಸೋಸಲೆಯ ನಿಶಿದಿ ಶಾಸನ

ಸೋಸಲೆಯು ತಿರುಮುಕ್ಕೂಡಲು ನರಸೀಪುರದ ಉತ್ತರದಿಕ್ಕಿನಲ್ಲಿದೆ. ಈ ಗ್ರಾಮವು ಮೂರು ಭಾಗವಾಗಿದ್ದು, ವ್ಯಾಸರಾಜರಮಠವಿರುವ (ಹೊಸ)ವ್ಯಾಸರಾಜಪುರ, ವೇಣುಗೋಪಾಲಕೃಷ್ಣ ದೇವಾಲಯವಿರುವ ಅಗ್ರಹಾರ ಮತ್ತು ಹಳೆಯ ಊರಾದ ಸೋಸಲೆ ಎಂದಾಗಿದೆ. ಮುಂದೆ ವಿವರಿಸಲಿರುವ ಶಾಸನವನ್ನು ಈಗ ವೇಣುಗೋಪಾಲಸ್ವಾಮಿ ದೇವಾಲಯದ ಆವರಣದಲ್ಲಿಯ ಅಮ್ಮನವರ ಗುಡಿಯ ಮುಂದೆ ನೆಲಕ್ಕೆ ಹಾಸಿರುತ್ತಾರೆ. ಈ ಶಾಸನವು ಹಳೆಯ ಸೋಸಲೆಯಲ್ಲಿದ್ದ ಜೋಡಿದಾರರ ಮನೆಯನ್ನು ಕಿತ್ತುಹಾಕುವಾಗ ಅಲ್ಲಿ ಕಂಡುಬಂದಿತು. ಅದನ್ನು ಈಗ ಕೃಷ್ಣಸ್ವಾಮಿ ದೇವಾಲಯದ ಅರ್ಚಕರು ಇಲ್ಲಿಗೆ ತರಿಸಿರುತ್ತಾರೆ. ನೆಲಕ್ಕೆ ಹಾಸಿ ಸೀಮೆಂಟು ಹಾಕಿರುವುದರಿಂದ ಇದರ ಅಂಚಿನಲ್ಲಿಯ ಅಕ್ಷರಗಳಲ್ಲಿ ಅನೇಕವು ಕಾಣುವುದಿಲ್ಲ. ಸೀಮೆಂಟು ಭದ್ರವಾಗಿ ಕಚ್ಚಿರುವುದರಿಂದ ಕೆರೆಯಲೂ ಕಷ್ಟ. ಹೀಗಾಗಿ ದೊರೆತಷ್ಟು ಶಾಸನಪಾಠವನ್ನು ನೀಡಿದ್ದೇನೆ.

ಶಾಸನದ ಉದ್ದ ಮತ್ತು ಅಗಲ ೩'×೩' ಆಗಿರುತ್ತದೆ. ಲಿಪಿಯು ಸಾಕಷ್ಟು ಪ್ರಾಚೀನರೂಪದಲ್ಲಿದ್ದು, ಅಕ್ಷರದ ತಲೆಕಟ್ಟುಗಳ ಬೆಳವಣಿಗೆಯೂ ಸರಿಯಾಗಿ ಆಗಿರುವುದಿಲ್ಲ. ಅಕ್ಷರಗಳು ತಾಳಗುಂದದ ಕಾಕುಸ್ಥವರ್ಮನ ಶಾಸನದಂತೆ ಉದ್ದವಾಗಿವೆ. 'ಉ'ಕಾರದ ಗುಡಿಸು ತಳಗಡೆ ಬೆಳೆದು ಮೇಲಕ್ಕೆ ತಿರುಗಿದೆ. 'ರ'ಕಾರದ ಒತ್ತು ಸ್ವಲ್ಪ ಮಾತ್ರ ಮೇಲಕ್ಕೆ ಬಂದಿದ್ದು, ಅಕ್ಷರದ ತಳಭಾಗಕ್ಕಿಂತ ಕೆಳಮಟ್ಟದಲ್ಲಿಯೇ ಇದೆ. ಪ, ಮ, ಚ, ವ, ಪ, ಬ ಮುಂತಾದ ಅಕ್ಷರಗಳ ಕೆಳಭಾಗ ಸ್ವಲ್ಪ ಮಾತ್ರ ಬಾಗಿದೆ. ನ, ಯ ಅಕ್ಷರಗಳು ಇನ್ನೂ ಹೆಚ್ಚಿನ ಬೆಳವಣಿಗೆ ಪಡೆದಿಲ್ಲ. 'ಆ'ಕಾರದ ದೀರ್ಘವು ಅಕ್ಷರಗಳ ಹಿಂಬದಿಗೆ ಹಾದು ಕೆಳಕ್ಕೆ ಸ್ವಲ್ಪ ಮಾತ್ರ ಬಾಗಿರುತ್ತದೆ. 'ಸನ್ಯಾಸ', 'ಸೋಸಲೀ' ಎಂಬಲ್ಲಿ ಈ ಬಗೆಯ ಬೆಳವಣಿಗೆ ಕಾಣಬಹುದು. ಅಕ್ಷರಗಳ ತಲೆಕಟ್ಟುಗಳಲ್ಲಿ ತ್ರಿಕೋಣಾಕಾರದ ಛಾಯೆ ಕಂಡುಬರುತ್ತದೆ, ಶ್ರವಣಬೆಳಗೊಳದ ಭದ್ರಬಾಹುಮುನಿಯ ಶಾಸನದ ಅಕ್ಷರಗಳಿಗಿಂತ ಹಿಂದಿನ ಅಕ್ಷರದ ಲಕ್ಷಣಗಳನ್ನು ಹೊಂದಿದ್ದು, ತಲಕಾಡಿನ ಗಂಗರ ಪೆನಗೊಂಡೆ ಶಾಸನಲಿಪಿಗಳಿಗೆ ಹೋಲಿಕೆ ಇದೆ. ಹೀಗಾಗಿ, ಈ ಶಾಸನದ ಕಾಲವನ್ನು ಲಿಪಿಯ ದೃಷ್ಟಿಯಿಂದ ಕ್ರಿ. ಶ. ಸು. ಐದನೇ ಶತಮಾನಕ್ಕೆ ಸೇರಿಸಬಹುದಾಗಿದೆ.

ಶಾಸನದ ಪ್ರಾರಂಭದಲ್ಲಿ ಶುಭವಾಚಕ ಅಥವಾ ಶುಭಚಿಹ್ನೆಗಳಾದ ಸ್ವಸ್ತಿಯಾಗಲೀ ಅಂತಹ ಚಿಹ್ನೆಗಳಾಗಲೀ ಕಾಣಬರುವುದಿಲ್ಲ. ಶ್ರವಣಬೆಳಗೊಳದ ಅನೇಕ ಪ್ರಾಚೀನ ಶಾಸನಗಳಲ್ಲಿಯೂ ಈ ಬಗೆಯ ಶುಭವಾಚಕ ಅಥವಾ ಶುಭಚಿಹ್ನೆ ಕಂಡುಬಾರದಿರುವುದನ್ನು ಗಮನಿಸಬಹುದಾಗಿದೆ.

ಶಾಸನವಿರುವ ಭಾಗವನ್ನು ನಯವಾಗಿ ಸಮತಲಗೊಳಿಸಿ ನಾಲ್ಕುಸಾಲು ಕೆತ್ತಿರುತ್ತಾರೆ. ಉಳಿದ ಸ್ಥಳದಲ್ಲಿ ಏನನ್ನೂ ಕೆತ್ತದೆ ಜಾಗ ಬಿಟ್ಟಿರುತ್ತಾರೆ. ಶಾಸನದಲ್ಲಿ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ಯಾವುದೇ ವಿವರಗಳಿಲ್ಲ. ಈ ಶಾಸನೋಕ್ತ ಗುಣಸೇನಮುನಿಯ ಬಗ್ಗೆಯೂ ನಮಗೆ ಹೆಚ್ಚಿನ ವಿವರಗಳು ದೊರೆಯುವು

ದಿಲ್ಲ. ಗುಣಸೇನನು ಅರವತ್ತೈದು ವರ್ಷಗಳವರೆಗೆ ಬದುಕಿದ್ದು ಪಳಿದಂಗ ರೀತಿಯಲ್ಲಿ ನಿರ್ಗ್ರಂಥವನ್ನು ಸಾಧಿಸಿದಂತೆ ಹೇಳಿದೆ. ಚಾತುರ್ವರ್ಣದವರ ಪ್ರೀತಿಗೆ ಪಾತ್ರನಾಗಿ ಅಕ್ಷೀಣಾಗುಣವನ್ನು ಸಾಧಿಸಿ, ಸೋಸಲೆ ಗ್ರಾಮವನ್ನು ನಿರ್ಗ್ರಂಥತೀರ್ಥವನ್ನಾಗಿ ಮಾಡಿದನೆಂದು ಹೇಳಿದೆ. ಸೋಸಲೆಗ್ರಾಮವು ಈ ಶಾಸನದ ಕಾಲದಷ್ಟು ಪ್ರಾಚೀನನಾಮವುಳ್ಳದ್ದಾಗಿದ್ದು, ಜೈನತೀರ್ಥವಾಗಿತ್ತೆಂಬ ಅಂಶ ಇದರಿಂದ ತಿಳಿಯುತ್ತದೆ. ಈಗ ಸೋಸಲೆಯಲ್ಲಿ ಜೈನಧರ್ಮದ ವಾಸ್ತು ಅಥವಾ ಮೂರ್ತಿ ಶಿಲ್ಪದ ಯಾವ ಅವಶೇಷಗಳೂ ಕಾಣಬರುವುದಿಲ್ಲ. ಈಗ ಈ ಗ್ರಾಮವು ದ್ವೈತಮತದ ಒಂದು ಶಾಖೆಯ ಮತ್ತು ಸಪ್ತಮಾತೃಕಾಪ್ರಧಾನವಾಗಿಯುಳ್ಳ ಹೊನ್ನಾದೇವಿ ಕ್ಷೇತ್ರವಾಗಿದೆ.

ಶಾಸನದಲ್ಲಿ ಬರುವ 'ಪಳಿದಂಗ' ಎಂಬ ಪದದ ಅರ್ಥ ಸ್ಪಷ್ಟವಾಗುವುದಿಲ್ಲ. ಶ್ರವಣಬೆಳಗೊಳದ ಶಾಸನವೊಂದರಲ್ಲಿ "....ಮಹಾಮುನಿನೋನ್ತುಪಿನ್ ಇನದ ಱಿಟ್ಟು ಪಳಿತಜ್ಕದೆ ನಾನ್ದಿವಮೇಱಿದಾನ್" ಎಂದಿದೆ.[1] ಪಳಿದಂಗ, ಪಳಿತಜ್ಕ ಇವೆರಡೂ ಒಂದೇ ಆಗಿದ್ದು, ಇವು ತಪಸ್ಸಿನ ಆಸನದ ಒಂದು ಅಂಗವೆಂಬ ಅರ್ಥ ಬರುತ್ತದೆ. ಇಂತಹ ಆಸನ ಯಾವುದು ಎಂದು ಪರಿಶೀಲಿಸಿದರೆ, ಶ್ರವಣಬೆಳಗೊಳದ ಒಂದು ಜೈನಶಾಸನದಲ್ಲಿ "....ಅವಶಾಸ ಕಾಲಮನಱಿದು ಪಲ್ಯಂಕಾಶನದೊಳಿರ್ದು ಶಕ ೧೦೩೭...."[2] ಎಂಬ ಉಲ್ಲೇಖವಿರುವುದು ಕಂಡು ಬರುತ್ತದೆ. ಇಲ್ಲಿ ಪಲ್ಯಂಕವೆಂಬ ಆಸನದ ಉಲ್ಲೇಖವಿದ್ದು, ಇದಕ್ಕೂ ಮೂಲ ಪರ್ಯಂಕಾಸನ ಎಂಬ ಪದ ದೊರೆಯುತ್ತದೆ. ಬಹುಶಃ ಪರ್ಯಂಕ ಎಂಬ ಪದ ಪಳೀದಂಗ ಮತ್ತು ಪಲ್ಯಂಕಗಳಿಗೆ ಮೂಲವಿದ್ದಿರಬೇಕು.

ಚಾತುರ್ವರ್ಣ ಎಂಬ ಪದವೂ ಉಲ್ಲೇಖವಾಗಿದ್ದು, ಈ ಪದದ ಬಗ್ಗೆ ಡಾ॥ ಎಂ. ಚಿದಾನಂದ ಮೂರ್ತಿಯವರು ಚರ್ಚಿಸಿ, ಚಾತುರ್ವರ್ಣವೆಂದರೆ ಸನ್ಯಾಸಿ, ಸನ್ಯಾಸಿನಿ, ಜೈನಗೃಹಸ್ಥ, ಜೈನಗೃಹಸ್ಥೆ ಎಂಬ ಅರ್ಥ ಹೇಳಿರುತ್ತಾರೆ.[3] ಆದರೆ ಅವರು ನೀಡಿರುವ ಉದಾಹರಣೆಗಳನ್ನು ಗಮನಿಸಿದರೆ, ಚಾತುರ್ವರ್ಣವೆಂದರೆ ವೈದಿಕಧರ್ಮದ ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕುವರ್ಣಗಳೆಂಬ ಅರ್ಥ ಬರುವಂತಿದೆ.[4] ಚಾತುರ್ವರ್ಣ ಎಂಬ ಶಬ್ದವು ಶ್ರವಣಬೆಳಗೊಳದ ಒಂದು ಶಾಸನದಲ್ಲಿ, "ಪರಿತ್ಯಜ್ಯಂ ಗಣಂ ಸರ್ವ್ವಂ ಚಾತುರ್ವರ್ಣ ವಿಶೇಷಿತಮ್ ಆಹಾರಾದಿ ಶರೀರಂ ಚ ಕಟವಪ್ರ ಗಿರಾವಿಹ...."[5] ಎಂಬ ಉಲ್ಲೇಖದಲ್ಲಿ ಬಂದಿದೆ. ಇದರಲ್ಲಿಯೂ ಚಾತುರ್ವರ್ಣವೆಂದರೆ ವೈದಿಕಧರ್ಮದ ನಾಲ್ಕುವರ್ಣಗಳೆಂಬ ಅರ್ಥವೇ ಇದೆ. ಜೈನಧರ್ಮವು ವರ್ಣಗಳ ವಿರುದ್ಧವೆನಿಸಿದ್ದರೂ ವೈದಿಕ ಧರ್ಮದ ಪ್ರಭಾವದಿಂದ ಅದನ್ನು ಒಪ್ಪಿಕೊಂಡಿತ್ತೆಂದು ಹೇಳಬಹುದಾಗಿದೆ.

ನಿವೇದನೆ : ದಿನಾಂಕ ೬-೨-೧೯೮೪ರಲ್ಲಿ ಸೋಸಲೆಗೆ ಹೋಗಿದ್ದಾಗ ಈ ಶಾಸನದ ಪಾಠವನ್ನು ಸ್ಥಳದಲ್ಲಿ ಓದಿ ತಂದಿದ್ದೆ. ಎರಡು ವರ್ಷಗಳ ನಂತರ ಹೋದಾಗ ನೆಲಕ್ಕೆ ಹಾಸಿ ಸೀಮೆಂಟು ಅಂಟಿಸಿಬಿಟ್ಟಿದ್ದರು. ಹೀಗಾಗಿ ಶಾಸನಪ್ರತಿಯಲ್ಲಿ ಶಾಸನದ ಮೊದಲ ಸಾಲು ಮತ್ತು ಉಳಿದ ಅಂಚುಗಳ ಅಕ್ಷರಗಳು ಮೂಡಿರುವುದಿಲ್ಲ. ಆದ್ದರಿಂದ ಶಾಸನಪಾಠವನ್ನು ಪೂರ್ಣವಾಗಿ ಪ್ರಮಾಣೀಕೃತವಾಗಿ ಓದಲು ಸಾಧ್ಯವಾಗಿರುವುದಿಲ್ಲ. ಕಂಸದಲ್ಲಿ ನೀಡಿರುವ ಪಾಠಾಂತರಗಳು ಸೀಮೆಂಟಿನಿಂದ ಆವೃತ್ತವಾಗಿದ್ದು, ೧೯೮೪ರಲ್ಲಿ ಸ್ಥಳದಲ್ಲೇ ಬರೆದುಕೊಂಡಿರುವ ಕಣ್‌ಕಾಪಿಯಿಂದ ನೀಡಿದ ಪಾಠವಾಗಿರುತ್ತದೆ.

---

1. ಎ.ಕ , ಸಂಪುಟ ೨ (ಪರಿಷ್ಕೃತ), ೧೩೦
2. ಅದೇ, ೧೫೬
3. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಪುನರ್‌ಮುದ್ರಣ), ಪು. ೮೭
4. ಅದೇ
5. ಎ.ಕ., ಸಂಪುಟ ೨ (ಪರಿಷ್ಕೃತ), ೧೩

## ಸೋಸಲೆಯ ನಿಶಿದಿ ಶಾಸನ

### ಶಾಸನ ಪಾಠ

೧. ಸರ್ವ್ವಜ್ಞೇನ×ಪೂರ್ವದ್ಯಾಗುರಾರವಯ[ನಾನ್ಮಮತ] ಪುತ್ರೋ
ಗುಣಸೇನಾಖ್ಯ[ಪನ್ಚಶಟ್ ಸ]

೨. × ತಮ್ಮೃಶ್ಯರೀರ ಸನ್ನ್ಯಾಸಂ ಸುಬುದ್ಧಿಗೃಹವರ್ದ್ಧೀಶಂ ಪಳಿದಂಗಂ
ಸ್ಸಾದ್ಧ್ಯತೇ ಕ್ಷಿಪ್ರ ನಿರ್ಗ್ರಂಥ ತಕ್ಷ [ನಾತ್ಮೀಕ×]

೩. × ತೀರ್ತ್ಥಂ ಸೋಸಲೀಗ್ರಾಮೇ ಚಾತುರ್ವ್ವರ್ಣ ಸಮಾನ್ವಿತ ಮಾನ
ಸರ್ವ್ವಕಾಲೇಷುಃಮಕ್ಷೀಣಾಗುಣಸಾ[ಧಿತಾ]

೪. [×ನಿ]ರ್ಗ್ರನ್ತಮುಸಯಕ್ಷೇತ್ರ ಸರ್ವಧರ್ಮ್ಮಸ್ಯ ಸಾಧನಃ ಗುಣಸೇನಾ
ಮ್ನಹೇತುಶ್ಚ ತ್ರಿವಿಧಸುಚೇಸಂಪ್ರೀ[ಚಯ×](?)

**ಸಾರಾಂಶ :** ಹಿಂದಿನ ಸ್ಮರಣೆಯಿಂದ ಬಲ್ಲವರಿಂದ ಗುರುವಿನ ಮಮತೆಯ ಮಗನೆಂದು ಪರಿಗಣಿಸಲಾದ (ಶಿಷ್ಯನಾದ) ಗುಣಸೇನನೆಂಬುವನು ಅರವತ್ತೈದು ವರ್ಷದ ನಶ್ವರಶರೀರವನ್ನು ಧರಿಸಿ (ಅದನ್ನು) ಸನ್ಯಾಸವೆಂಬ ಸದ್ಬುದ್ಧಿಗೆ ಆಲಯವನ್ನಾಗಿಸಿ ವಸ್ತ್ರತ್ಯಾಗವನ್ನು ಸಾಧಿಸಿ ಬೇಗನೆ ನಿರ್ಗ್ರಂಥ ಪಂಗಡದವರಿಗೆ ಆತ್ಮೀಯನಾದನು. ಮೂರು ಕ್ರಿಯೆಗಳಿಂದ (ರತ್ನತ್ರಯ) ಸರ್ವ್ವಧರ್ಮದ ಏಳಿಗೆಗೆ ಕಾರಣನಾದ ಗುಣಸೇನನು ಚಾತುರ್ವರ್ಣದಿಂದ ಕೂಡಿದ ಸೋಸಲೆಗ್ರಾಮದಲ್ಲಿ ಅಕ್ಷೀಣಾಗುಣವನ್ನು ಸಾಧಿಸಿ ಅದನ್ನು ನಿರ್ಗ್ರಂಥತೀರ್ಥವನ್ನಾಗಿಸಿದನು.*

---

* ಶಾಸನಪ್ರತಿ ತೆಗೆಯುವಲ್ಲಿ ಸಹಕರಿಸಿದ ಶ್ರೀ ಅ. ಲ. ನರಸಿಂಹನ್ ಅವರಿಗೂ ಶಾಸನಪಾಠವನ್ನು ಅರ್ಥೈಸುವಲ್ಲಿ ಸಹಾಯ ನೀಡಿದ ಶ್ರೀಮತಿ ವಸಂತಲಕ್ಷ್ಮಿ ಅವರಿಗೂ ಋಣಿಯಾಗಿದ್ದೇನೆ.

ಮಾಧವ ಎನ್. ಕಟ್ಟಿ
ಎನ್. ಎನ್. ಸ್ವಾಮಿ

# ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ವಳಬಳ್ಳಾರಿಯ ಎರಡು ಶಾಸನಗಳು

ಈ ಕೆಳಗೆ ಸಂಪಾದಿಸಿಕೊಟ್ಟ ಶಾಸನಗಳನ್ನು[1] ಶ್ರೀ ಎನ್. ಎನ್. ಸ್ವಾಮಿ ಅವರು ೧೯೭೮-೭೯ರಲ್ಲಿ ರಾಯಚೂರು ಜಿಲ್ಲೆಯಲ್ಲಿ ನಡೆಸಿದ್ದ ಪ್ರವಾಸದ ಕಾಲದಲ್ಲಿ ಪ್ರತಿಮಾಡಿದ್ದರು. ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ವಳಬಳ್ಳಾರಿ ಊರಿನ ತುಂಗಭದ್ರಾ ತೀರದಲ್ಲಿರುವ ರಾಮಲಿಂಗಸ್ವಾಮಿ ದೇವಾಲಯದ ಅಧಿಷ್ಠಾನದ ಬಳಿ ಈ ಎರಡೂ ಶಾಸನಗಳನ್ನು ಇರಿಸಿದ್ದಾರೆ. ಗ್ರಾಮಸ್ಥರು ತಮ್ಮ ಕೃಷಿ ಸಲಕರಣೆಗಳನ್ನು ಮಸೆಯಲು ಬಳಸುತ್ತಿದ್ದುದರಿಂದ ಒಂದು ಒಂದು ಶಾಸನದ ಮೇಲ್ಭಾಗವು ಸ್ವಲ್ಪಮಟ್ಟಿಗೆ ಹೋಗಿದೆ. ಆದರೆ ಈ ಎರಡೂ ಶಾಸನಗಳ ಬಹುಭಾಗ ಮಣ್ಣಿನಡಿ ಇದ್ದುದರಿಂದ ಮೊದಲ ಶಾಸನದ ಮುಖ್ಯವಾದ ಭಾಗ ಹಾಗೂ ಎರಡನೇಯ ಶಾಸನದ ಪೂರ್ತಿಭಾಗ ಸಾಕಷ್ಟು ಸುರಕ್ಷಿತವಾಗಿವೆ.

ಮೊದಲ ಶಾಸನವು ಚಾಳುಕ್ಯ ವಿಕ್ರಮಸಂವತ್ಸರ ೨೦ನೇಯ ವರ್ಷ, ಯುವ ಸಂವತ್ಸರ, ಬಹುಳ ಏಕಾದಶಿ ಉತ್ತರಾಯಣ ಸಂಕ್ರಮಣ ಭಾನುವಾರ ತಿಥಿಯದಾಗಿದ್ದು, ಕ್ರಿ.ಶ. ೧೦೯೫ ಡಿಸೆಂಬರ್ ೨೫ಕ್ಕೆ ಸರಿಹೊಂದುತ್ತಿದ್ದು, ವಾರವು ಭಾನುವಿನ ಬದಲು ಮಂಗಳಕ್ಕೆ ಹೊಂದುತ್ತದೆ. ಎರಡನೇಯ ಶಾಸನವು ಚಾಳುಕ್ಯ ವಿಕ್ರಮ ಸಂವತ್ಸರದ ೪೨ನೇಯ ವರ್ಷ, ಹೇಮಲಂಬಿ ಪುಷ್ಯ ಅಮವಾಸ್ಯಾ ಸೋಮವಾರ ತಿಥಿಯದಾಗಿದ್ದು, ಕ್ರಿ. ಶ. ೧೧೧೭ ಡಿಸೆಂಬರ್ ೨೪ ಮಕರಸಂಕ್ರಮಣದ ಹಿಂದಿನ ದಿನಕ್ಕೆ ಸರಿಯಾಗಿ ಹೊಂದುತ್ತದೆ.

ಎರಡೂ ಶಾಸನಗಳು ಕನ್ನಡ ಭಾಷೆ ಹಾಗೂ ಲಿಪಿಯಲ್ಲಿ ಇದ್ದು, ಪಠ್ಯಭಾಗವು ಎರಡನೇಯದರಲ್ಲಿ ಪೂರ್ತಿ ಗದ್ಯದಲ್ಲೂ ಮೊದಲನೇಯದರಲ್ಲಿ ಪ್ರಾರ್ಥನಾ ಶ್ಲೋಕ ಹಾಗೂ ಶಾಪಭಾಗದ ಪದ್ಯಗಳ ವಿನಾ ಪೂರ್ತಿ ಗದ್ಯದಲ್ಲೂ ಇವೆ.

ಈ ಶಾಸನಗಳ ಅಕ್ಷರಗಳು ಲಿಪಿಶಾಸ್ತ್ರರೀತ್ಯಾ ಅವುಗಳ ಕಾಲಕ್ಕೆ ಪೂರ್ತಿ ಅನುಗುಣವಾಗಿವೆ ಹಾಗೂ ಅವುಗಳನ್ನು ದೋಣಿ[2] ಮತ್ತು ಯಲಿಶಿರೂರಿನ[3] ಹನ್ನೊಂದನೇಯ ಶತಮಾನದ ಶಾಸನಗಳ ಅಕ್ಷರಗಳ ಜೊತೆ ಹೋಲಿಕೆ ಹೊಂದಿವೆ. ಆದರೆ ಕೆಳಗಿನ ಸಂಗತಿಗಳನ್ನು ಗಮನಿಸಬೇಕು. 'ಅಂದು' (೯ನೇಯ ಸಾಲಿನಲ್ಲಿ 'ಸಂಕ್ರಮಣದಂದು'ನಲ್ಲಿ)ಎಂದು ಮೊದಲ ಶಾಸನದಲ್ಲೂ

1. *A.R.EP.*, 1978-79, No. 168 and 169. ಶಾಸನ ಇಲಾಖೆಯ ನಿರ್ದೇಶಕರ ಅನುಮತಿಯೊಡನೆ ಸಂಪಾದಿಸಿ ಇಲ್ಲಿ ಪ್ರಕಟಿಸಲಾಗಿದೆ.
2. *S.I.I.*, Vol. XI, pt. II, Ins. No. 140 and *Ep. Carn.*, Vol. V, Bl. Ins. No. 116
3. *S.I.I.*, Vol. XI, pt. II, Ins. No. 167 and *Ep. Carn.*, Vol. VII, Sk. Ins. No. 114

'ಬೇಂಟೆಯ' (೧೪–೧೫ನೇಯ ಸಾಲು) ಎಂದು ಎರಡನೇಯ ಶಾಸನದಲ್ಲೂ ಮಾಡಿದ ಪ್ರಯೋಗಗಳಂತೆ ಅನುನಾಸಿಕದ ಸ್ಥಳದಲ್ಲಿ ಅನುಸ್ವಾರವನ್ನು ಬಳಸಿದೆ. ಲಿಪಿ ಸ್ವರೂಪದಲ್ಲಿ ಕೆಳಗಿನ ವೈಶಿಷ್ಟ್ಯಗಳನ್ನು ಗಮನಿಸಬಹುದು. ರ ಕಾರಕ್ಕೆ ಬರುವ ಒತ್ತಕ್ಷರಗಳನ್ನು ಈರೊತ್ತಾಗಿ ಬಳಸಿದೆ. ಉದಾ : ಮೊದಲ ಶಾಸನದ ೧೩ನೇಯ ಸಾಲಿನ 'ಸರ್ವ್ವಾಧ್ಯಕ್ಷ' ಅಥವಾ ಎರಡನೇಯ ಶಾಸನದ ೬–೭ ಸಾಲುಗಳ 'ಆಚಂದ್ರಾರ್ಕ್ಕ'.

ಕರ್ನಾಟಕದ ರಾಜಕೀಯ, ಸಮಾಜೋ-ಆರ್ಥಿಕ ಹಾಗೂ ಸಾಂಸ್ಕೃತಿಕ ಇತಿಹಾಸಗಳ ಬಗ್ಗೆ ಹೊಸ ಸಾಕ್ಷ್ಯಗಳನ್ನು ಬೆಳಕಿಗೆ ತಂದಿರುವುದು ಈ ಶಾಸನಗಳ ವೈಶಿಷ್ಟ್ಯ.

ಅಚ್ಚುಪನ್ನಾಯ(ಟಂಕಸಾಲೆ)ದ ಅಧಿಕಾರಿಯಾಗಿದ್ದ ಕೇಶಿರಾಜ ಎಂಬಾತನೂ ಮಾದಿರಾಜ ಎಂಬಾತನೂ ಪಿರಿಯಬೆಳ್ಳಹಾರದ ಅಗ್ರಹಾರದ ಮೂಲಸ್ಥಾನ ದೇವರ ನಿತ್ಯನೈವೇದ್ಯ, ನಂದಾದೀಪ, ನೃತ್ಯ, ಸಂಗೀತ ಮುಂತಾದ ಸೇವೆಗಳಿಗಾಗಿ ವಿವಿಧ ತೆರಿಗೆಗಳಿಂದ ಬರುವ ಆದಾಯವನ್ನು ದಾನ ನೀಡಿರುವುದನ್ನು ದಾಖಲಿಸುವುದೇ ಮೊದಲ ಶಾಸನದ ಉದ್ದೇಶ. ಮಹಾಪ್ರಧಾನ ಸಂಧಿವಿಗ್ರಹಿಕ ಸರ್ವ್ವಾಧ್ಯಕ್ಷ ಮಹಾಪ್ರಚಂಡ ದಂಡನಾಯಕ ಮಹಾದೇವ ಭಟ್ಟೋಪಾಧ್ಯಾಯರ ಸೂಚನೆಯಂತೆ ಈ ದಾನವನ್ನು ನೀಡಲಾಗಿದೆ. ದಾನ ನೀಡಿದ ವಸ್ತುಗಳಲ್ಲಿ ಲೊಕ್ಕಿಪಣ(ಸಾಲು ೨೨–೨೩)ಸ್ವಾರಸ್ಯದ್ದು. ಒಂದು ವಿಶಿಷ್ಟ ಮಾನದ ನಾಣ್ಯವನ್ನು ಈ ಶಬ್ದವು ಸೂಚಿಸುತ್ತದೆ. ಬಹುಶಃ ಈ ನಾಣ್ಯದ ಒಂದು ಮಗ್ಗುಲಲ್ಲಿ ಲಕ್ಷ್ಮಿಯ ಕೆತ್ತನೆ ಇದ್ದಿರಬಹುದು (ಲಕ್ಷ್ಮಿ >ಲಕುಮಿ>ಲಕ್ಕಿ > ಲೊಕ್ಕಿ). ಹೀಗಾಗಿ 'ಲೊಕ್ಕಿಪಣ' ಎಂಬ ಹೆಸರು ನೀಡಿದೆ.[4]

ಬಾಲಭಾಸ್ಕರದೇವನೆಂಬಾತನು ಪ್ರತಿಷ್ಠಾಪಿಸಿದ ಉತ್ತರಾಯಣ ಸಂಕ್ರಾಂತಿಯ ಸಂದರ್ಭದಲ್ಲಿ ಪ್ರತಿಷ್ಠಾಪಿಸಿದ ಕೇಶವದೇವರ ನೈವೇದ್ಯಕ್ಕಾಗಿ ಮಹಾಸಾಮಂತ ಕಾಳಂಜಾರ ಪುರವರಾಧೀಶ್ವರ ಪಿರಿಯಬೇಂಟೆಯ ವಸಂತನಾಯಕನು ಆದಿತ್ಯದೇವರ ಗಡಿಂಬದ ಕೋಲಿನಿಂದ ಅಳೆದು ೧೦ ಮತ್ತರು ಭೂಮಿಯನ್ನು ದಾನ ನೀಡಿದ ವಿಚಾರವನ್ನು ಎರಡನೇಯ ಶಾಸನವು ದಾಖಲಿಸುತ್ತಿದ್ದು, ಅಗ್ರಹಾರ ಪಿರಿಯಬೆಳ್ಳಹಾರದ ೧೨೦ ಮಹಾಜನರ ವಶಕ್ಕೆ ಈ ಭೂಮಿಯನ್ನು ನೀಡಲಾಗಿದೆ.

ಮಹಾದೇವ ಭಟ್ಟೋಪಾಧ್ಯಾಯನೆಂಬ ಮಾಂಡಲಿಕನ ವಿಚಾರ ವಿವರಣೆಗಳನ್ನು ಮೊದಲಬಾರಿ ಒದಗಿಸುತ್ತದೆಂಬ ಕಾರಣಕ್ಕೆ ಮೊದಲ ಶಾಸನ ಮುಖ್ಯವಾದುದು. ಧಾರವಾಡ ಜಿಲ್ಲೆ, ಮುಂಡರಗಿ ತಾಲ್ಲೂಕಿನ ದೋಣಿಯ ಶಾಸನವನ್ನು ಮೇಲೆ ಉಲ್ಲೇಖಿಸಿದ್ದು, ಆರನೇಯ ವಿಕ್ರಮಾದಿತ್ಯನ ಮನೆವೆರ್ಗಡೆಯಾಗಿದ್ದ ಮಾಂಡಲಿಕ ಮಹಾದೇವಭಟ್ಟ ಎಂಬಾತನ ವಿಚಾರ ತಿಳಿಸುತ್ತದೆ. ಪರಿಶೀಲನೆಯಲ್ಲಿರುವ ಶಾಸನವು ಮಾಂಡಲಿಕ ಭಟ್ಟೋಪಾಧ್ಯಾಯನು ಮಹಾಪ್ರಧಾನ, ಸಂಧಿವಿಗ್ರಹಿಕ ಮತ್ತು ಸರ್ವಾಧ್ಯಕ್ಷ ಎಂದು ಉಲ್ಲೇಖಿತನಾಗಿದ್ದು, ಎಂದರೆ ಮಂತ್ರಿಗಳಲ್ಲಿ ಪ್ರಧಾನನು ವಿದೇಶ ವ್ಯವಹಾರ(ಯುದ್ಧ ಹಾಗೂ ಸಂಧಿಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳುವುದು)ಗಳ ಅಧಿಕೃತ ಹಾಗೂ ಆಡಳಿತದ ಸಮಗ್ರ ಮೇಲುವಿಚಾರಣೆ ನೋಡುವ ಅಧಿಕಾರಗಳನ್ನು ಹೊಂದಿದವನೆಂದುತಿಳಿಯುತ್ತದೆ. ಈ ಎರಡೂ ಶಾಸನಗಳು ಅದೇ ಆರನೇಯ ವಿಕ್ರಮಾದಿತ್ಯನ ಕಾಲದವು. ದೋಣಿ ಶಾಸನದ ಮನೆ ವೆರ್ಗಡೆ ಮಹಾದೇವಭಟ್ಟನು ಈ ಶಾಸನಗಳಲ್ಲಿ ಉಲ್ಲೇಖಿತನಾದ ಮಹಾದೇವ ಭಟ್ಟೋಪಾಧ್ಯಾಯನೇ ಆಗಿರಬೇಕು. ಇದು ನಿಜವಾದರೆ, ಆತ ಈ ಶಾಸನಗಳು ಹೊರಟ ಕಾಲದಲ್ಲಿ ಮಹಾಪ್ರಧಾನ, ಸಂಧಿವಿಗ್ರಹಿ ಹಾಗೂ ಸರ್ವಾಧ್ಯಕ್ಷನಾಗಿ ಬಡ್ತಿ ಪಡೆದಿರಬೇಕು.

ಇಲ್ಲಿ ಉಲ್ಲೇಖಿತನಾದ ಕೇಶಿರಾಜ ದಂಡನಾಯಕನು ಕೋಡುಗುಳಿ ಶಾಸನದ[5] ಕೇಶಿರಾಜನೇ

---

4. ಟಂಕಸಾಲೆಯಾಗಿದ್ದ ಲಕ್ಕಿಗುಂಡಿಯು ಲಕ್ಷ್ಮಿ(ಲೊಕ್ಕಿ) ಎಂಬ ಹೆಸರಿನಿಂದ ಬಂದಿದ್ದು, ಲೊಕ್ಕಿಪಣ ಎಂಬ ನಾಣ್ಯವು ಈ ಪ್ರದೇಶಕ್ಕೆ ಸಂಬಂಧಿಸಿದುದೆಂದು ಹೇಳಬಹುದಾಗಿದೆ.

5. *S.I.I.*, Vol. XX, Ins. No. 69, pp. 82 ff.

ಆಗಿರಬೇಕು. ಈ ಶಾಸನವು ಕ್ರಿ. ಶ. ೧೧೧೭ರದಾಗಿದ್ದು,ಅದರಲ್ಲಿ ಆತನೂ "ಸಮಧಿಗತ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ದುಷ್ಟವಿದ್ವಿಷ್ಟ ವಿಧೇಯಕ ವಾಜಿಕುಲಾರ್ಣವ ಪಾರಿಜಾತ ಸುಕವಿಮತ ಚೂತಬಂಧು ವನವಸಂತ ವಚನಶ್ರೀವಧೂಕಾಂತ ಸಾಹಿತ್ಯ ಸರೋರುಹ ಮಧೂಬ್ರತ ಸತ್ಯಾಸತ್ಯಬ್ರತ ಹರಚರಣ ರಜೋರಂಜಿತೋತ್ತಮಾಂಗನ್ ಅಯ್ಯನಸಿಂಗನಾಮಾದಿ ಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್‌ಮಹಾಪ್ರಧಾನಮ್ ಹೇರಿಲಾಳ ಸಂಧಿವಿಗ್ರಹಿ ದಂಡನಾಯಕಂ ಕೇಶಿರಾಜರಸ" ಎಂದಿದೆ. ಇಲ್ಲಿ ಚರ್ಚಿಸಲಾಗುವ ಶಾಸನದಲ್ಲಿ ಅವನನ್ನು ಕೇಶಿರಾಜ ದಂಡನಾಯಕ ಎಂದಷ್ಟೇ ಹೇಳಿದೆ. ಹೀಗಾಗಿ, ಈ ಶಾಸನವು ಅವನನ್ನು ಸಾಮಾನ್ಯವಾದ ದಂಡನಾಯಕ ಎಂಬ ಸ್ಥಾನವನ್ನು ಮಾತ್ರ ಸೂಚಿಸಿ ಉಳಿದ ಬಿರುದುಗಳನ್ನು ಹೇಳದೆ ಉಲ್ಲೇಖಿಸಿದೆ. ಇಲ್ಲಿಯ ಶಾಸನದಲ್ಲಿ ಉಲ್ಲೇಖಿತನಾದ ಮಾದಿರಾಜನು ಕೇಶಿರಾಜನ ಸೋದರನಾಗಿರಬಹುದು. ಇವರುಗಳ ತಂದೆತಾಯಂದಿರ ಬಗ್ಗೆ ವಿವರಣೆ ಇರುವ ಶಾಸನ ಪತ್ತೆಯಾಗುವವರೆಗೆ ಈ ಬಗ್ಗೆ ಖಚಿತವಾಗಿ ಏನೂ ಹೇಳಲಾಗದಿದ್ದರೂ ಅಂಥ ಶಾಸನ ಪತ್ತೆಯಾಗುವ ಬಗ್ಗೆ ನಾವು ಆಶಾವಾದಿಗಳಾಗಿರಬಹುದು.

ಮಹಾಸಾಮಂತ ಕಾಲಂಜಾರಪುರವರಾಧೀಶ್ವರ ಪಿರಿಯಬೇಂಟೆಯ ವಸಂತನಾಯಕನೆಂಬ ಒಬ್ಬ ಹೊಸ ಮಾಂಡಲಿಕನೊಬ್ಬನನ್ನು ಎರಡನೇಯ ಶಾಸನವು ಮೊದಲಬಾರಿಗೆ ಪರಿಚಯಿಸುತ್ತದೆ. ಕರ್ನಾಟಕದ ಕಳಚೂರ್ಯರ ಶಾಸನದಲ್ಲಿ ಕಾಳಂಜಾರಪುರವರಾಧೀಶ್ವರನೆಂಬ ಬಿರುದು ಆಗಾಗ ಕಾಣಬರುತ್ತದೆ. ಆದ್ದರಿಂದ ವಸಂತನಾಯಕನು ಈ ವಂಶಕ್ಕೆ ಸೇರಿದವನು. ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಮಹತ್ವದ ಸಾಕ್ಷ್ಯವನ್ನು ಈ ಶಾಸನವು ಒದಗಿಸುತ್ತದೆ. ಮಹಾಸಾಮಂತ ಹಾಗೂ ಪಿರಿಯಬೇಂಟೆಯ ಎಂಬ ಅವನ ಬಿರುದುಗಳು, ಅವನೊಬ್ಬ ಗಣ್ಯ ಮಾಂಡಲಿಕನಾಗಿದ್ದು ಅವನು ಅರಮನೆಯ ಬೇಟೆಗಾರರ ಮೇಲೆ ಅಧಿಕಾರ ಹೊಂದಿದ್ದವನೆಂದು ಸೂಚಿಸುತ್ತವೆ. 'ಚಿತ್ತಚಮತುಕಾರ' (ಚಮತ್ಕಾರ) ಎಂಬ ಅವನ ಇನ್ನೊಂದು ಬಿರುದು ಸ್ವಾರಸ್ಯದ್ದೂ ಮಹತ್ವದ್ದೂ ಆಗಿದ್ದು, ಅವನು ಆರನೇಯ ವಿಕ್ರಮಾದಿತ್ಯನ ಮನಸ್ಸಿನಲ್ಲಿ ಪ್ರಮೋದ ಉಂಟು ಮಾಡುವವನೆಂದು ಇದರ ಅರ್ಥ.

ಶಾಸನಗಳಲ್ಲಿ ಉಲ್ಲೇಖಿಸಿದ ಭೌಗೋಳಿಕ ವಿವರಗಳಲ್ಲಿ ಕಲ್ಯಾಣವು ಈಗಿನ ಬಸವಕಲ್ಯಾಣ,ಜಯಂತಿಪುರವು ವೈಜಯಂತಿ ಅಥವಾ ಬನವಾಸಿ (ಉತ್ತರಕನ್ನಡ) ಎಂದು ಗುರುತಿಸಬಹುದು. ಪಿರಿಯಬೆಳ್ವಹಾಳ ಶಬ್ದದ ವ್ಯುತ್ಪತ್ತಿಯನ್ನು ಹೇಳುವುದು ಕಷ್ಟ. ಇದನ್ನು ಅನುಮಾನವಿಲ್ಲದೆ ಈಗಿನ ಜಿಲ್ಲಾಕೇಂದ್ರ ಬಳ್ಳಾರಿಯ ಜೊತೆ ಗುರುತಿಸಬಹುದು.

ಶಾಸನ ದೊರೆತ ಸ್ಥಳವಾದ ವಳಬಳ್ಳಾರಿಯನ್ನು ಸುತ್ತುವರಿಯಲ್ಪಟ್ಟ (ಒಳಗಿನ)ಬಳ್ಳಾರಿ ಎಂದು ಅರ್ಥೈಸಬಹುದು. ಈ ಊರು ತುಂಗಭದ್ರೆಯಿಂದ ಸುತ್ತುವರಿಯಲ್ಪಟ್ಟಿದೆ ಎಂಬ ಸಂಗತಿಯನ್ನು ಇಲ್ಲ ಹೇಳುವುದು ಸ್ವಾರಸ್ಯಕರವಾಗಬಹುದು. ಹೊಳೆಬಳ್ಳಾರಿ ಎಂದೂ ಈ ಊರಿನ ಹೆಸರನ್ನು ಅರ್ಥವಿಸಲು ಸಾಧ್ಯವಿದೆ. ಅದೇ ವಳೆಬಳ್ಳಾರಿ > ವಳಬಳ್ಳಾರಿ ಎಂದಾಗಿರಲು ಸಾಧ್ಯವಿದೆ.

ಮೊದಲನೇಯ ಶಾಸನ[6]

೧. ಸ್ವಸ್ತಿ । ಸಮಸ್ತ ಭುವನಾಶ್ರಯ ಶ್ರೀಪೃ(ಪೃ)
೨. ಥು(ಥ್ವೀ)ವೀ ವಲ್ಲಭ ಮಹಾರಾಜಾಧಿ ರಾ
೩. ಜಂ ಪರಮೇಶ್ವರ ಪರಮಭಟ್ಟಾರಕ ಸತ್ಯಾ

6. *A.R.Ep.*, B. 168 of 1978-79ರ ಶಾಸನಪ್ರತಿಗಳಲ್ಲಿರುವಂತೆ

೪. ಕ್ಷ್ರಿಯ ಕುಳತಿಲಕ ಚಾಳುಕ್ಯಾಭರಣಂ

೫. ಶ್ರೀಮತ್ ತ್ರಿಭುವನಮಲ್ಲ ದೇವರು(ರ) ವಿಜಯ ರಾ

೬. ಜ್ಯಮು(ಮು)ತ್ತರೋತ್ತರಾಭಿವೃದ್ಧೀ ಪ್ರವರ್ದ್ಧಮಾನ ಮಾ

೭. ಚಂದ್ರಾರ್ಕ್ಕ ತಾರಂಬರಂ ಸಲುತ್ತುಮಿರೆ ಕಲ್ಯಾಣದ ನೆಲೆವೀ

೮. ಡಿನೊಳು ಸುಕಸಂಕತಾ(ಸುಖಸಂಕಥಾ) ವಿನೋದದಿಂ ರಾಜ್ಯಂಗೆಯ್ಯುತ್ತುಮಿ[ರೆ]॥

೯. ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾ

೧೦. ಸುಷ್ಟಾನಾ(ನ) ಪಾರಾಯಣ ವಿವೇಕ ನಾರಾಯಣ ಕವಿಗಮ

೧೧. [ಕಿ]ಗೆ ಪ್ರಸ[7](ಪ)ನ್ನ ಸಮಸ್ತ ಗುಣಯುಕ್ತ ನಿಷ್ಕಪಟ ವಿನೆಯ

೧೨. ದಿ.....ಸತ್ಯ ರಾಧೇಯರು....ಕುಳ ವಾ(ವ)ಸಿಷ್ಠ(ಶಿಷ್ಠ)ರು ಸ(ಮ)ರ ಸಂತುಷ್ಠ

೧೩. ರು ಶ್ರೀಮನ್ಮಹಾಪ್ರಧಾನ ಸಂಧಿವಿಗ್ರಾಹಿಕ ಸರ್ವ್ವಾಧ್ಯಕ್ಷಂ ಮ[ಹಾ]

೧೪. ಪ್ರಚಂಡ ದಂಡನಾಯಕ ಮ[ಹಾ]ದೇವ ಭಟ್ಟೋಪಾಧ್ಯಾಯ[ರ]

೧೫. ಬೆಸದಿಂ । ಸ್ವಸ್ತಿ ಸಮಸ್ತ ನಿಜ ನಾಮಾಂಕಮಾಳಿಕಾಪ್ರಸ(ಶ)ಸ್ತಿ ಸಹಿ[ತಂ]

೧೬. ಶ್ರೀಮದಚ್ಚುಪನಾಯದ ದಂಡನಾ[ಯ]ಕ ಕೇಸಿರಾಜನುಂ ಮದಿರಾ[ಜನುಂ]

೧೭. ಸ್ವಸ್ತಿಶ್ರೀ ಚಾಳುಕ್ಯ ವಿಕ್ರಮವರ್ಷದ ೨೦ ಯುವ ಸಂವತ್ಸರದ

೧೮. ಪುಷ್ಯ ಬಹುಳ ೧೧ ಆದಿವಾರಮುತ್ತರಾಯಣ ಸಂಕ್ರ[ಮ]

೧೯. ಣದಂದು ಅಗ್ರಹಾರಂ ಪಿರಿಯಬೆಳ್ಳಹಾಱ ಮೂಲ

೨೦, ಸ್ಥಾನ ದೇವರ್ಗ್ಗೆ ನಿವೇದ್ಯ ಅಖಣ್ಡ ನಂದಾದೀವಿಗೆ [ಗಂ]

೨೧. ಗಾನ್ಧರ್ವ್ವಕೆಂದ್ ಬಿಟ್ಟ [ಮುಡಿ]ಪು ಹೇಱ[?](ಱಿಂ)ಗೆ ಪೇರು ೧೬.

೨೨. ಲೊಕ್ಕಿಪಣಂ ೩ ವೀಸ ೧೦ ಇಂತರವಟ್ಟದ ಹೇಱು ೨

೨೩. ಲೊಕ್ಕಿಪಣ[ಂ] ೨ ವೀ ೧೦ ಮಂಗಳ ಮಹಾಶ್ರೀ

೨೪. ಅನ್ತು ತಿಂಗಳ ಹೇಱು ೨ ದಕ್ಷಿಣ ಸೊ....

೨೫. . .ಗಂಗೆಯ ತಡಿಯಲ್ ಸಾಯಿರ...

೨೬. ನಂ ಸಾಯಿರ ಬ್ರಾಹ್ಮಣರ್ಗ್ಗಂ ದಾನಂಗೆಯ್ದ

೨೭. ಫಲಮಕ್ಕು ನಡೆಸಿದರ್ಗ್ಗೆ ಧರ್ಮ್ಮ

---

7. ಸಣ್ಣದಾಗಿ ಮೇಲೆ ಬರೆದಿದೆ.

## ಎರಡನೇಯ ಶಾಸನ[8]

೧. ಓಂ [॥*] ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ರೋಪಮುತ್ತ
೨. ಮಂ[।*] ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನತ್ರಯಂ[9] ॥
೩. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾ
೪. ಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳ
೫. ತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲದೇವರ
೬. ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಾ ಚಂ
೭. ದ್ರಾರ್ಕ್ಕತರಂ ಸಲುತ್ತುಮಿರೆ ಜಯಂತೀಪುರದ ನೆಲೆವೀಡಿನೊ
೮. ಳು ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತುಮಿರೆ॥ ತತ್ಪಾದ
೯. ಪದ್ಮೋಪಜೀವಿಗಳಪ್ಪ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ[10] ಮಹಾಸಾಮಂತಂ
೧೦. ವಿಜಯಲಕ್ಷ್ಮೀಕಾಂತಂ ಕಾಳಂಜರಪುರವರಾಧೀಶ್ವರಂ [ಧೀ]ರಧಿ(ದಿ)
೧೧. ಭುಜಮಾಹೇಸ್ವ(ಶ್ವ)ರಂ ಸಲ್ಲಲಿತ [ಸಮುದ]ಯ ಗುಣಗಣೋತ್ತುಂಗಂ ಗೋ
೧೨. ತ್ರಪವಿತ್ರಂ ಸುಜನೈಕಮಿತ್ರಂ [ವೀರಾದಿ]ಪಾರ್ಥ ಸೌಜನ್ಯರತ್ನ[ಂ] ಶ್ರೀ
೧೩. ಮತ್ತ್ರಿಭುವನಮಲ್ಲದೇವರ ಚಿತ್ತಚಮತುಕಾರನೇಕಾಂಗವೀರ ನಾ
೧೪. ಮಾದಿ ಸಮಸ್ತಪ್ರಸ(ಶ)ಸ್ತಿಸಹಿತಂ ಶ್ರೀಮನುಮಹಾಸಾಮಂತ ಪಿರಿಯಬೇಂ
೧೫. ಟೆಯ ವಸಂತನಾಯಕ॥ ಶ್ರೀಮತ್ ಚಾಳುಕ್ಯ ವಿಕ್ರಮ ವರ್ಷ[ದ][11]ನಲ್ವತ್ತರೆ
೧೬. ದ[ನೆ][12]ಯ ಹೇಮಳಂಬಿ ಸಂವತ್ಸರದ ಪೌಷ್ಯದಮಾವಾಸೆ ಸೋಮವಾ
೧೭. ರದಂದುತ್ತರಾಯಣ ಸಂಕ್ರಾಂತಿ ನಿಮಿತ್ತಂ ಶ್ರೀ ಬಾಲಭಾಸ್ಕರದೇವರು
೧೮. ಪ್ರತಿಷ್ಠೆಮಾಡಿದ ಶ್ರೀಕೇಸ(ಶ)ವದೇವರಿಗಂ ನಿ(ನೈ)ವೇದ್ಯಕ್ಕೆ ಶ್ರೀಮದಾ
೧೯. ದಿತ್ಯ ದೇವರ ಗಡಿಂಬದ ಕೋಲೊಳು ಬಿಟ್ಟ ಕರಿಯನೆಲಂ ಮತ್ತ
೨೦. ರು ಹತ್ತು ಶ್ರೀಮದಗ್ರಹಾರ ಪಿರಿಯಬೆಳ್ವಹಾಲಿ[ದ][13] ಮಹಾಜನಂ

---

8. *A.R.Ep.*, B. No. 169 of 1978–79ರ ಶಾಸನಪ್ರತಿಯಲ್ಲಿರುವಂತೆ
9. ಅನುಷ್ಟುಪ್
10. 'ಮಹಾ-ಶಬ್ದ'—ಈ ಎರಡು ಶಬ್ದಗಳು ಇಲ್ಲ.
11. 'ದ' ಇಲ್ಲ
12. 'ನೆ' ಇಲ್ಲ
13. 'ದ' ಇಲ್ಲ

೨೧. ಸೂಚಿಪ್ಪದಿಂಬರು ರಕ್ಷಿಸುವರು [॥*] ಇನ್ತೀದರ್ಮ್ಮಮಂ ಪ್ರತಿ

೨೨. ಪಾಲಿಸಿದರ್ಗ್ಗೆ ಶ್ರೀವಾರಣಸಿಯಲು ಸಾಸಿರ್ವ್ವರು ಬ್ರಾ

೨೩. ಹ್ಮಣರ್ಗ್ಗೆ ಸಾಯಿ[ರ][14] ಕವಿಲೆಯ[15] ದಾನಂಮಾಡಿದ ಫಲಮಕ್ಕುಂ

೨೪. ಇ[ಈ] ದರ್ಮ್ಮಮನಳಿದರ್ಗ್ಗೆ[16] ಸಾಯಿರ ಕವಿಲೆಯುಮಂ ಬ್ರಾಹ್ಮಣರು

೨೫. [ಮ]ನಳಿದ ಪಾಪಂ ಅಕ್ಕುಂ। ಸ್ವದತ್ತಂ(ತ್ತಾಂ) ಪರದತ್ತಂ(ತ್ತಾಂ) ವಾಯೋ ಹರೇ

೨೬. ತು(ತ) ವಸುಂಧರಾಂ[।*] ಸ(ಷ)ಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾ

೨೭. ಯತೇ ಕ್ರಿಮಿಃ॥[17] ಮಹಾ ಶ್ರೀ ಶ್ರೀ ಬರೆದಂ[18] ದೇ[ವೋಜಂ]

೨೮. ಭೋಜಣಾರ್ಯ

(ಕನ್ನಡಾನುವಾದ/ಡಾ॥ ಸೂರ್ಯನಾಥ ಕಾಮತ್)

---

14. 'ರ' ಇಲ್ಲ
15. 'ಕವಿಲೆಯುಮಂ' ಎಂದು ಓದಿಕೊಳ್ಳಬೇಕು.
16. 'ಅಳಿದವರ್ಗ್ಗೆ' ಎಂದು ಓದಿಕೊಳ್ಳಬೇಕು.
17. ಅನುಷ್ಟುಪ್ ಛಂದಸ್ಸು
18. 'ಬರೆದೊಂ' ಎಂದು ಓದಿಕೊಳ್ಳಬೇಕು.

ಎಚ್. ಎಸ್. ಗೋಪಾಲರಾವ್

# ಕೈದಾಳದ ಹುಲಿಬೇಟೆಯ ವೀರಗಲ್ಲು ಶಾಸನ

ತುಮಕೂರು ತಾಲ್ಲೂಕಿನ ಗೂಳೂರು ಹೋಬಳಿಯ ಕೈದಾಳದ ಊರ ಹಿಂಭಾಗದಲ್ಲಿ, ಕೆಂಪಯ್ಯನ ಪಾಳ್ಯಕ್ಕೆ ಹೋಗುವ ಕಾಲುಹಾದಿಯ ಪಕ್ಕ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಹುಲಿಯನ್ನು ಇರಿದು ಕೊಲ್ಲುತ್ತಿರುವ ವೀರನ ಚಿತ್ರವಿರುವ, ಕಪ್ಪು ಕಣಶಿಲೆಯ ಈ ಶಾಸನ ಸಹಿತ ವೀರಗಲ್ಲಿನ ಎತ್ತರ ಸುಮಾರು ನಾಲ್ಕೂವರೆ ಅಡಿ ಮತ್ತು ಅಗಲ ಮೂರೂವರೆ ಅಡಿ. ವೀರಗಲ್ಲಿನ ಮಧ್ಯಭಾಗದಲ್ಲಿ ಹುಲಿಯನ್ನು ಕೊಲ್ಲುತ್ತಿರುವ ವೀರನ ಚಿತ್ರವಿದೆ. ಚಿತ್ರದ ಮೇಲೆ ನಾಲ್ಕುಸಾಲು, ಬಲಬದಿಗೆ ಆರುಸಾಲು ಮತ್ತು ಎಡಬದಿಗೆ ಎರಡುಸಾಲು ಶಾಸನವನ್ನು ಬರೆಯಲಾಗಿದೆ.

ಶಾಸನದ ಪಾಠ

೧. ಸ್ವಸ್ತಿಶ್ರೀ ಪಿಂಗಳ ಸಂವತ್ಸರದ ಶ್ರಾವಣ ಸು
೨. ದ್ಧ ಸಪ್ತಮಿ ಸೋಮವಾರದಂದು (ಸಾ)ವನ್ತ
೩. ಗೂಳಿಬಾಚಿಯ ಬಂಟ ಚಂದ ಹರಿಯ
೪. ದಿನ ಮಾರ ಪಲಬರು (ಸು)ಡಲು ಹು
೫. ಲಿಯನಿಱಿದು ಸತ್ತ
೬. ಡವರಣ್ಣ (ಅ)ದಳ ಹ
೭. ರಿ(ಲ)(ಟ)ಪ
೮. (ಕಾ)ರ್ರಬೆಸ
೯. (ಲ)ಕಾ ಮಾ
೧೦. ಡಿದ

ಕ್ರಿಸ್ತಶಕ ೧೨ನೆಯ ಶತಮಾನದ ಅತಿಸ್ವರೂಪದ ಈ ಶಾಸನವು ಹುಲಿಯನ್ನು ಇರಿದುಕೊಂದ ಚಂದನಿಗಾಗಿ ಅವರ ಅಣ್ಣ ಹಾಕಿಸಿದ್ದಾಗಿದೆ. ಚಂದನು ಗೂಳಿಬಾಚಿಯ ಬಂಟ. ಗೂಳಿಬಾಚಿಯು ಹೊಯ್ಸಳ ಒಂದನೆಯ ನರಸಿಂಹನ ಸಾಮಂತನಾಗಿ ಮರುಗೆರೆ ನಾಡನ್ನಾಳುತ್ತಿದ್ದವನು.[1] ಗಂಗರ ಕಾಲದ ಹಿರೀಗುಂಡಗಲ್ಲಿನ ಕೆಲವು ಶಾಸನಗಳಲ್ಲೂ ಉಕ್ತವಾಗಿರುವ ಮರುಗೆರೆ ನಾಡು[2] ಈಗಿನ ಮರಳೂರಿನ ವ್ಯಾಪ್ತಿಗೆ ಸೇರಿದ್ದ ಪ್ರದೇಶವಾಗಿರಬಹುದು.

ಶಾಸನದ ಪ್ರಕಾರ, ಸಾಮಂತ ಗೂಳಿಬಾಚಿಯ ಸೇವಕ ಚಂದನು ಹರಿಯ, ದಿನ(!), ಮಾರ ಮುಂತಾದವರು ನೋಡುತ್ತಿರಲು ಹುಲಿಯನ್ನು ಇರಿದು ಸತ್ತಾಗ ಅವರ ಅಣ್ಣ ವೀರಗಲ್ಲನ್ನು ಹಾಕಿಸುತ್ತಾನೆ. ವೀರಗಲ್ಲನ್ನು ಮಾಡಿದವನು 'ಲಕ್ಕ' ಎಂಬುವವನಿರಬೇಕು. ಶಾಸನದ ಕಲ್ಲಿನಲ್ಲಿ ಚಿಕ್ಕೆ ಎದ್ದಿರುವುದರಿಂದ ಕೆಲವು ಅಕ್ಷರಗಳು ಅಸ್ಪಷ್ಟವಾಗಿವೆ.

ಹುಲಿಯನ್ನು ಬೇಟೆಯಾಡಲು, ಅದು ಊರಿನ ಜನ-ಜಾನುವಾರುಗಳಿಗೆ ತೊಂದರೆ ಮಾಡುವುದು ಎಂಬ ಕಾರಣವೇ ಪ್ರಮುಖವಾದುದು. ದುಷ್ಟಪ್ರಾಣಿಯಿಂದ ತಮ್ಮನ್ನೂ ತಮ್ಮ ಜಾನುವಾರುಗಳನ್ನೂ ರಕ್ಷಿಸಿದವನನ್ನು ಜನತೆ 'ವೀರ' ಎಂದು ಪರಿಗಣಿಸಿ ಗೌರವಿಸುತ್ತಿತ್ತು. ವೀರರಿಗೆ ಸಂದ ಗೌರವದ ಸ್ಮಾರಕವೇ ವೀರಗಲ್ಲುಗಳು.

1. ಎ. ಕ., ಸಂಪುಟ ೧೨, ತುಮಕೂರು ೯, ಕ್ರಿ. ಶ. ೧೧೫೧
2. ಅದೇ, ತುಮಕೂರು ೯೮, ಕ್ರಿ.ಶ.ಸು. ೭೭೫

ಹುಲಿಯ ಬೇಟೆಯಲ್ಲಿ ವೀರ ಸತ್ತಿರಬಹುದು ಅಥವಾ ಸಾಯದೆ ಗೆದ್ದು ಬಂದಿರಬಹುದು. ಹುಲಿಯ ಬೇಟೆಯಲ್ಲಿ ಸತ್ತ ನಾಯಿಗಳಿಗೂ ವೀರಗಲ್ಲನ್ನು ಹಾಕಿಸಿರುವ ನಿದರ್ಶನಗಳಿವೆ.

ಚಂದ ಹುಲಿಯನ್ನು ಇರಿದುದನ್ನು ಹಲವರು ನೋಡಿದ್ದಾರೆ. ಹುಲಿಯನ್ನು ಇರಿದು ಚಂದ ಸತ್ತದ್ದಕ್ಕಾಗಿ ಈ ವೀರಗಲ್ಲನ್ನು ಹಾಕಲಾಗಿದೆ.

'ವೀರ'ಚಂದನು ಗೂಳಿಬಾಚಿಯ ಭಂಟನಾಗಿದ್ದವನು. ಗೂಳಿಬಾಚಿಯ ಕಾಲ ಕ್ರಿ. ಶ. ೧೧೫೧ರ ಸುಮಾರು ಎಂದು ಕೈದಾಳದ ಒಂದು ಶಾಸನದಿಂದ ತಿಳಿದಿದೆ. ಕೈದಾಳದಲ್ಲಿರುವ ಚಂನಕೇಶವ, ಪ್ರಸನ್ನ ಗಂಗಾಧರೇಶ್ವರ, ರಾಮೇಶ್ವರ, ಕಿತ್ತಗಳಿಯ ಚಲವರಿವೇಶ್ವರ, ಭೀಮಸಂದ್ರದ ಭೀಮಜಿನಾಲಯ ಇಷ್ಟನ್ನು ತಂದೆ, ಮಗಳು, ಮುತ್ತಜ್ಜ ಮತ್ತು ಹೆಂಡತಿಯರ ಪರೋಕ್ಷವಿನಯವಾಗಿ ಗೂಳಿಬಾಚಿದೇವನು ನಿರ್ಮಿಸಿದ್ದಾನೆ.[3] ದಂತಕಥೆಗಳ ಪ್ರಕಾರ ಕೇಶವ ದೇವಾಲಯವನ್ನು ನಿರ್ಮಿಸಿದವನು ಜಕಣಾಚಾರಿ. ಇದಕ್ಕೆ ಶಾಸನಾಧಾರಗಳಿಲ್ಲ. ಆ ದೇವಾಲಯದ ನಿರ್ಮಾತೃ ಗೂಳಿಬಾಚಿದೇವ ಎಂಬುದು ಇತಿಹಾಸ ತಿಳಿಸುವ ಸಂಗತಿ.

ಗೂಳಿಬಾಚಿದೇವನ ಉಲ್ಲೇಖವಿರುವ ಈಗಾಗಲೇ ಉಲ್ಲೇಖಿಸಿದ ಶಾಸನದ ಕಾಲ ಕ್ರಿ.ಶ. ೧೧೫೧ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಶಾಸನದಲ್ಲಿ ಉಕ್ತವಾಗಿರುವ ಕಾಲ ೧೦೭೨ನೆಯ ಪ್ರಮಾಥಿ ಸಂವತ್ಸರ· ಅಂದರೆ ಕ್ರಿ.ಶ. ೧೧೫೦–೧೧೫೧ಕ್ಕೆ ಸರಿಯಾಗುತ್ತದೆ. ಆದರೆ ಶಾ.ಶ. ೧೧೭೨ ಪ್ರಮೋದೂತ ಸಂವತ್ಸರವಾಗಿತ್ತು. ಪ್ರಮೋದೂತದ ಬದಲಿಗೆ ಪ್ರಮಾಥಿ ಎಂದು ಉಲ್ಲೇಖವಾಗಿದೆ ಎಂದು. ಅದು ಪ್ರಮಾಥಿಯೇ ಎಂದು ಸ್ವೀಕರಿಸುವುದಾದರೆ ಅದರ ಕಾಲವು ಕ್ರಿ.ಶ. ೧೧೩೪ ಅಥವಾ ೧೧೯೪ ಆಗುತ್ತದೆ–ಎರಡೂ ಕಾಲದಲ್ಲಿ ಒಂದನೆಯ ನರಸಿಂಹನು ರಾಜ್ಯಭಾರ ಮಾಡುತ್ತಿರಲಿಲ್ಲ· ಆದ್ದರಿಂದ ಪ್ರಮೋದೂತ ಸಂವತ್ಸರವೇ ಸರಿಯಾದ ಕಾಲ. ಅದೇ ಕಾಲದ ನೆರವಿನಿಂದ ಪ್ರಸ್ತುತ ಶಾಸನದಲ್ಲಿ ಉಕ್ತವಾಗಿರುವ ತಿಂಗಳ ಸಂವತ್ಸರವು ಕ್ರಿ.ಶ. ೧೧೩೮ರ (ಶಾ.ಶ. ೧೦೫೯) ಎಂದು ನಿರ್ಣಯಿಸಬಹುದಾಗಿದೆ.

ಗೂಳಿಬಾಚಿದೇವನು ಕ್ರಿ.ಶ. ೧೧೫೧ರಲ್ಲಿ ಕೈದಾಳ, ಕಿತ್ತಗಳಿ, ಭೀಮಸಂದ್ರಗಳಲ್ಲಿ ದೇವಾಲಯಗಳನ್ನು ಕಟ್ಟಿಸುವುದಕ್ಕೆ ಹದಿಮೂರು ವರ್ಷಗಳಿಗೆ ಮೊದಲೇ ಅಂದರೆ ಕ್ರಿ.ಶ. ೧೧೩೮ರಲ್ಲಿ, ಪ್ರಸ್ತುತ ವೀರಗಲ್ಲಿನ ಶಾಸನವನ್ನು ಹಾಕಿಸಲಾಗಿದೆ. ಗೂಳಿಬಾಚಿಯ ಮೊದಲ ಉಲ್ಲೇಖವಿರುವ ಶಾಸನವೇ ಈಗ ಪ್ರಕಟವಾಗುತ್ತಿರುವ ವೀರಗಲ್ಲು ಶಾಸನ ಎಂದು ತಿಳಿಯಬಹುದಾಗಿದೆ.

ಗೂಳಿಬಾಚಿಯು ಅದಳವಂಶಕ್ಕೆ ಸೇರಿದವನು ಎಂದು ಕೈದಾಳದ ಶಾಸನ ದಾಖಲಿಸಿದೆ. 'ಅದಳರಾದಿತ್ಯಂ', 'ಅದಳಕುಳಹಂಸ', 'ಅದಳಕುಳಾನ್ವಯ' ಎಂದೆಲ್ಲಾ ಗೂಳಿಬಾಚಿಯನ್ನು ಪ್ರಶಂಸಿಸಲಾಗಿದೆ.

ಶಿವಗಂಗೆಯ ಒಂದು ಶಾಸನವು ವಿಷ್ಣುವರ್ಧನನನ್ನು 'ಅದಳಕುಳರತ್ನಭೂಷಣನದಳಕುಳಾಂಭೋಜಭಾನು' ಎಂದು ಪ್ರಶಂಸಿಸಿ ಅವನು ಪ್ರತಿಷ್ಠಿಸಿದ ಈಶ್ವರನಿಗೆ ಅದಳೇಶ್ವರ ಎಂದು ಉಲ್ಲೇಖಿಸಿದೆ.[4] ಶಾಸನವು ಬಿಟ್ಟಿದೇವ ಎಂದೇ ವಿಷ್ಣುವರ್ಧನನನ್ನು ಸಂಬೋಧಿಸಿದೆ. ಇದರಿಂದ ಹೊಯ್ಸಳವಂಶವನ್ನೇ ಅದಳವಂಶವೆಂದೂ ಕರೆಯಲಾಗಿದ್ದಂತೆ ತೋರುತ್ತದೆ. ಕೊತ್ತಗೆರೆಯ ಒಂದು ಶಾಸನವು ವಿಷ್ಣುವರ್ಧನನನ್ನು ಯಾದವಸಿಂಹನೆಂದು ಉಲ್ಲೇಖಿಸಿದೆ. ದೊಡ್ಡಬಿದಿರೆಯ ಒಂದು ಶಾಸನವು ಅದೇ ವಿಷ್ಣುವರ್ಧನನನ್ನು ಆದವಕುಳತಿಳಕನೆಂದು ಹೊಗಳಿದೆ. ಈ ಹಿನ್ನೆಲೆಯಲ್ಲಿ ಯಾದವ> ಆದವ>ಅದಳ ವಂಶಗಳೆಲ್ಲಾ ಒಂದೇ—ಅದು ಹೊಯ್ಸಳರ ಮೂಲವಂಶವನ್ನು ಸೂಚಿಸುತ್ತದೆ ಎಂದು ತಿಳಿಯಬಹುದು—ಅದನ್ನು ಒಪ್ಪಿದರೆ ಗೂಳಿಬಾಚಿಯು ಅದಳವಂಶಕ್ಕೆ ಅಂದರೆ ಹೊಯ್ಸಳವಂಶಕ್ಕೆ ಸೇರಿದವನು ಎಂದು ತೀರ್ಮಾನಿಸಬೇಕಾಗುತ್ತದೆ.

ಅದಳವು ಅದಟದ ರೂಪ ಎಂದು ಸ್ವೀಕರಿಸುವುದಾದರೆ ಅದು 'ವೀರ'ತನದ ಅಥವಾ ಕಲಿತನವನ್ನು ಸೂಚಿಸುತ್ತದೆ.

3. ಅದೇ, ತುಮಕೂರು ೯, ಕ್ರಿ.ಶ. ೧೧೫೧
4. ಅದೇ, ಸಂಪುಟ ೯, ನೆಲಮಂಗಲ ೮೪, ಕ್ರಿ.ಶ. ೧೧೫೩

ಆದಟಕ್ಕೆ ವೀರ ಎಂಬ ಅರ್ಥವೇ ಇದೆ. ಆದ್ದರಿಂದ ಅದಳವಂಶವು ವೀರದವಂಶ ಎಂದಷ್ಟೇ ತಿಳಿಯಬೇಕಾಗುತ್ತದೆ. ಆದ್ದರಿಂದ ಅದಳವಂಶವು ಹೊಯ್ಸಳ ವಂಶವನ್ನೇ ಪ್ರತಿನಿಧಿಸುತ್ತದೆ ಎಂದು ತಿಳಿಯಬಹುದಾಗಿದೆ.

ಹುಲಿಯ ಬೇಟೆಯ ವೀರಗಲ್ಲುಗಳ ಸಂಖ್ಯೆ ಕಡಿಮೆ ಎಂದೇ ಹೇಳಬಹುದು. ಕೋಲಾರ, ಚಿತ್ರದುರ್ಗ, ಚಿಕ್ಕಮಗಳೂರು, ಬೆಂಗಳೂರು ಜಿಲ್ಲೆಗಳಲ್ಲಿ ಹಲವು ಹುಲಿಯ ಬೇಟೆಯ ವೀರಗಲ್ಲುಗಳನ್ನು ಡಾ॥ ಆರ್. ಶೇಷಶಾಸ್ತ್ರಿ ಅವರು ಗುರುತಿಸಿದ್ದಾರೆ.[5]

ಕಾಡು ಹೆಚ್ಚಾಗಿದ್ದ ಕಡೆ ಹುಲಿಗಳು ಇರುವುದು ಸ್ವಾಭಾವಿಕ. ಈಗ ದಟ್ಟವಾಗಿ ಕಾಡಿಲ್ಲದ ತುಮಕೂರು ತಾಲ್ಲೂಕಿನಲ್ಲಿ ಆಗ ದಟ್ಟವಾದ ಕಾಡುಗಳಿದ್ದುವು ಎಂದು ಊಹಿಸಬಹುದಾಗಿದೆ.

ಕೈದಾಳದಲ್ಲೇ ಇನ್ನೂ ಮೂರು ವೀರಗಲ್ಲುಗಳಿವೆ, ಇವುಗಳಲ್ಲಿ ಪ್ರಸನ್ನ ಗಂಗಾಧರೇಶ್ವರ ದೇವಸ್ಥಾನದ ಬಳಿ ಇರುವ ಒಂದು ಮತ್ತು ರಾಮೇಶ್ವರ ದೇವಸ್ಥಾನದ ಬಳಿ ಇರುವ ಒಂದು ವೀರಗಲ್ಲಿನಲ್ಲಿ ವೀರನು ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ—ಇವೆರಡರಲ್ಲೂ ವೀರನ ಹಿಂದೆ ಸ್ತ್ರೀ ನಿಂತಿದ್ದಾಳೆ. ಆದ್ದರಿಂದ ಇವೆರಡೂ ಪೆಣ್ಬುಯ್ಯಲ್‌ನ ಶಾಸನಗಳಾಗಿರಬಹುದು. ಶಾಸನಗಳ ಪಾಠವು ಸ್ಪಷ್ಟವಾಗಿಲ್ಲ. ರಾಮೇಶ್ವರ ದೇವಾಲಯದ ಬಳಿ ಇರುವ ಒಂದು ವೀರಗಲ್ಲಿನಲ್ಲಿ ಯೋಧನೊಬ್ಬನಿದ್ದಾನೆ ; ಶಾಸನವಿಲ್ಲ. ಶಾಸನವಿರುವ ಎರಡೂ ವೀರಗಲ್ಲುಗಳ ಕಾಲ ಕ್ರಿ.ಶ. ಸು. ೧೧೫೦ ಎನ್ನಬಹುದು.

---

5. ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು, ೧೯೮೨, ಪು. ೧೩೪-೧೩೮

ಎಂ. ಎಂ. ಮೀನಾಕ್ಷಿ

# ಕೊಡಗಿನ ಎರಡು ಅಪೂರ್ವ ಶಾಸನಗಳು

ಕೊಡಗಿನ ಮಡಿಕೇರಿ ತಾಲ್ಲೂಕಿನ ಪಾಲೂರು ಮತ್ತು ಭಾಗಮಂಡಲಗಳಲ್ಲಿ ಎರಡು ಶಿಲಾಶಾಸನಗಳು ದೊರಕಿವೆ. ಪಾಲೂರಿನ ಶಾಸನವು ಅಲ್ಲಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿದೆ. ಎರಡನೆಯದು ಭಾಗಮಂಡಲದ ಭಗಂಡೇಶ್ವರ ದೇವಾಲಯದಲ್ಲಿದೆ. ಈ ಎರಡೂ ಶಿಲಾಶಾಸನಗಳಲ್ಲಿ ಹೇಳಿರುವ ಸಂಗತಿಗಳು ಹೆಚ್ಚು ಕಡಿಮೆ ಒಂದೇ ಆಗಿರುವುದರಿಂದ, ಈ ಶಿಲಾಶಾಸನಗಳನ್ನು ಇಲ್ಲಿ ಒಟ್ಟಿಗೆ ಗಮನಿಸಲಾಗಿದೆ. ಅಷ್ಟೇ ಅಲ್ಲದೆ, ಇವುಗಳು ಕುತೂಹಲಕರವಾದ ಮತ್ತು ಆಸಕ್ತಿಯುತವಾದ ವಿಷಯಗಳನ್ನು ತಿಳಿಸುವುದರಿಂದ ಈ ಎರಡು ಶಾಸನಗಳನ್ನೂ ಇಲ್ಲಿ ವಿಮರ್ಶಿಸಲಾಗಿದೆ. ಈ ಶಾಸನಗಳ ಪಾಠವನ್ನು ಎಪಿಗ್ರಾಫಿಯ ಕರ್ನಾಟಿಕಾದ ಮೊದಲನೆಯ ಸಂಪುಟದಲ್ಲಿ ಕೊಡಲಾಗಿದೆ; ಅದರ ಆಧಾರದ ಮೇಲೆ ಇಲ್ಲಿ ವಿಷಯಗಳನ್ನು ಚರ್ಚಿಸಲಾಗಿದೆ.[1]

ಮೊದಲನೆಯದಾಗಿ ಈ ಶಾಸನಗಳ ಭಾಷೆಯನ್ನು ಗಮನಿಸಬೇಕು. ಸಂಸ್ಕೃತ, ತಮಿಳು, ಮಲೆಯಾಳಂ ಮತ್ತು ತುಳು ಭಾಷೆಯಲ್ಲಿ ಶಾಸನಗಳು ಬರೆಯಲ್ಪಟ್ಟಿವೆ. ಒಂದೇ ಶಾಸನದಲ್ಲಿ ಈ ರೀತಿ ನಾಲ್ಕು ಭಾಷೆಗಳನ್ನು ಬಳಸಿರುವುದು ಅಪರೂಪವೇ ಸರಿ. ಎಲ್ಲ ಶಾಸನಗಳಲ್ಲಿಯೂ ಇರುವಂತೆ ಪಾಲೂರು ಶಾಸನವು ಸಂಸ್ಕೃತದಲ್ಲಿ ವಿನಾಯಕ, ಗುರು, ದೇವಿ ಮತ್ತು ಸರಸ್ವತಿಯರನ್ನು ವಂದಿಸುತ್ತದೆ. ಭಾಗಮಂಡಲದ ಶಾಸನವೂ ಸಂಸ್ಕೃತದಲ್ಲಿ ಪ್ರಾರಂಭವಾಗಿ ಗುರುವನ್ನು ಸ್ತುತಿಸುತ್ತದೆ. ಮೊದಲನೆಯ ಶಾಸನದಲ್ಲಿ ಇಪ್ಪತ್ತಾರು ಸಾಲುಗಳೂ ಎರಡನೆಯ ಶಾಸನದಲ್ಲಿ ಮೂವತ್ತೊಂದು ಸಾಲುಗಳೂ ಇವೆ.

ಶಾಸನಗಳ ಲಿಪಿಯಲ್ಲಿಯೂ ವೈವಿಧ್ಯತೆಯಿರುವುದು ಗಮನಾರ್ಹವಾದ ಅಂಶ. ಗ್ರಂಥ, ಮಲಯಾಳಂ, ತಮಿಳು ಮತ್ತು ವಟ್ಟೆಳುತ್ತು ಲಿಪಿಗಳನ್ನು ಒಂದೇ ಶಾಸನದಲ್ಲಿ ನೋಡಬಹುದು. ಇದೂ ಕೂಡಾ ಕುತೂಹಲಕರವಾದ ಮತ್ತು ಅಪರೂಪದ ಸಂಗತಿ. ಈ ರೀತಿ ಸಣ್ಣ ಶಾಸನವೊಂದರಲ್ಲಿ ನಾಲ್ಕು ಲಿಪಿಗಳನ್ನು ಏಕೆ ಬಳಸಿದ್ದಾರೆ ಎನ್ನುವುದಕ್ಕೆ ಕಾರಣವು ತಿಳಿದುಬಂದಿಲ್ಲ.

ಈ ಎರಡೂ ಶಾಸನಗಳಲ್ಲಿಯೂ ಬೋಧರೂಪ ಭಗವರ್ ಎನ್ನುವ ವ್ಯಕ್ತಿಯ ಉಲ್ಲೇಖವಿದೆ. ಇವನು ಪುರುಷೋತ್ತಮ ಪರ್ಷದ ಅವಿದ್ಯಾಮೃತ್ಯು ಭಟ್ಟಾರಕರ ಶಿಷ್ಯನೆಂದು ಪಾಲೂರು ಶಾಸನದಲ್ಲಿ ಹೇಳಿದೆ. ಎರಡನೆಯ ಶಾಸನದಲ್ಲಿ ಬೋಧರೂಪ ಭಗವರ್ ಪುರುಷೋತ್ತಮ ಪರ್ಷದ್‌ಗೆ ಸೇರಿದವನೆಂದು ಮಾತ್ರ ಹೇಳಿದೆ. ಇವನು ಯಾರು ಎನ್ನುವ ವಿಷಯದಲ್ಲಿ ಸಾಕಷ್ಟು ಮಾಹಿತಿ ದೊರಕಿಲ್ಲ. ಲೂಯಿರೈಸರು ಇವನು ಬೋಧ ಮಹಾದೇವ ಎನ್ನುವ ರಾಜನಿರಬೇಕೆಂದು ಊಹಿಸಿದ್ದರು. ಇವನು ಹಾಸನ ಜಿಲ್ಲೆಯಲ್ಲಿ ಕ್ರಿ.ಶ. ೧೩೭೧ರಲ್ಲಿ ಆಳು

1. ನೋಡಿ : ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡಿರುವ ಎಪಿಗ್ರಾಫಿಯ ಕರ್ನಾಟಿಕಾದ ಮೊದಲನೆಯ ಸಂಪುಟದ ಪರಿಷ್ಕೃತ ಆವೃತ್ತಿ, ೧೯೭೨, ಶಾಸನಗಳ ಸಂಖ್ಯೆ ೨೦ ಮತ್ತು ೨೧

ತ್ತಿದ್ದನೆಂದು ಮೂಡಿಗೆರೆ ಶಾಸನದಲ್ಲಿ ಹೇಳಲಾಗಿದೆ.[2] ಇವನ ರಾಜಧಾನಿ ಮಹಾರಾಜದುರ್ಗ. ಇದು ಹಾಸನ ಜಿಲ್ಲೆಯಲ್ಲಿದೆ. ಈ ಸಮೀಕರಣಕ್ಕೆ ಬೋಧ ಎನ್ನುವ ಪದವೇ ಮುಖ್ಯವಾಗಿದೆಯೇ ಹೊರತು, ಬೇರೆ ಯಾವ ಮಾಹಿತಿಯೂ ಇಲ್ಲವೆಂಬುದನ್ನು ಗಮನಿಸಬೇಕು. ಬೋಧ ಮಹಾದೇವನು ಈ ಶಾಸನದ ಬೋಧರೂಪ ಭಗವರ್ ಆಗಿದ್ದಿರಲು ಸಾಧ್ಯವಿದ್ದರೂ ಹೆಚ್ಚಿನ ಮಾಹಿತಿ ಇಲ್ಲದೆ ಈ ವಾದವನ್ನು ಒಪ್ಪುವುದು ಕಷ್ಟವಾಗಿ ತೋರುತ್ತದೆ. ಅಲ್ಲದೆ, ಬೋಧ ಮಹಾದೇವನು ಕೊಡಗಿಗೆ ಬಂದುದಾಗಲೀ ಇಲ್ಲಿ ರಾಜ್ಯವನ್ನು ಸ್ಥಾಪಿಸಿದುದಾಗಲೀ ಇತರ ಶಾಸನಗಳಿಂದ ತಿಳಿದುಬಂದಿಲ್ಲ, ಆದುದರಿಂದ, ಲೂಯಿರೈಸರ ಅಭಿಪ್ರಾಯವನ್ನು ಒಪ್ಪುವುದು ಕಷ್ಟ.

ಇಲ್ಲಿ ಇನ್ನೂ ಒಂದು ಅಂಶವನ್ನು ಗಮನಿಸಬೇಕು. ಬೋಧಿರೂಪ ಭಗವರ್ ರಾಜನಾಗಿದ್ದನೇ ಎನ್ನುವುದನ್ನು ಪರಿಶೀಲಿಸಬೇಕು. ಪಾಲೂರಿನ ಶಾಸನದಲ್ಲಿ ಅವನು ರಾಜನಾಗಿ ಇದ್ದ ಎಂಬುದಕ್ಕೆ ಯಾವ ಸಾಕ್ಷಿಯೂ ಇಲ್ಲ. ಯಾವ ಬಿರುದುಗಳಾಗಲೀ ರಾಜಸೂಚಕ ಪದಗಳಾಗಲೀ ಮೊದಲನೆಯ ಶಾಸನದಲ್ಲಿ ಕಾಣಬರುವುದಿಲ್ಲ ಎಂಬ ಅಂಶ ಗಮನಾರ್ಹ. ಆದರೆ ಎರಡನೆಯ ಭಾಗಮಂಡಲದ ಶಾಸನದಲ್ಲಿ ಮಾತ್ರ ಬೋಧರೂಪ ಭಗವರ್ ಅರಸು ಎನ್ನುವ ಪದ ಇದೆ. ಆದರೆ ರಾಜನ ಬಿರುದು ಬಾವಲಿಗಳಾಗಲೀ, ವಂಶದ ಹೆಸರಾಗಲೀ ಯಾವುದೂ ಇಲ್ಲ. ಆದರೆ ಇವನು ಅವಿದ್ಯಾಮೃತ್ಯು ಭಟ್ಟಾರಕರ ಶಿಷ್ಯ ಹಾಗೂ ಪುರುಷೋತ್ತಮ ಪರಿಷದದ ಅನುಯಾಯಿ ಎಂದು ಹೇಳಿರುವುದು ಗಮನಾರ್ಹ. ಆದುದರಿಂದ ಬೋಧರೂಪನು ಒಬ್ಬ ಧಾರ್ಮಿಕ ವ್ಯಕ್ತಿಯಾಗಿರುವುದು ಹೆಚ್ಚು ನಂಬಲರ್ಹವಾಗಿ ಕಾಣುತ್ತದೆ. ಅದೂ ಅಲ್ಲದೆ ಶಾಸನದಲ್ಲಿ ಹೆಸರಿಸಿರುವುದು ಮೇಲ್ಪುಂಡಿ ಕುನ್ನಿಯರಸನನ್ನು. ಅವನು ಆ ನಾಡಿನ ಅಧಿಪತಿಯಾಗಿದ್ದನು. ಬೋಧರೂಪ ಭಗವರ್ ಎನ್ನುವ ಹೆಸರಿನ ಕೊನೆಯ ಭಾಗ, ಭಗವರ್ ಎನ್ನುವುದೂ ಕೂಡ ಧಾರ್ಮಿಕ ಇಲ್ಲವೇ ಪೂಜನೀಯ ವ್ಯಕ್ತಿತ್ವವನ್ನು ಸೂಚಿಸುತ್ತದೆಯೇ ಹೊರತು, ರಾಜನನ್ನಲ್ಲ ಎಂಬುವುದೂ ಗಮನೀಯ ಸಂಗತಿ.

ಹಾಗಾದರೆ ಬೋಧರೂಪ ಭಗವರ್ ಮಾಡಿದ ಕಾರ್ಯವಾದರೂ ಏನೆಂದರೆ, ಈ ಶಾಸನವನ್ನು ಬರೆಯಿಸಿ ದೇವಸ್ಥಾನಗಳಿಗೆ ದತ್ತಿಯ ಏರ್ಪಾಟನ್ನು ಮಾಡಿರುವುದು. ಇಂತಹ ಕೆಲಸಕಾರ್ಯಗಳನ್ನು ದೇವಾಲಯದ ಸ್ಥಾನತ್ತಾರ್‌ಗಳು ನಿರ್ವಹಿಸುತ್ತಿದ್ದರೆಂಬುದು ಎಲ್ಲರಿಗೂ ತಿಳಿದ ವಿಷಯ. ಆದುದರಿಂದ ಬೋಧರೂಪನೂ ಧಾರ್ಮಿಕ ವ್ಯಕ್ತಿಯಾಗಿದ್ದು ಬಹುಶಃ ಸ್ಥಾನತ್ತಾರ್ ಆಗಿದ್ದು, ದೇವಾಲಯಗಳ ಕೈಂಕರ್ಯಗಳಿಗೆ ವ್ಯವಸ್ಥೆ ಮಾಡಿಸಿದನೆಂದು ಹೇಳಲು ಸಾಕಷ್ಟು ಅವಕಾಶವಿರುವುದರಿಂದ ಮತ್ತು ಅದು ಹೆಚ್ಚು ಸಮಂಜಸವಾಗಿ ತೋರುವುದರಿಂದ, ಬೋಧರೂಪನನ್ನು ಒಬ್ಬ ರಾಜನನ್ನಾಗಿ ಪರಿಗಣಿಸುವುದು ಅಷ್ಟು ಸರಿಯಲ್ಲ ಎಂದು ತೋರುತ್ತದೆ. ವಿಜಯನಗರ ಕಾಲದಲ್ಲಿ ಸ್ಥಾನಿಕ ಅಥವಾ ಸ್ಥಾನತ್ತಾರ್ ಎಂಬುವವರು ದೇವಾಲಯಗಳ ಆಡಳಿತದ ಮೇಲ್ವಿಚಾರಕರಾಗಿದ್ದು, ಧಾರ್ಮಿಕ ಕಾರ್ಯಗಳ ಅಧಿಕಾರಿಗಳಾಗಿದ್ದರು ಎನ್ನುವ ಅಂಶವನ್ನು ಡಾ॥ ಟಿ. ವಿ. ಮಹಾಲಿಂಗಂ ಸ್ಪಷ್ಟಪಡಿಸಿದ್ದಾರೆ.[3] ಆದುದರಿಂದ ಬೋಧರೂಪನು ಸ್ಥಾನತ್ತಾರ್ ಏಕೆ ಆಗಿರಬಾರದೆಂಬ ಊಹೆಯನ್ನು ನಾವು ಗಮನಿಸಬೇಕು.

ಪಾಲೂರು ಶಾಸನದಲ್ಲಿ ದತ್ತಿಯ ನಿರ್ವಹಣೆಗೆ ಏರ್ಪಾಡು ಮಾಡಿರುವ ವಿಷಯ ಪ್ರಸ್ತಾಪಿತವಾಗಿದೆ. ಇದರ ಪ್ರಕಾರ ಶ್ರೀವೈಷ್ಣವರು, ವ್ಯಾಪಾರಿಗಳು ಮತ್ತು ಬ್ರಾಹ್ಮಣರು ಈ ದತ್ತಿಯನ್ನು ಸರಿಯಾಗಿ ನಡೆಸಿಕೊಂಡು ಬರಬೇಕೆಂಬ ನಿಯಮವು ಹೇಳಲ್ಪಟ್ಟಿದೆ. ಇಲ್ಲಿ ಹೇಳಿರುವ ಮಹಾದೇವ ದೇವಾಲಯವೇ ಈಗಿನ ಮಹಾಲಿಂಗೇಶ್ವರ ದೇವಾಲಯ. ಇಲ್ಲಿ ಸ್ವಾರಸ್ಯದ ಸಂಗತಿ

---

2. ಲೂಯಿರೈಸ್ : ಕೂರ್ಗ್ ಇನ್ಸ್‌ಕ್ರಿಪ್ಷನ್ಸ್, ಬೆಂಗಳೂರು, ೧೯೧೪, ಪು. ೧೯
3. ಅಡ್ಮಿನಿಸ್ಟ್ರೇಷನ್ ಅಂಡ್ ಸೋಷಿಯಲ್ ಲೈಫ್ ಅಂಡರ್ ವಿಜಯನಗರ, ಮದರಾಸು, ೧೯೪೦, ಪು. ೨೨೭

ಎಂದರೆ ಶೈವ ದೇವಾಲಯದ ದತ್ತಿಯನ್ನು ನೋಡಿಕೊಳ್ಳಲು ವೈಷ್ಣವರನ್ನು ನಿಯಮಿಸಿರುವುದು. ವರ್ಷಕ್ಕೊಂದು ಸಾರಿ, ದೇವಾಲಯದ ಲೆಕ್ಕಪತ್ರಗಳನ್ನು ಎಲ್ಲರ ಮುಂದೂ ಇಡಬೇಕೆಂಬ ನಿಯಮವೂ ಗಮನಿಸಬೇಕಾದ ಅಂಶ.

ಭಾಗಮಂಡಲದ ಶಾಸನ ಇನ್ನೂ ಹೆಚ್ಚಿನ ವಿವರಗಳನ್ನು ಒದಗಿಸುತ್ತದೆ. ಮೊದಲು ಈ ಶಾಸನವನ್ನು ತಾಮ್ರಪತ್ರಗಳ ಮೇಲೆ ಬರೆಯಿಸಲಾಗಿದ್ದಿತೆಂದೂ ಅನಂತರ ಎಲ್ಲ ಜನಗಳ ಗಮನಕ್ಕೂ ಬರಲೆಂಬ ಉದ್ದೇಶದಿಂದ ಕಲ್ಲಿನ ಮೇಲೆ ಬರೆಯಿಸಲಾಯಿತೆಂದೂ ತಿಳಿಯುತ್ತದೆ. ಈ ದೇವಾಲಯಕ್ಕೆ ಒದಗಿಸಲಾದ ದತ್ತಿಯನ್ನು ಒಂದುದಿನದ ಮಟ್ಟಿಗಾದರೂ ಯಾರಾದರೂ ಕುನ್ನಿಯರಸನೂ ಸೇರಿದಂತೆ ಪಾಲಿಸದೆ ಹೋದರೆ, ದಿನಕ್ಕೆ ಹನ್ನೆರಡು ಕಾಣಂ ಮತ್ತು ದಿನನಿತ್ಯದ ಎರಡರಷ್ಟು ದತ್ತಿಯನ್ನು ಕೊಡಬೇಕು. ಹಾಗೆ ಒಂದು ವಾರ ಮಾಡಿದರೆ ಹನ್ನೆರಡು ಕಳಂಜುಗಳನ್ನು ಕೊಡಬೇಕಾಗುತ್ತದೆ. ಕಾಣಂ ಮತ್ತು ಕಳಂಜುಗಳು ಆ ಕಾಲದ ನಾಣ್ಯಗಳು.

ದತ್ತಿಯಲ್ಲಿ ಸೇರಿಸುವ ಅಂಶಗಳೆಂದರೆ ಹದಿನೇಳು ದೀಪಗಳು, ೨೬ ನಾಳಿ ಅಕ್ಕಿ, ಹೋಮಕ್ಕೆ ೨ ನಾಳಿ ಮತ್ತು ಹೂವುಗಳಿಗಾಗಿ ನಾಲ್ಕು ನಾಳಿ. ಇವುಗಳ ಜೊತೆಗೆ ವೃಶ್ಚಿಕ ಮಾಸದಲ್ಲಿ ಪ್ರತಿದಿನವೂ ಮೂವತ್ತೆರಡು ಹೂವಿನ ಮಾಲೆಗಳೂ ಮತ್ತು ಆರು ದೀಪಗಳೂ ಹೆಚ್ಚಿಗೆ ಕೊಡಬೇಕು. ಜನಗಳು ಮಾಡುವ ಸೇವೆಯಲ್ಲಿ ಮಹಾಭಾರತ ವಾಚನವೂ ಸೇರಿದ್ದು, ಈ ಯಾವ ವಿಷಯಗಳಲ್ಲಿಯೂ ಲೋಪವುಂಟಾದರೆ ದಿನಕ್ಕೆ ಎರಡೂವರೆ ಕಾಣಂ ಕೊಡಬೇಕು.[4] ಈ ಶಾಸನದಲ್ಲಿ ಯಾವ ವಿಷಯವಾದರೂ ಬಿಟ್ಟುಹೋಗಿದ್ದರೆ, ಅದನ್ನು ದೇವಾಲಯದ ಲೆಕ್ಕದ ಪುಸ್ತಕದಲ್ಲಿಯೂ ಮತ್ತು ತಾಮ್ರ ಶಾಸನದಲ್ಲಿಯೂ ನೋಡತಕ್ಕದ್ದು ಎನ್ನುವ ಮಾತೂ ಗಮನಾರ್ಹವಾದುದು.

ಕೊನೆಯದಾಗಿ ಈ ಶಾಸನಗಳ ಕಾಲ. ಮೊದಲನೆಯ ಶಾಸನದಲ್ಲಿ ಕಾಲದ ಉಲ್ಲೇಖವೇ ಇಲ್ಲ. ಎರಡನೆಯದಲ್ಲಿ ಮಾತ್ರ ಕೆಲವು ಮಾಹಿತಿಗಳಿವೆ. ಬೃಹಸ್ಪತಿಯು ಕನ್ಯಾರಾಶಿಯಲ್ಲಿ, ವೃಶ್ಚಿಕಮಾಸದಲ್ಲಿ ಶುಕ್ರವಾರದಲ್ಲಿರುವಾಗ ಇದನ್ನು ಬರೆಯಲಾಯಿತು ಎಂದು ಹೇಳಿದೆ. ಈ ಮಾಹಿತಿಗಳಿಂದ ಕಾಲನಿರ್ಣಯ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಲಿಪಿಶಾಸ್ತ್ರದ ಆಧಾರದ ಮೇಲೆ ಹದಿನಾಲ್ಕನೆಯ ಶತಮಾನದ ಮಧ್ಯಭಾಗ ಅಥವಾ ಕೊನೆಯ ಭಾಗಕ್ಕೆ ಸೇರಬಹುದೆಂದು ಈ ಶಾಸನವನ್ನು ಪರಿಶೀಲಿಸಿರುವ ರೈಸರು ಹೇಳಿದ್ದಾರೆ. ಆದರೆ ಕಳಂಜು ಮತ್ತು ಕಾಣಂ ಎಂಬ ನಾಣ್ಯಗಳು ಈ ಕಾಲಕ್ಕೆ ಸೇರಿದವುಗಳಲ್ಲ. ಅವು ವಿಶೇಷವಾಗಿ ಚೋಳರ ಕಾಲದ ನಾಣ್ಯಗಳು.[5] ಅದನ್ನು ಗಮನಿಸಿದರೆ, ಈ ಶಾಸನಗಳ ಕಾಲ ಸುಮಾರು ೧೨ನೆಯ ಶತಮಾನದ ಒಳಗೇ ಇರಬೇಕೆಂದೂ ವಿಶೇಷತಃ ಹನ್ನೊಂದನೆಯ ಶತಮಾನಕ್ಕೆ ಸೇರಬೇಕೆಂದೂ ಹೇಳಲು ಅವಕಾಶವಿದೆ.[6]

ಒಟ್ಟಿನಲ್ಲಿ ಇವೆರಡೂ ಕುತೂಹಲಕರವಾದ ಶಾಸನಗಳು.

೧. ಲಿಪಿ ಮತ್ತು ಭಾಷೆಗಳಿಂದ ಈ ಶಾಸನಗಳು ಗಮನಾರ್ಹವಾದವುಗಳು.

೨. ನಮಗೆ ತಿಳಿಯದಿರುವ ಬೋಧರೂಪ ಭಗವರ್ ಎನ್ನುವ ವ್ಯಕ್ತಿಯನ್ನು ಇವು ಪರಿಚಯಿಸುತ್ತವೆ.

೩. ತಾಮ್ರಪತ್ರಗಳ ನಕಲನ್ನು ಭಾಗಮಂಡಲದ ಶಿಲಾಶಾಸನವು ನಿರ್ದೇಶಿಸುತ್ತದೆ.

೪. ದೇವಾಲಯದ ದತ್ತಿಯ ವಿವರಗಳನ್ನು ಇವು ತಿಳಿಸುತ್ತವೆ.

---

4. ಕಾಣಂ ಎನ್ನುವುದು ತೆರಿಗೆಯ ಅರ್ಥದಲ್ಲಿ ವಿಜಯನಗರ ಕಾಲದಲ್ಲಿ ಬಳಕೆಯಲ್ಲಿತ್ತು.
5. ಕೆ. ಎ. ನೀಲಕಂಠಶಾಸ್ತ್ರಿ : ದಿ ಚೋಳಾಸ್, ಮದರಾಸು, ೧೯೫೫, ಪು. ೬೧೩
6. ವಿಜಯನಗರ ಕಾಲದ ನಾಣ್ಯಗಳನ್ನು ವಿಮರ್ಶಿಸುವಾಗ ಡಾ॥ ಎ. ವಿ. ನರಸಿಂಹಮೂರ್ತಿ ಅವರು 'ಕಳಂಜು' ಎಂಬ ನಾಣ್ಯವನ್ನು ಹೆಸರಿಸಿಲ್ಲ – ನೋಡಿ : ದಿ ಕಾಯಿನ್ಸ್ ಆಫ್ ಕರ್ನಾಟಕ, ಮೈಸೂರು, ೧೯೭೫, ಪು. ೧೪೨. ಆದರೆ ಚೋಳರ ಶಾಸನಗಳು ಕೊಡಗಿನಲ್ಲಿ ದೊರಕಿಲ್ಲ. ಹಾಗಿದ್ದ ಪಕ್ಷದಲ್ಲಿ ಇವು ಕೊಂಗಾಳ್ವ ರಾಜವಂಶಕ್ಕೆ ಸೇರಿದವಿರಬೇಕು. ಏಕೆಂದರೆ ಕೊಂಗಾಳ್ವರು ಚೋಳರೊಡನೆ ನಿಕಟ ಸಂಬಂಧವನ್ನು ಹೊಂದಿದ್ದರು.

ಬಿ. ರಾಜಶೇಖರಪ್ಪ

# ಮಾದರಸ ದಣ್ಣಾಯಕನ ಕಾಟಿಹಳ್ಳಿಯ ಶಾಸನ

ಚಿತ್ರದುರ್ಗ ಜಿಲ್ಲೆಯ ಹೊಸ ಶಾಸನಗಳನ್ನು ಕುರಿತ ನನ್ನ ಅನ್ವೇಷಣೆಯಲ್ಲಿ ಈಚೆಗೆ ಕಂಡುಬಂದ ಒಂದು ಮುಖ್ಯ ಶಾಸನ ಇದು. ಚಿತ್ರದುರ್ಗ ಜಿಲ್ಲಾ ಕಸಬಾ ತಾಲ್ಲೂಕು ಮತ್ತು ಕಸಬಾ ಹೋಬಳಿ ಕಾಟಿಹಳ್ಳಿ ಗ್ರಾಮಕ್ಕೆ ಸೇರಿದ ಹೊಲವೊಂದರಲ್ಲಿರುವ ಶಾಸನ ಇದು. ಸುಮಾರು ನಾಲ್ಕು ಅಡಿ ಎತ್ತರ, ಒಂದೂವರೆ ಅಡಿ ಅಗಲ, ಒಂದೂಕಾಲು ಅಡಿ ದಪ್ಪ ಇರುವ ಬಿಳಿಯ ಗ್ರ್ಯಾನೈಟ್ ಕಲ್ಲಿನಲ್ಲಿ, ಇದರ ಉರುಟು ಮೇಲ್ಮೈಯಲ್ಲಿ ಮೇಲೆ ಸೂರ್ಯ ಚಂದ್ರ ಶಿವಲಿಂಗಗಳ ರೇಖಾ ಕೆತ್ತನೆ ಹಾಗೂ ಕನ್ನಡ ಲಿಪಿ ಮತ್ತು ಭಾಷೆಯಲ್ಲಿರುವ ೨೫ ಪಂಕ್ತಿಗಳ ಈ ಶಾಸನವು, ಲಿಪಿಲಕ್ಷಣದಿಂದ ಕ್ರಿ. ಶ. ಸುಮಾರು ೧೪ನೆಯ ಶತಮಾನದ ಅಂತ್ಯಕಾಲಕ್ಕೆ ಸೇರಿದ್ದಾಗಿ ಕಾಣುತ್ತದೆ. ಈ ಅವಧಿಯಲ್ಲಿ ಚಿಮ್ಮತ್ತನ ಕಲ್ಲನ್ನು, ಅಂದರೆ ಹಿಂದಿನ ಚಿತ್ರದುರ್ಗವನ್ನು, ಮಾದರಸ ದಣ್ಣಾಯಕ ಎಂಬ ಪ್ರಭುವೊಬ್ಬ ಆಳುತ್ತಿದ್ದ ಎನ್ನುವ ಅಪೂರ್ವ ಸಂಗತಿ ಈ ಶಾಸನದಿಂದ ಇದೇ ಮೊದಲಿಗೆ ಬೆಳಕಿಗೆ ಬರುತ್ತಿದೆ. ಸಾಕಷ್ಟು ಕಾಗುಣಿತದೋಷಗಳು ಈ ಶಾಸನ ಬರಹದಲ್ಲಿವೆ.

ಮಾದರಸ ದಣ್ಣಾಯಕನು ಅರವಟ್ಟಿಗೆಯೊಂದಕ್ಕೆ ಒಂದು ಭೂಮಿಯನ್ನು ದಾನವಾಗಿ ಇತ್ತನೆಂಬುದು ಈ ಶಾಸನದ ವಿಷಯ. ಸಿದ್ಧಾಪುರ ಹಡವನಹಳ್ಳಿ ರಾಜ್ಯದಲ್ಲಿ ಉಭಯ ನಾನಾ ದೇಶಿ ಸಮಸ್ತರು ಹಲವರು ಓಡಾಡುತ್ತಿದ್ದ ಮಾರ್ಗದಲ್ಲಿ ಇದ್ದ ಆ ಅರವಟ್ಟಿಗೆಯಲ್ಲಿ ಅಂಬಕಳವನ್ನು (=ಮಜ್ಜಿಗೆ ಅಂಬಲಿ, ಹುಳಿ ಅಂಬಲಿ) ಮತ್ತು ಸಿದ್ಧೌಷಧಿಗಳನ್ನು ಸಹಾ ಶಿವಾರ್ಥವಾಗಿ ಎಂದು ನೀಡಲಾಗುತ್ತಿತ್ತು. ಇಲ್ಲಿ ಅರವಟ್ಟಿಗೆಯಲ್ಲಿ ಸಿದ್ಧೌಷಧಿಗಳನ್ನು ಸಹಾ ಉಚಿತವಾಗಿ ನೀಡುತ್ತಿದ್ದರು ಎನ್ನುವುದು ಸಾಂಸ್ಕೃತಿಕ ಸಾಮಾಜಿಕ ಇತಿಹಾಸದ ದೃಷ್ಟಿಯಿಂದ ಒಂದು ಗಣನೀಯವೆನಿಸುವ ಸಂಗತಿ. ಏಕೆಂದರೆ ಬಳಲಿದ ಪ್ರಯಾಣಿಕರಿಗೆ ಮತ್ತು ಪಶುಪ್ರಾಣಿಗಳಿಗೆ ಅರವಟ್ಟಿಗೆಗಳಲ್ಲಿ ನೀರನ್ನು ನೀಡುತ್ತಿದ್ದರೆಂಬುದು ಸಾಮಾನ್ಯ ಸಂಗತಿ. ಅಂಥವುಗಳಲ್ಲೂ ಕೆಲವೆಡೆ ಮಜ್ಜಿಗೆ, ಪಾನಕ, ಎಳನೀರು,ಕಬ್ಬಿನಹಾಲು ಇಂಥವನ್ನು ಸಹಾ ನೀಡಲಾಗುತ್ತಿತ್ತು. ಹಾಗೇ ಅನ್ನದಾನ ಛತ್ರ ಅಥವಾ ಸತ್ರಗಳಲ್ಲಿ ಹಸಿದು ಬಂದ ಪ್ರಯಾಣಿಕರಿಗೆ ಊಟವನ್ನು ಸಹಾ ನೀಡುತ್ತಿದ್ದುದುಂಟು. ಇಲ್ಲಿಯ ಅರವಟ್ಟಿಗೆಯಲ್ಲಿ ಅಂಬಕಳ ನೀಡುವುದರ ಜತೆಗೆ ಔಷಧಿಗಳನ್ನೂ ನೀಡುತ್ತಿದ್ದರೆನ್ನುವುದು ಒಂದು ಗಣನೀಯವಾದ ಅಂಶವಾಗಿ ಕಾಣುತ್ತದೆ. ಈ ಒಂದು ಸಂಗತಿ ಬಳ್ಳಿಗಾವೆಯ ಕೋಡಿಯ ಮಠವನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತದೆ. ಬಹುಸಂಖ್ಯೆಯ ಜನರು ಓಡಾಡುತ್ತಿದ್ದ ಮಾರ್ಗದ, ಬಹುಶಃ ಹೆದ್ದಾರಿಯ, ಅರವಟ್ಟಿಗೆಯಲ್ಲಿ ಈ ಧರ್ಮಕಾರ್ಯ ನಡೆಯುತ್ತಿತ್ತು ಎನ್ನುವುದು ಇನ್ನಷ್ಟು ಗಮನಾರ್ಹ ಅಂಶ ಎನಿಸುತ್ತದೆ.

ಅರವಟ್ಟಿಗೆಯ ಈ ಧರ್ಮಕಾರ್ಯಕ್ಕೆ ಬಹುಶಃ ಕಾರಣಕರ್ತರು, ಶ್ರೀಶೈಲಮಲ್ಲಿಕಾರ್ಜುನದೇವರ ಪಾದಪದ್ಮಾರಾಧಕರಾಗಿದ್ದ 'ಪರಿಣಾಮಿ ದೇವಯ್ಯ' ಎಂಬುವರು. ಇಲ್ಲಿಯ 'ಪರಿಣಾಮಿ' ಎಂಬ ವಿಶೇಷಣದಿಂದ, ಅವರು ಬಹುತೇಕ ಒಬ್ಬ ವೀರಶೈವ ಶರಣಮಾರ್ಗದಲ್ಲಿ ನಡೆಯುತ್ತಿದ್ದ ಒಬ್ಬ ಗುರು ಎಂದು ತೋರುತ್ತದೆ.

ಕ್ರಿ.ಶ.ಸು. ೧೪ನೆಯ ಶತಮಾನದ ಅಂತ್ಯದಲ್ಲಿ ಭೀಮ ಕವಿಯಿಂದ ರಚಿತವಾದ 'ಕನ್ನಡ ಬಸವಪುರಾಣ'ದಲ್ಲಿ, ಬಸವಣ್ಣನವರು ವಿಷವನ್ನು ಅಮೃತವಾಗಿ ಮಾಡಿದ ಪವಾಡಕಥೆಯಲ್ಲಿ, ಅಲ್ಲಿ ನೆರೆದಿದ್ದ ಬಹುಸಂಖ್ಯೆಯ ಶರಣ ಸಮೂಹದಲ್ಲಿ 'ಪರಿಣಾಮಿ ದೇವಯ್ಯ' ಎಂಬು ವನೊಬ್ಬನನ್ನು ಹೆಸರಿಸಿದ್ದಾನೆ. ಆದರೆ ಈ ಹೆಸರು ಕನ್ನಡ ಬಸವಪುರಾಣಕ್ಕೆ ಮೂಲವಾದ ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣಮು'ಕೃತಿಯಲ್ಲಿ, ಇದೇ ಪವಾಡದ ಕಥೆಯ ಸಂದರ್ಭದಲ್ಲಿ (ಮತ್ತು ಇನ್ನಾವುದೇ ಸಂದರ್ಭದಲ್ಲಿ) ಕಾಣಿಸುವುದಿಲ್ಲ. ಇದರಿಂದ ಭೀಮಕವಿ ತನ್ನ ಸಮಕಾಲೀನನಾದ ಒಬ್ಬ ಶರಣಗುರುವಿನ ಹೆಸರನ್ನು, ತನ್ನ ಕೃತಿಯಲ್ಲಿ ಅಭಿಮಾನದಿಂದಾಗಿ ಸೇರಿಸಿಕೊಂಡಿರಬಹುದೆ ?—ಎಂಬ ಪ್ರಶ್ನೆಯೊಂದು ಮೂಡಿನಿಲ್ಲುತ್ತದೆ.

ಅರವಟ್ಟಿಗೆ ವಾಸ್ತವವಾಗಿ ಇದ್ದ ಸ್ಥಳವನ್ನು ಶಾಸನದಲ್ಲಿ ಸೂಚಿಸಿಲ್ಲ. ಆದರೆ ಅದು ಇದ್ದುದು ಸಿದ್ಧಾಪುರ ಹಡವನಹಳ್ಳಿ ರಾಜ್ಯದಲ್ಲಿ ಉಭಯ ನಾನಾ ದೇಶಿಗಳು ಸಮಸ್ತರು ನಡೆವ ಮಾರ್ಗದಲ್ಲಿ ಎಂಬ ಮಾತು ಬಂದಿರುವುದು ವಿಚಾರಣೀಯ. ಇಲ್ಲಿ ಬರುವ ಸಿದ್ಧಾಪುರ, ಕಾಟಿಹಳ್ಳಿಯ ಪೂರ್ವಕ್ಕೆ ಸಮೀಪದಲ್ಲಿ ಈಗಲೂ ಇರುವ ಊರು. ಪ್ರಾಚೀನದಿಂದಲೂ ಇರುವ ಒಂದು ಗ್ರಾಮ ಇದು. ಪ್ರಾಚೀನ ಶಾಸನಗಳಲ್ಲಿ ಇದನ್ನು 'ಸಿದ್ಧಪುರ' ಎಂದೂ ಕರೆದಿರುವುದುಂಟು. ಆದರೆ ಪ್ರಸ್ತುತ ಶಾಸನದಲ್ಲಿ 'ಸಿದ್ಧಾಪುರ' ಎಂದು ಮಾತ್ರ ಕರೆಯಲಾಗಿದೆ. ಈಗ ಇರುವ ಹೆಸರಿನ ರೂಪವೂ ಅದೇ. ಇನ್ನು ಹಡವನಹಳ್ಳಿ ಎನ್ನುವ ಊರು ಯಾವುದು ಎನ್ನುವುದು ಸದ್ಯಕ್ಕೆ ಇನ್ನೂ ಸ್ಪಷ್ಟವಾಗುವಂತಿಲ್ಲ. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ 'ಹಡವನಹಾಳು' ಎಂದು ಕರೆಯಲಾಗುತ್ತಿದ್ದ ಗ್ರಾಮ ಬಹುಶಃ ಆ ಹಡವನಹಳ್ಳಿಯೇ ಇರಬಹುದು. ಆದರೆ ಈ ಊರು ಇಂಥದೇ ಇಲ್ಲಿಯದೇ ಎಂದು ನಿರ್ಧಾರ ಮಾಡುವುದು ಸದ್ಯಕ್ಕೆ ಇನ್ನೂ ಸಾಧ್ಯವಾಗುವಂತಿಲ್ಲ. ಇದು ಸಾಧ್ಯವಾದರೆ ಪ್ರಾಚೀನ ಕಾಲದ ಹೆದ್ದಾರಿಯೊಂದನ್ನು ಗುರುತಿಸಲು ಸಾಧ್ಯವಾಗಬಹುದು. ಸಿದ್ಧಾಪುರ ಹಡವನಹಳ್ಳಿ ಈ ಎರಡೂ ಈ ಶಾಸನದ ಕಾಲಕ್ಕೆ ಸಾಕಷ್ಟು ದೊಡ್ಡ ಊರುಗಳಾಗಿ ಹೆಸರಾಗಿದ್ದುವೆಂದೂ ಉಭಯನಾನಾದೇಶಿಗಳಂಥ ವರ್ತಕ ಶ್ರೇಣಿಯವರೂ ಇತರ ಅನೇಕರೂ ಬಂದು ಹೋಗುತ್ತಿದ್ದಂಥ ಪ್ರಮುಖ ಸ್ಥಳಗಳಾಗಿದ್ದಿರಬೇಕೆಂದೂ ತಿಳಿಯಬಹುದು.

ಚಿಮ್ಮತ್ತನಕಲ್ಲನ್ನು ಆಳುತ್ತಿದ್ದ 'ಮಾದರಸ ದಣ್ಣಾಯಕ' ಯಾರು ?–ಎಂಬ ಅಂಶವೂ ವಿಚಾರಣೀಯವಾದದ್ದು. ಮಾದರಸ ದಣ್ಣಾಯಕನು ಚಿಮ್ಮತ್ತನಕಲ್ಲನ್ನು ಆಳುತ್ತಿದ್ದನೆಂಬ ಸಂಗತಿಯನ್ನು ಬಿಟ್ಟು ಶಾಸನವು ಬೇರೆ ಯಾವ ಸಂಗತಿಯನ್ನೂ ಹೇಳಿರುವುದಿಲ್ಲ. ವಿಜಯನಗರದ ೧ನೆಯ ಬುಕ್ಕರಾಯ (ಕ್ರಿ. ಶ. ೧೩೫೬–೭೭) ಮತ್ತು ೨ನೆಯ ಹರಿಹರ (ಕ್ರಿ.ಶ.೧೩೭೭–೧೪೦೪) ಈ ದೊರೆಗಳ ಕಾಲದಲ್ಲಿ, ಮೊದಲಲ್ಲಿ ಮಹಾಪ್ರಧಾನನೂ ತರುವಾಯ ಬನವಾಸಿಯ ಪ್ರಾಂತಪಾಲನೂ ಆಗಿದ್ದು, 'ಮಾಧವಾಮಾತ್ಯ', 'ಮಾದರಸ ಒಡೆಯ' ಎಂದು ಮುಂತಾಗಿ ಕರೆಯಲ್ಪಟ್ಟಿದ್ದವನೇ ಈ 'ಮಾದರಸ ದಣ್ಣಾಯಕ' ಇರಬೇಕು. ಇವನು ತಪಸ್ವಿಯಂತಿದ್ದ ಚಾಉಂಡನ ಮಗನೆಂದೂ ವಿದ್ವಾಂಸನೂ ಕವಿಯೂ ರಾಜನೀತಿ ನ್ಯಾಯನಿಪುಣನೆಂದೂ ಪ್ರಸಿದ್ಧ ಶೈವಗುರುವಾದ ಕಾಶೀವಿಲಾಸಕ್ರಿಯಾಶಕ್ತಿಯ ಶಿಷ್ಯನೆಂದೂ ತಿಳಿದು ಬರುತ್ತದೆ. ಇವನು ಬಹುಶಃ ಕಡೆಯಲ್ಲಿ ಚಿತ್ರದುರ್ಗದ ಮಹಾಮಂಡಲೇಶ್ವರನಾಗಿ ನೇಮಕಗೊಂಡಿದ್ದನೆಂದು ತೋರುತ್ತದೆ.

ಅರವಟ್ಟಿಗೆಗೆ ನೀಡಲಾದ ಭೂಮಿ, ಪ್ರಸ್ತುತ ಶಾಸನದ ಕಲ್ಲು ನಿಂತಿರುವ ಭೂಮಿಯೇ ಎಂದು ಕಾಣುತ್ತದೆ. ದಾನ ನೀಡಲಾದ ಭೂಮಿ, ಕರಲಹಳ್ಳದ ಪೂರ್ವದ ದಂಡೆಯ ಮೇಲಿನ ಹೊಲ ಎಂದು ಶಾಸನ ತಿಳಿಸುತ್ತದೆ. ಈಗ ಶಾಸನ ಇರುವುದು ಹಳ್ಳದ ಪೂರ್ವದ ದಡದ ಹೊಲದಲ್ಲಿ. ಆದರೆ ಈಗ ಹಳ್ಳವನ್ನು ಉಪ್ಪಹಳ್ಳ ಎಂದು ಕರೆಯುತ್ತಾರೆ. ದಾನದ ಭೂಮಿ ಎರಡು ಹಣ ಗುತ್ತಗೆಯ ತೆರ ಇದ್ದಂತಹ ಹಾಗೂ ನಾಗುಳ ಜೋಳದ ಬೀಜವರಿ ಇದ್ದಂತಹ ಭೂಮಿ ಎಂದು ಶಾಸನ ತಿಳಿಸುವುದರಿಂದ, ಅರವಟ್ಟಿಗೆಗೆ ಸಾಕಷ್ಟು ವಿಶಾಲವಾದ ಭೂಮಿಯೇ ದಾನವಾಗಿ ಕೊಡಲ್ಪಟ್ಟಿತ್ತೆಂಬುದನ್ನು ಅರಿಯಬಹುದಾಗಿದೆ.

ಮುಖ್ಯವಾಗಿ, ಚಿತ್ರದುರ್ಗದ ಪ್ರಾದೇಶಿಕ ಇತಿಹಾಸಕ್ಕೆ ಹಾಗೂ ಆನುಷಂಗಿಕವಾಗಿ ವಿಜಯನಗರ ಇತಿ

ಹಾಸಕ್ಕೆ ಕೆಲವು ಹೊಸ, ಕುತೂಹಲಕರ ಸಂಗತಿಗಳನ್ನು ಹೇಳುವುದರಿಂದ ಪ್ರಸ್ತುತ ಶಾಸನವು ಒಂದು ಗಮನಾರ್ಹ ಶಾಸನವೆಂದು ಭಾವಿಸಬಹುದು.

ಈ ಅನ್ವೇಷಣೆ/ಪರಿಶೋಧನೆಯಲ್ಲಿ ನೆರವು ನೀಡಿದ ಕಾಟಿಹಳ್ಳಿಯ ನೀಲವ್ವಳ ಮರುಳಸಿದ್ಧಪ್ಪ, ರುದ್ರಜ್ಜಿ ಮತ್ತು ಚಿತ್ರದುರ್ಗದ ಟಿ. ಎನ್. ಮಂಜಣ್ಣ ಇವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

## ಶಾಸನದ ಪಾಠ

೧. ನಮಸ್ತುಂಗ ಶಿರಶ್ಚುಂಬಿ

೨. ಚಂದ್ರಚಾಮರ ಚಾರವೇ ತ್ರಯಿಲೋಕ್ಯ ನ

೩. ಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ

೪. ಸಮಸ್ತ ಭುವನ ಭುವನಾಧೀಶ್ವರ ಪೃಥಿವಿಗೆ

೫. ಮೂಲಸ್ಥಾನವಾಗುತ್ತಂ ವಿದಂಥಾ ಶ್ರೀಗಿರಿ ಮಲ್ಲಿಕಾ

೬. ರ್ಜುನದೇವರ ಧಿಬ್ಯಶ್ರೀಪಾದಪದ್ಮಾರಾದಕರುಮಪ್ಪ

೭. ಪರಿಣಾಮಿ ದೇವಯ್ಯಗಳು ಸಿದ್ಧಾಪುರ ಹಡವ

೮. ನಹಳಿಯ ರಾಜ್ಯದಲ್ಲಿ ಉಭಯನಾನಾದೇಶಿಯ

೯. ಸಮಸ್ತ ಹ್ರಲರು ನಡವ ಮಾರ್ಗದಲ್ಲಿ ಅಱವಟ್ಟಿಗೆಯು

೧೦. ಲ್ಲಿ ಶಿವಾರ್ಥವಾಗಿ ಅಂಬಕುಳ ಶಿಧೋಶಧಿ ಧರ್ಮ್ಮ ನಡ

೧೧. ಉತ್ತಂ ವಿರಲಾಗಿ ಚಿಂಮ್ಮತ್ತನಕಲ್ಲನಾಳುತ್ತಂ ವಿದಂ

೧೨. ಥಾ ಮಾದರಸ ದಂಣಾಯಕರು ಆ ಧರ್ಮ್ಮವಮಂ ಕಂಡು

೧೩. ಪರಿಣಾಮಿಸಿ ಯಿಾ ಧರ್ಮ್ಮ ಆಚಂದಾರ್ಕಸ್ಥಾಯಿಯಾ

೧೪. ಗಿ ನಡೆಯಬೇಕೆಂದು ಆ ಕಱಲಹಳದ ಮೂಡ

೧೫. ಣ ದಡದಲ್ಲಿ ಎರಡುಹಣ ಗುತ್ತಗೆಯ ತೆಱವಿದ

೧೬. ಂಥಾ ಸಾಗುಳ ಜೋಳದ ಬೀಜವರಿಯ ಕ್ಷೇತ್ರಕ್ಕೆ ನಾಲ್ಕು

೧೭. ಮೂಲೆಗಳಲ್ಲಿಉ ಲಿಂಗಮುದ್ರೆಯಕಲ್ಲನು ನೆಡಿಸಿ ಕೊಟ್ಟು

೧೮. ಶಾಶನವಂ ಬರಸಿ ಕೊಟಂಥಾ ದನದಾ ಕ್ಷೇತ್ರಕ್ಕೆ ಆರು

೧೯. ಅಂನ್ಯಾಯವ ಹುಟ್ಟಿಸಿ ಅಳೂಪಿದಂಥ ಅವರಿಗೆಉ

೨೦. ಭೂಮಿ ಮಾತ್ರಾರ್ತಂಡನುಳಂನಬರ ಅನೇಕ ನಾಯಕದಲ್ಲಿಲು

೨೧. ಬೀಳುವರು ಚಾಂಡಾಲ ಯೋನಿಗಳಲಿಉ ಹುಟ್ಟುವರು ಕ್ರಿಮಿಕೀಟ.

೨೨. ಕ್ಷ ಜಂತುಗಳಾಗಿ ಆವೆ...ದಲ್ಲಿ ಹುಟ್ಟುತ್ತಂ ಯಿಹ

೨೩. ರು ಯಿಾ ಕ್ಷೇತ್ರವನು ಆ....ವವರು ನಾಲ್ಕುತಿಂಗಳ

೨೪. ಉಧಕವನೆ.....ರು...ಹರು ಮಂಗಳ ಮ

೨೫. ಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ಡಾ॥ ಕೆ. ಜಿ. ವಸಂತಮಾಧವ

# ಮರವಂತೆ-ತ್ರಾಸಿಯ ವೀರಗಲ್ಲುಗಳು

ಕುಂದಾಪುರ ತಾಲೋಕು ತ್ರಾಸಿ ಗ್ರಾಮದ ವೀರಗಲ್ಲು ವಿಜಯನಗರ ಅರಸರ ಆಳ್ವಿಕೆಯ ಕಾಲದ್ದು. ಇದು ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಟ್ಟಕಲ್ಲು. ಇದು ಸಮುದ್ರಕಿನಾರೆಯಲ್ಲಿದೆ. ಈ ವೀರಗಲ್ಲಿನಿಂದ ಉತ್ತರಕ್ಕೆ ಒಂದು ಮೈಲು ಅಂತರದಲ್ಲಿ ಇನ್ನೊಂದು ವೀರಗಲ್ಲು ಇದೆ. ಮರವಂತೆಯನ್ನು ಜಕ್ಕನಕಟ್ಟೆ ಎಂತಲೂ ಸ್ಥಳೀಯರು ಕರೆಯುತ್ತಾರೆ. ಈ ಎರಡು ವೀರಗಲ್ಲುಗಳಲ್ಲಿ ಶಾಸನಗಳಿವೆ. ಆದರೆ ಮರವಂತೆ ವೀರಗಲ್ಲಿನ ಶಾಸನದಲ್ಲಿ ಶಕವರ್ಷ ಇಲ್ಲ ಮತ್ತು ಅದು ಅಪೂರ್ಣವಾಗಿದೆ. ತ್ರಾಸಿಯ ವೀರಗಲ್ಲಿನಲ್ಲಿ ಶಕವರ್ಷದ ಸಹಿತ ಹೆಚ್ಚಿನ ವಿವರಗಳಿವೆ. ಈ ಶಾಸನ ಹೆಚ್ಚಿನ ಕಡೆಯಲ್ಲಿ ಓದಲಾಗದಷ್ಟು ನಾಶವಾಗಿದೆ. ತ್ರಾಸಿಯ ವೀರಗಲ್ಲಿನ ಇರುವಿಕೆ ಮತ್ತು ಇದರ ಶಾಸನ ಸಾರಾಂಶ ಶಾಸನ ಖಾತೆಯ ವರದಿಯಲ್ಲಿ ನಮೂದಿಸಿದೆ.[1]

ಮರವಂತೆ ವೀರಗಲ್ಲಿನ ಇರುವಿಕೆಯನ್ನು ದಿವಂಗತ ಡಾ॥ ಪಿ. ಗುರುರಾಜಭಟ್ಟರು ಗುರುತಿಸಿದ್ದಾರೆ. ಮರವಂತೆ ಮತ್ತು ತ್ರಾಸಿಯ ವೀರಗಲ್ಲುಗಳ ಶಾಸನಗಳನ್ನು ಪರೀಕ್ಷಿಸಿದಾಗ ಇವುಗಳೊಳಗೆ ನಿಕಟ ಸಂಬಂಧವಿದೆಯೆಂಬುದು ತಿಳಿದುಬರುತ್ತದೆ.

ಮರವಂತೆ ವೀರಗಲ್ಲು : ಈ ವೀರಗಲ್ಲಿನಲ್ಲಿ ವೀರನು ಹೋರಾಡುವ ಚಿತ್ರ ಉತ್ತಮ ರೀತಿಯಲ್ಲಿ ಕೆತ್ತಿಬಂದಿದೆ. ಇದರಲ್ಲಿ ವೀರನು ಗುರಾಣಿ ಹಿಡಿದು ಯುದ್ಧಕ್ಕೆ ಹೋಗುವುದನ್ನೂ ಅವನ ಹಿಂದೆ ಎರಡು ಜನರು ಬೆಂಗಾವಲಾಗಿರುವುದನ್ನೂ ಕೆತ್ತಿದೆ. ಇದರ ತುದಿಯಲ್ಲಿ ಅರ್ಧಚಂದ್ರ, ಸೂರ್ಯ ಹಾಗೂ ಮಧ್ಯದಲ್ಲಿ ಮಕರಚಿಹ್ನೆ ಇದೆ. ಇದರಲ್ಲಿರುವ ಶಾಸನವು ವೀರ ಹೋರಾಡಿದ್ದನ್ನು ಈರೀತಿ ತಿಳಿಸಿದೆ: "ಬೈಚನಾಯಕನ ಮಗ..ಲಪನಾಳಿಗೇರಿಯ ಅಜರಿ ಬಳಿಯ ಕಾದು–ಯಕನ ಮೊಂಮಗ." ಒಟ್ಟಿನಲ್ಲಿ, ಈ ಪ್ರದೇಶದಲ್ಲಿ ಕದನವಾದದ್ದನ್ನು ಮತ್ತು ವೀರನು ಕಾದಿದ್ದನ್ನು ಈ ಶಾಸನದಿಂದ ತಿಳಿಯಬಹುದು.

ತ್ರಾಸಿಯ ವೀರಗಲ್ಲು[2] : ಇದು ನಾಲ್ಕು ಅಂಕಣವಿರುವ ವೀರಗಲ್ಲು. ಕೆಳಗಿನಿಂದ ಮೇಲಕ್ಕೆ–ಒಂದನೇ ಅಂಕಣದಲ್ಲಿ ವೀರನು ಖಡ್ಗ ಹಿಡಿದು ಕುದುರೆ ಮೇಲೆ ಕುಳಿತು ವೈರಿಗಳನ್ನು, ಸೈನ್ಯವನ್ನು ಎದುರಿಸುವುದು ; ಎರಡನೇ ಅಂಕಣದಲ್ಲಿ ವೀರನು ಹೋರಾಡಿ ಅಸುವು ನೀಗುವುದು ಹಾಗೂ ವೀರನ ಕೈಯಲ್ಲಿ ಕೋವಿಯಂತೆ ಇರುವ ಆಯುಧವಿರುವುದು; ಮೂರನೇ ಅಂಕಣದಲ್ಲಿ ಹೋರಾಡಿದ ವ್ಯಕ್ತಿಯನ್ನು ಪೂಜಿಸುವುದು. ಇದರೊಂದಿಗೆ ಸತಿಯಾದ ಮಹಿಳೆಯ ಚಿತ್ರವೂ ನಾಲ್ಕನೇ ಅಂಕಣದಲ್ಲಿದೆ. ಧ್ಯಾನಮುದ್ರೆಯ ಜನ ಇದರ ಬಲತುದಿಯಲ್ಲಿ ದೀಪ ಹಿಡಿದ ಚಿತ್ರಗಳೂ ಕೆತ್ತಲ್ಪಟ್ಟಿವೆ. ಈ ನಾಲ್ಕು ಅಂಕಣಗಳ ಮಧ್ಯದಲ್ಲಿ ಕನ್ನಡ ಭಾಷೆಯಲ್ಲಿ ಬರೆದ ಶಾಸನವಿದೆ. ಅಳಿದುಳಿದ ಅಕ್ಷರಗಳಿಂದ ಈ ಶಾಸನವು ಈ ಮುಂದಿನ

1. *ARSIE*, 1931, No. 363
2. ಜೆ. ಅಚ್ಯುತ ಹೆಬ್ಬಾರ ಅವರು ನೀಡಿದ ಈ ಶಾಸನದ ಪ್ರತಿಯಂತೆ. ಈ ವೀರಗಲ್ಲಿನ ಚಿತ್ರ ನೋಡಿ: Dr. P. Gururaja Bhat : *Studies in Tuluva History and Culture*, Plate No. 359 (b)

ಸಂಗತಿಯನ್ನು ತಿಳಿಸುತ್ತದೆ : ಹೊಂನಾದೇವಿ ಅಂಮನ ವರು ಹಾಡುವಳಿಯಲ್ಲಿ ಆಳಿಕೊಂಡಿರುವಾಗ ಪಡುಕೋಣ ನಾಡ ಹಾಲೆಯ ಬಳಿ ನಾಯಕರು ಪರಂಗದ ಕಪಿತವ ರೊಡನೆ ಕಾದಿ ಅಸುನೀಗಿದನೆಂದು ತಿಳಿಸುತ್ತದೆ. ಇಷ್ಟ ಲ್ಲದೇ ಇವನ ಸ್ಮರಣೆಯಾಗಿ ಇಲ್ಲಿಯ ಬಸವಕ್ಕನಾಯಕತಿ ವೀರಗಲ್ಲನ್ನು ಶಕ ೧೪೬೮ ಕಾರ್ತಿಕ ೫=ಕ್ರಿ.ಶ. ೧೫೪೬ ರಲ್ಲಿ ನೆಟ್ಟಳು.

ಈ ಶಾಸನದಲ್ಲಿ ತಿಳಿದುಬರುವ 'ಪರಂಗದ ಕಪಿತ' ರೆಂದರೆ ಪೋರ್ತುಗೀಜರಾಗಿರುತ್ತಾರೆ. ಇವರು ಭಟ್ಕಳ ವನ್ನು ಸುಟ್ಟು ಧ್ವಂಸ ಮಾಡಿದರೆಂದು ಕ್ರಿ.ಶ. ೧೫೪೨ರ ದಾಖಲೆಗಳಿಂದ ತಿಳಿದುಬರುತ್ತದೆ.[3] ಈ ಶಾಸನದಲ್ಲಿ ತಿಳಿಸಿದ ಹೊಂನಾದೇವಿ ಭಟ್ಕಳ ಬೈಂದೂರುಗಳಲ್ಲಿ ಹಾಡು ವಳ್ಳಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಚೆಂನಾದೇವಿ ಅಂಮ. ಈ ಶಾಸನದಂತೆ, ಪೋರ್ತುಗೀ ಜರು ಈ ಪ್ರದೇಶದ ಮೇಲೆ ದಾಳಿ ಇಟ್ಟಿದ್ದರೆಂದು ತಿಳಿದುಬರುತ್ತದೆ. ಈ ಪ್ರದೇಶ ಸಮುದ್ರ ಮತ್ತು ಹೊಳೆಯ ಸಮೀಪವಿದ್ದು ಫಲಭರಿತವಾಗಿದ್ದುದರಿಂದ ಪೋರ್ತುಗೀಜರು ದಾಳಿ ನಡೆಸಿರಬೇಕು. ಈ ಪ್ರದೇಶದ ಮೇಲೆ ಪೋರ್ತುಗೀಜರಿಗೆ ಕಾಕದೃಷ್ಟಿಯಿದ್ದಿತೆಂದು ಇವರ ಕ್ರಿ.ಶ. ೧೬೩೦ರ ದಾಖಲೆಯಿಂದ ತಿಳಿದುಬರುತ್ತದೆ.[4] ಒಟ್ಟಿನಲ್ಲಿ, ಮರವಂತೆ ಮತ್ತು ತ್ರಾಸಿ ಪ್ರದೇಶ ಗಳಲ್ಲಿ ಯುದ್ಧವಾಗಿರಬೇಕು. ಪೋರ್ತುಗೀಜರನ್ನು ಬೈಚಯನಾಯಕ ಮಗ (ಕ)ಲಪನಾಯಕ ಮತ್ತು ಹಾಲೆ ಬಳಿ ಪಡುಕೋಣನಾಡ-ನಾಯಕ ಎದುರಿಸಿದರು. ಈ ಇಬ್ಬರು ವೀರರು ಚೆಂನಾದೇವಿಯ ಸೈನ್ಯದ ಅಧಿಕಾರಿ ಗಳಾಗಿರಬೇಕು. ಪಡುಕೋಣೆಯಲ್ಲಿ ಅಜೀರ್ಣಗೊಂಡ ಕೋಟೆ ಇರುವುದರಿಂದ, ಇಲ್ಲಿ ಅವರನ್ನು ಚೆಂನಾ ದೇವಿಯು ಸೈನ್ಯಾಧಿಕಾರಿಗಳನ್ನಾಗಿ ನೇಮಿಸಿರಬೇಕು. ಹಾಡುವಳ್ಳಿರಾಜ್ಯ ಈ ವೀರಗಲ್ಲಿನ ಸ್ಥಳದವರೆಗೆ ಹಬ್ಬಿದ್ದಿತೆಂದು ತಿಳಿದರೆ ತಪ್ಪಾಗಲಿಕ್ಕಿಲ್ಲ. ಇಲ್ಲಿ ಹೇಳಿದ ನಾಯಕರು 'ಒಳಿ' ಕಟ್ಟಳೆಯನ್ನು ಹೊಂದಿದ ಅಬ್ರಾಹ್ಮಣ ಶೂರ ಶೂದ್ರಜನಾಂಗ.[5] ಈ ವೀರಗಲ್ಲನ್ನು ಬಸವಕ್ಕನಾಯಕತಿ ನೆಟ್ಟಳೆಂದು ಓದುವಾಗ ಇವರ ಸಮಾಜದಲ್ಲಿ ಸ್ತ್ರೀಯರು ಪ್ರಧಾನರಾಗಿದ್ದರೆಂದು ತಿಳಿಯ ಬಹುದು. ಇದನ್ನು ಭಟ್ಕಳದ ಒಂದು ವೀರಗಲ್ಲಿನ ಶಾಸನವು ಸಮರ್ಥಿಸುತ್ತದೆ. ಇದರಂತೆ 'ನಾಯಕ ಸಮಾಜ'ದಲ್ಲಿ ಆಸ್ತಿಯ ಹಕ್ಕು ಸಂತತಿ ಪರಂಪರೆಯಾಗಿ 'ಹೆಂಣಿಗೆ ದಾನ ಗಂಡಿಮೂಲ' ನಡೆದುಕೊಂಡು ಬರುತ್ತದೆ.[6] ಸತಿ ಚಿಹ್ನೆ ಮತ್ತು ವೀರನು ಸಾಯುವ ದೃಶ್ಯವು ಒಟ್ಟಿಗೆ ಒಂದೇ ಕಲ್ಲಿನಲ್ಲಿರುವುದು ತ್ರಾಸಿ ವೀರಗಲ್ಲಿನ ವೈಶಿಷ್ಟ್ಯ.

---

3. *Karnataka Inscriptions*, Vol. III, Part I, No. 12 and 13
4. Heras : '*The Expansion of Wars of Venkatappa Nayaka of Ikkeri*', *Indian Historical Records Commission*, XI, 1928, p. 113; ಬಿ. ಎಸ್. ಶಾಸ್ತ್ರಿ : ಕೆಳದಿಯ ಅರಸರೂ ಹಾಗೂ ಪೋರ್ತುಗೀಜರೂ, ಪು. ೫೨
5. ಒಳಿ ಬಂದ ವಂಶ : ಬ್ರಾಹ್ಮಣರಲ್ಲಿ ಗೋತ್ರ ಇದ್ದಂತೆ ; ಇದು ದ್ರಾವಿಡದ್ದು-ವಿವರಗಳಿಗೆ ನೋಡಿ : *Studies in Tuluva History and Culture*, pp. 241-247
6. *K.I.*, Vol. III, No. 13, Lines 5-6

ಡಾ॥ ಅ. ಸುಂದರ

# ಹಂಪೆಯಲ್ಲಿ ದೊರೆತಿರುವ ಎರಡನೆಯ ಶತಮಾನದ ಎರಡು ಅಪೂರ್ವ ಬಿಳಿಯ ಜೇಡಿಮಣ್ಣಿನ ಗೊಂಬೆಗಳು

ಸುಮಾರು ೧೯೮೭ರ ಫೆಬ್ರವರಿಯಲ್ಲಿ ಹಂಪೆಯ ಬಳಿ ಇರುವ ಕಮಲಾಪುರದಲ್ಲಿ ಚಿತ್ರದುರ್ಗದ ಶ್ರೀ ವೆಂಕಟೇಶ ಐತಾಳ ಅವರು ಸಂಗ್ರಹಿಸಿದ ಎರಡು ಬಿಳಿಯ ಜೇಡಿಮಣ್ಣಿನ ಗೊಂಬೆಗಳು ಪ್ರಾಚೀನ ಇತಿಹಾಸ ದೃಷ್ಟಿಯಿಂದ ಗಮನೀಯವಾಗಿವೆ. ಅವುಗಳನ್ನು ಶ್ರೀ ಐತಾಳ ಅವರು ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರ ವಸ್ತುಸಂಗ್ರಹಾಲಯಕ್ಕೆ ಅರ್ಪಿಸಿರುವರು. ನಾನು ಈ ಹಿಂದೆ, ಅಂದರೆ ೧೯೮೮ರ ಮೇ ತಿಂಗಳಲ್ಲಿ, ಧರ್ಮಸ್ಥಳಕ್ಕೆ ಶ್ರೀ ಹೆಗ್ಗಡೆಯವರ ಆಹ್ವಾನದ ಮೇಲೆ ಹೋಗಿದ್ದೆ. ಅಲ್ಲಿ ಪ್ರದರ್ಶಿತವಾದ ಎಲ್ಲ ಶಿಲ್ಪಗಳ, ಅವಶೇಷಗಳ ಪರಿಶೀಲನೆ ನಡೆಸುತ್ತಿದ್ದಾಗ ಕಮಲಾಪುರದ ಎರಡು ಬಿಳಿಯ ಜೇಡಿಮಣ್ಣಿನ (Stucco) ಗೊಂಬೆಗಳು ನನ್ನ ಗಮನವನ್ನು ವಿಶೇಷವಾಗಿ ಸೆಳೆದವು. ಇವೆರಡೂ ಗೊಂಬೆಗಳಲ್ಲಿ ಪ್ರಾಚೀನ ವೈಶಿಷ್ಟ್ಯತೆಗೆ ಪ್ರಸಿದ್ಧವಾದ ಗಾಂಧಾರ ಶೈಲಿಯ ಲಕ್ಷಣಗಳು ಕಂಡುಬಂದವು. ಕ್ರಿಸ್ತ ಶಕ ಸುಮಾರು ಒಂದು ಮತ್ತು ಎರಡನೆಯ ಶತಮಾನದಲ್ಲಿ ಇಂದಿನ ವಾಯುವ್ಯ ಗಡಿಪ್ರದೇಶದ ಭಾಗವಾಗಿದ್ದ ಗಾಂಧಾರದ ಕಲೆಯ ಬಗೆಗೆ ಈಗಾಗಲೇ ಸಾಕಷ್ಟು ಪರಿಚಯವಾಗಿದೆ. ಆದರೆ ದಕ್ಷಿಣಭಾರತದ ಹಂಪೆಯ ಪ್ರದೇಶದಲ್ಲಿ ದೊರೆತಿರುವ ಗಾಂಧಾರ ಲಕ್ಷಣಪೆತ್ತಿರುವ ಬಿಳಿಯ ಜೇಡಿಮಣ್ಣಿನ ಗೊಂಬೆಗಳು ಅತ್ಯಂತ ಪ್ರಮುಖವಾದುವಾಗಿವೆ. ಈ ಗೊಂಬೆಗಳು ಗುರುತಿಸಲಾಗದಷ್ಟು ಮುರಿದು ಸವೆದಿದ್ದು, ಈ ಪ್ರಬಂಧದಲ್ಲಿ ಅವುಗಳ ಸಂಶೋಧನಾತ್ಮಕ ಅಧ್ಯಯನವನ್ನು ಮಾಡಲಾಗಿದೆ.

ಒಂದನೆಯ ಬಿಳಿಯ ಜೇಡಿಮಣ್ಣಿನ ಗೊಂಬೆ : ಇದು ಬಹುಮಟ್ಟಿಗೆ ಬುದ್ಧ ಅಥವಾ ಬೋಧಿಸತ್ವ (ಅಥವಾ ಸೈನಿಕ?)ನ ಅಭಿವ್ಯಕ್ತತೆ ಎನ್ನಬಹುದು. ಆದರೆ ಈ ವಿಗ್ರಹವು ತಲೆ, ಕೈ-ಕಾಲುಗಳನ್ನು ಕಳೆದುಕೊಂಡು ಭಿನ್ನವಾಗಿದೆ. ಇದರ ಈಗಿನ ಗಾತ್ರವು ೯.೦ ಸೆಂ.ಮೀ. ಎತ್ತರ, ೪.೦೬ ಸೆಂ. ಮೀ. ಅಗಲ ಹಾಗೂ ೨.೦೩ ಸೆಂ. ಮೀ. ದಪ್ಪವಾಗಿದೆ. ಈ ಗೊಂಬೆಯ ಅಧೋವಸ್ತ್ರದ ಸರಳ ನೆರಿಗೆಗಳು ಮಂಡಿಯ ಕೆಳಭಾಗದವರೆಗೂ ಜೋತು ಬಿದ್ದಿದ್ದು, ಎಡಭುಜದ ಮೇಲಿನಿಂದ ಹೊದೆಯಲಾಗಿರುವ ಹಾಗೂ ಕೆಳಕ್ಕೆ ಜೋಲಾಡುತ್ತಿರುವ ಉತ್ತರೀಯವು ನವಿರಾದ ನೆರಿಗೆಗಳಿಂದ ಕೂಡಿ ಆ ಕಾಲದ ವಸ್ತ್ರನೈಜತೆಯನ್ನು ವ್ಯಕ್ತಪಡಿಸುತ್ತವೆ. ಈ ಗೊಂಬೆಯ ಸೊಂಟದ ಬಲಭಾಗದಲ್ಲಿ ಕತ್ತಿಯನ್ನು ತೂಗುಹಾಕಿಕೊಳ್ಳಲು ಒರೆಯ ಹಿಡಿಯನ್ನು ಅಳವಡಿಸಿರುವಂತೆ ತೋರುತ್ತದೆ. ಈ ಅಭಿಪ್ರಾಯವು ಪೂರಕವಾಗುವುದಾದರೆ, ಇದು ಯಾವುದೋ ಯೋಧನ ಪ್ರತಿಕೃತಿಯಾಗಿದೆ ಎನ್ನಬಹುದು. ಆದರೆ ಇದರ ವಸ್ತ್ರಾಲಂಕಾರವು ಯೋಧನದಾಗಿರದೆ ಬುದ್ಧ ಅಥವಾ ಬೋಧಿಸತ್ವನ ಗಾಂಧಾರ ವಿಗ್ರಹಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತಹದಾಗಿದೆ. ಪ್ರಸ್ತುತ ಮಣ್ಣಿನ ಬೊಂಬೆಯ ಬಗೆಗೆ ಈಗ ನಮಗೆ ದೊರೆತಿರುವ ಸ್ಥಿತಿಯಲ್ಲಿಯೇ ಸ್ಪಷ್ಟವಾಗಿ ಹೇಳಬರುವಂತಿಲ್ಲ. ಅತ್ಯಂತ ಸೂಕ್ಷ್ಮ ಮತ್ತು ಶುದ್ಧವಾದ ಹಾಗೂ ಮುರಿಯುವಂತಹ ಬಿಳಿ ಜೇಡಿಮಣ್ಣಿನಲ್ಲಿ ದಂತಕಪ್ಪು ವರ್ಣದ ಲೇಪನದೊಡನೆ ಈ ಗೊಂಬೆಯನ್ನು ತಯಾರಿಸಿರುವುದು ಗಮನೀಯವಾಗಿದೆ.

ಇಲ್ಲಿ ಚರ್ಚಿಸಲಾಗಿರುವ ಮಣ್ಣಿನ ಗೊಂಬೆಗಳಲ್ಲಿ ಕಂಡುಬರುವ ವೈವಿಧ್ಯಮಯ ನೆರಿಗೆಗಳುಳ್ಳ ಗ್ರೀಕೋ-ರೋಮನ್ನರ ಶಿಲ್ಪಗಳಲ್ಲಿಯ ವಸ್ತ್ರಾಲಂಕಾರದ ಲಕ್ಷಣಗಳು, ಈಗ ಪಾಕಿಸ್ಥಾನದಲ್ಲಿರುವ ಗಾಂಧಾರ ಪ್ರದೇಶದ ಪ್ರಾಚೀನ ಬೌದ್ಧ ನಿವೇಶನಗಳಲ್ಲಿ ದೊರೆತ ಕ್ರಿ. ಶ. ೧-೨ ಶತಮಾನಗಳ ಶಿಲ್ಪಗಳಲ್ಲಿ ಹೇರಳವಾಗಿ ಕಂಡುಬರುತ್ತವೆ. ಹಂಪೆಯ ಗೊಂಬೆಗಳನ್ನು ಗಾಂಧಾರ ಶೈಲಿಯ ಶಿಲ್ಪಗಳೊಂದಿಗೆ ತುಲನಾತ್ಮಕವಾಗಿ ನೋಡಿದಾಗ, ಇವುಗಳು ನಿಸ್ಸಂದೇಹವಾಗಿಯೂ ಎರಡನೆಯ ಶತಮಾನಕ್ಕೆ ಸೇರುತ್ತವೆನ್ನಬಹುದು. ಅತ್ಯಂತ ನುಣುಪಾದ ಜೇಡಿ ಮಣ್ಣಿನಿಂದ ಸಿದ್ಧಗೊಂಡ ಸೂಕ್ಷ್ಮ ನೆರಿಗೆಗಳೊಡನೆ ಕೂಡಿದ ಈ ಗೊಂಬೆಗಳನ್ನು ಹಂಪೆಯ ಪ್ರಾಗ್‌ಇತಿಹಾಸ ಕಾಲದ ಕಲಾವಂತಿಕೆ ರಹಿತ ಗೊಂಬೆಗಳೊಡನೆ ಹೋಲಿಸಿದಾಗ, ಇವು ಸ್ಥಳೀಯವಾಗಿ ತಯಾರಾದುವಲ್ಲವೆಂಬುದು ವ್ಯಕ್ತಪಡುತ್ತದೆ. ಪ್ರಾಯಶಃ ಈ ಗೊಂಬೆಗಳು ವ್ಯಾಪಾರ-ವಾಣಿಜ್ಯ ಸಂಬಂಧದಲ್ಲಿ ಗಾಂಧಾರ ಪ್ರದೇಶದಿಂದ ಹಂಪೆಯ ಪ್ರದೇಶಕ್ಕೆ ರವಾನೆಯಾಗಿದ್ದಿರಬೇಕು.

**ಗೊಂಬೆಯ ಪೀಠ :** ಇನ್ನೊಂದು ಗೊಂಬೆಯ ಮುಖ್ಯ ಭಾಗವೆನ್ನಬಹುದಾದ ನಾಜೂಕಾದ ಆಯತಾಕಾರದ ಚಿಕ್ಕ ಪೀಠದ ಅಳತೆಯು ೮.೨ ಸೆಂ.ಮೀ. ಉದ್ದ, ೩.೦ ಸೆಂ. ಮೀ. ಅಗಲ ಹಾಗೂ ೩.೦ ಸೆಂ.ಮೀ. ಎತ್ತರವಿದೆ. ಇದರ ಮುಂಭಾಗದಲ್ಲಿ ಎರಡು ಸಮಾನಾಂತರ ರೇಖೆಗಳನ್ನು ಕೊರೆಯಲಾಗಿದೆ ಹಾಗೂ ಇದರಲ್ಲಿ ಮೂರು ಉಬ್ಬು ವಿನ್ಯಾಸಗಳು ಅತ್ಯಂತ ಸುಂದರವಾಗಿ ಮೂಡಿಬಂದಿವೆ. ಇದರ ಮೇಲ್ಭಾಗವನ್ನು ನಸು ಕಂದುಬಣ್ಣದಿಂದ ಲೇಪಿಸಲಾಗಿದೆ.

ಹಂಪೆಯ ಮಹಾನವಮಿ ದಿಬ್ಬದ ಪರಿಸರದಲ್ಲಿ ಭಾರತೀಯ ಪ್ರಾಚ್ಯವಸ್ತು ಸರ್ವೇಕ್ಷಣಾಲಯವು ಕಾರ್ಯರೂಪಗೊಳಿಸಿದ ಉತ್ಖನನದಿಂದ ಒಂದು ಬಿಳಿಯ ಜೇಡಿ ಮಣ್ಣಿನ ಮನುಷ್ಯನ ಶಿರಭಾಗವೊಂದು ಬೆಳಕಿಗೆ ಬಂದಿದೆ.[1] ಈ ಮಣ್ಣಿನ ಗೊಂಬೆಯ ತಲೆಯುಡಿಗೆಯ ವಿನ್ಯಾಸವು ಗಾಂಧಾರಶೈಲಿಯನ್ನು ಹೋಲುತ್ತದೆ. ಗಾರೆ ಹಾಗೂ ಮಣ್ಣಿನ ಶಿಲ್ಪಗಳು ವಿಜಯನಗರ ಕಾಲದ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಉತ್ಖನನದಿಂದ ಬೆಳಕಿಗೆ ಬಂದಿರುವ ಈ ಗೊಂಬೆಯ ಭಾಗವು ವಿಜಯನಗರದ ಗಾರೆಶಿಲ್ಪಗಳಿಗಿಂತಲೂ ಉನ್ನತಮಟ್ಟದ್ದೆಂದು ಹೇಳಬಹುದಾಗಿದೆ. ಆದುದರಿಂದ ಇಲ್ಲಿ ದೊರೆತಿರುವ ಶಿರದ ಭಾಗವು ಅತ್ಯಂತ ಮುಖ್ಯವಾದುದಾಗಿದೆ. ಬೆಳಗಾವಿ ನಗರದ ಭಾಗವಾಗಿರುವ ವಡಗಾಂವ್-ಮಾಧವಪುರದ ಉತ್ಖನನ ಕಾಲದಲ್ಲಿ ದೊರೆತ ಕಪ್ಪು ಜೇಡಿ ಮಣ್ಣಿನ ಗೊಂಬೆಯ ಶಿರಭಾಗವು ಬಹುಶಃ ಬುದ್ಧನನ್ನು ಪ್ರತಿನಿಧಿಸುತ್ತದೆ.[2] ಇದು ಸಹಾ ಗಾಂಧಾರಶೈಲಿಯನ್ನು ಹೋಲುತ್ತದೆ.

ಹಂಪೆಯ ಉತ್ಖನನ ಕಾರ್ಯದಲ್ಲಿ ಸಿಕ್ಕಿರುವ ಕ್ರಿ.ಶ. ೧ ಮತ್ತು ೨ನೆಯ ಶತಮಾನದ ಸುಣ್ಣದ ಹಲಗೆಯ ಮೇಲಿರುವ ಬ್ರಾಹ್ಮಿ ಶಾಸನವನ್ನು "ತರಸಾ ಪುತಸಾ ದಾನಮ್" ಎಂದು ಅರ್ಥೈಸಲಾಗಿದೆ.[3] ಹಜಾರ ರಾಮಸ್ವಾಮಿ ದೇವಾಲಯದ ಸಮೀಪದಲ್ಲಿ ಉತ್ಖನನ ನಡೆಸಿದಾಗ ದೊರೆತ ಅವಶೇಷಗಳಲ್ಲಿ ಶಾಸನ ಬರಹವುಳ್ಳ ಬೌದ್ಧ ಜಾತಕಕಥೆಗಳನ್ನು ಪ್ರತಿನಿಧಿಸುವ ಕೆತ್ತನೆಯುಳ್ಳ ಫಲಕಗಳು ಮತ್ತು 'ಆಯಕ' ಸ್ತಂಭವು (ಎಲ್ಲವೂ ಸುಣ್ಣಕಲ್ಲಿನಲ್ಲಿ ತಯಾರಿಸಲ್ಪಟ್ಟಿವೆ.) ಅತ್ಯಂತ ಗಮನೀಯವಾಗಿವೆ. ವಿಜಯವಿಠ್ಠಲಸ್ವಾಮಿ ದೇವಾಲಯ ಪರಿಸರದ ಪುರಾತನ ನಿವೇಶನವೆಂದು ತೀರ್ಮಾನಿಸಲಾಗಿರುವ ಮೊಸಳಯ್ಯನಗುಡ್ಡದ ಮೇಲ್ಭಾಗದ ಮತ್ತು ೧೯೮೨ರಲ್ಲಿ ನಾನೇ ಪರಿಶೋಧಿಸಿದಾಗ ಮಾತಂಗ ಪರ್ವತದ ತಪ್ಪಲಲ್ಲಿ ದೊರೆತ ಅವಶೇಷಗಳು ಹೊಸಶಿಲಾಯುಗ (ಕ್ರಿ.ಪೂ.ಸು. ೨೦೦೦-೧೦೦೦) ಮತ್ತು ಪ್ರಾಗ್‌ಇತಿಹಾಸಯುಗ (ಕ್ರಿ.ಪೂ. ೩೦೦-ಕ್ರಿ.ಶ.೨೦೦) ಸಂಸ್ಕೃತಿಗಳ ಪ್ರತೀಕಗಳಾಗಿವೆ. ಈ

1. *Indian Archaeology, A Review*, an Annual Report of the Archaeological Survey of India, New Delhi, 1978-79 : 45, Plate XIV
2. A. Sundara: 'A Two Thousand Year old Town and its Architecture in Vadgaon-Madhavapur (Belgaum)', *Madhu* (Shri M. N. Deshpande Festschrift), Delhi, 1981, pp. 87-89, Plate XXIII
3. *I.A.R.*, 1975-76, p. 20

ಉದಾಹರಣೆಗಳಿಂದ ಹಂಪೆಯ ಪರಿಸರವು ಹೊಸಶಿಲಾ ಯುಗದಲ್ಲಿಯೇ ಜನನಿಬಿಡ ಪ್ರದೇಶವಾಗಿದ್ದುದಲ್ಲದೆ ಮಾನವನ ಚಟುವಟಿಕೆಗಳ ಕೇಂದ್ರವಾಗಿ ವಿಕಾಸ ಪಡೆಯುತ್ತಿದ್ದಿತೆಂದು ವ್ಯಕ್ತಪಡುತ್ತದೆ.

ಈ ಪ್ರಾಗ್ಇತಿಹಾಸ ಕಾಲದಲ್ಲೆ ಬೌದ್ಧಸ್ತೂಪವೊಂದು ಇಲ್ಲಿ ನಿರ್ಮಾಣಗೊಂಡು, ನಂತರ ಮಧ್ಯಕಾಲದ ವೇಳೆಗೆ ಅಲಕ್ಷ್ಯಕ್ಕೊಳಪಟ್ಟು ಅದು ನಿರುಪಯುಕ್ತವಾಯಿತು. ಅನಂತರವೂ ಈ ಪ್ರದೇಶದಲ್ಲಿ ಚುರುಕಾಗಿ ನಡೆದ ರಾಜಧಾನಿಯ ನಿರ್ಮಾಣದಲ್ಲಿ, ಸಹಜವಾಗಿಯೇ ಅಲಕ್ಷಿಸಲ್ಪಟ್ಟಿದ್ದ ಬೌದ್ಧಸ್ತೂಪದ ಇಂತಹ ಅವಶೇಷಗಳನ್ನೂ ಬಳಸಿರಬಹುದಾಗಿದೆ. ಇಲ್ಲಿರುವ ಅತಿ ಉಬ್ಬು ಶಿಲ್ಪಗಳುಳ್ಳ ಫಲಕಗಳು ಅನಂತರದ ಅಮರಾವತಿ ಅಥವಾ ಇಕ್ಷ್ವಾಕು ಶೈಲಿಯನ್ನು ಹೋಲುತ್ತವೆ. ಉಡೆಗೋಲಮ್ ಮತ್ತು ನಿಟ್ಟೂರುಗಳಲ್ಲಿ ದೊರೆತಿರುವ ಅಶೋಕ ಸಾಮ್ರಾಟನ ವೈಯಕ್ತಿಕ ಹೆಸರನ್ನು ಸೂಚಿಸುವ ಬಂಡೆಶಾಸನಗಳು ಮತ್ತು ಅಲ್ಲಿಯ ಇತರೆ ಪ್ರಾಚ್ಯ ನಿವೇಶನಗಳು ಹಂಪೆಯಿಂದ ಸ್ವಲ್ಪ ಅಂತರದಲ್ಲಿ ಇವೆ.

ಆದ್ದರಿಂದ ಇದುವರೆಗೂ ಚರ್ಚಿಸಲಾಗಿರುವ ಆಧಾರದ ಮೇಲೆ, ಹಂಪೆಯು ಕೂಡಾ ಉತ್ತರದಲ್ಲಿಯ ತೇರ್ ಮತ್ತು ಸನ್ನತ್ತಿ, ದಕ್ಷಿಣದಲ್ಲಿಯ ಚಂದ್ರವಳ್ಳಿ, ಪಶ್ಚಿಮದಲ್ಲಿಯ ವಡಗಾಂವ್-ಮಾಧವಪುರ ಮತ್ತು ಕೊಲ್ಲಾಪುರ ಮುಂತಾದ ಪ್ರಸಿದ್ಧ ಪ್ರಾಚೀನ ವ್ಯಾಪಾರ-ವಾಣಿಜ್ಯ ಕೇಂದ್ರಗಳಂತೆಯೇ ಒಂದು ಪ್ರಮುಖ ಕೇಂದ್ರವಾಗಿದ್ದು, ದೂರಪ್ರದೇಶಗಳ ವರ್ತಕರನ್ನು ಆಕರ್ಷಿಸುತ್ತಿದ್ದಿತು. ಈ ವಿವರಗಳೇ ಪ್ರಸ್ತುತ ಗಾಂಧಾರಶೈಲಿಯ ಬಿಳಿಯ ಮಣ್ಣಿನ ಗೊಂಬೆಗಳ ಇರುವಿಕೆಗೆ ಕಾರಣವೆಂಬುದನ್ನು ಸ್ಪಷ್ಟಪಡಿಸುತ್ತವೆ.*

(ಕನ್ನಡಾನುವಾದ/ಎಸ್. ಎ. ಜಗನ್ನಾಥ್)

---

* ಎರಡು ಬಿಳಿಯ ಜೇಡಿಮಣ್ಣಿನ ಗೊಂಬೆಗಳ ಅಧ್ಯಯನಕ್ಕೆ ಅನುಮತಿ ನೀಡಿ ಈ ಪ್ರಬಂಧವನ್ನು ಪೂರೈಸಲು ಅವಕಾಶ ಕಲ್ಪಿಸಿಕೊಟ್ಟುದಕ್ಕೆ ನಾನು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಆಭಾರಿಯಾಗಿದ್ದೇನೆ.

ಎಂ. ಎನ್. ಪ್ರಭಾಕರ್

# ದೇವಾಲಯಗಳ ಉಗಮ ಮತ್ತು ಲಾಡ್‌ಖಾನ್ ದೇವಾಲಯ

ಕ್ರಿಸ್ತಶಕಕ್ಕೆ ಮುನ್ನ ದೇವಾಲಯಗಳು ರಚನೆಗೊಂಡವು ಎಂದು ಹೇಳಲು ಸಾಧ್ಯವಿದ್ದರೂ ಅವುಗಳ ಸ್ವರೂಪ ವ್ಯಕ್ತವಾಗುವುದಿಲ್ಲ. ಹರಪ್ಪ–ಮಹೆಂಜೊದಾರೋ ಉತ್ಖನನಗಳಲ್ಲಿ ಸಾರ್ವಜನಿಕ ಕಟ್ಟಡಗಳನ್ನು ಗುರುತಿಸಬಹುದೇ ಹೊರತು ದೇವಾಲಯಗಳೆನ್ನಬಹುದಾದ ರಚನೆಗಳು ಕಾಣಸಿಗುವುದಿಲ್ಲ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[1] ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ಹೆಲಿಯೋಡೊರಸ್ ಸ್ಥಾಪಿಸಿದ ಗರುಡ ಸ್ತಂಭದ ಉಲ್ಲೇಖ ವಾಸುದೇವನ ದೇವಾಲಯಕ್ಕೆ ಸಂಬಂಧಿಸಿದ್ದು,[2] ಇದು ದೇವಾಲಯಗಳಿಗೆ ಸಂಬಂಧಿಸಿದ ಅತಿಪ್ರಾಚೀನ ಉಲ್ಲೇಖವೆನಿಸಿದೆ. ಕ್ರಿ.ಶ. ಒಂದನೇ ಶತಮಾನದಲ್ಲಿ ರಾಜಾಸ್ಥಾನದ ಗೌಸುಂದಿಯಲ್ಲಿ ನಾರಾಯಣನಿಗಾಗಿ ಕಟ್ಟಲ್ಪಟ್ಟ 'ನಾರಾಯಣ ವಾಟಕ'ದ ಸ್ಪಷ್ಟ ಉಲ್ಲೇಖವಿದೆ.[3] ಕಟ್ಟಡಗಳೊಂದಿಗೆ ಗುರುತಿಸಲ್ಪಡುವ ಅತಿಪ್ರಾಚೀನ ದೇವಾಲಯ ತಿಗುವಾದಲ್ಲಿಯ ವಿಷ್ಣುದೇವಾಲಯ. ಇದರೊಂದಿಗೆ ಸಾಂಚಿಯ ಹದಿನೇಳನೆಯ ದೇವಾಲಯವನ್ನೂ ವಿದ್ವಾಂಸರು ಐದನೆಯ ಶತಮಾನಕ್ಕೆ ಸೇರಿದ್ದೆಂದು ಪರಿಗಣಿಸಿದ್ದಾರೆ. ಈ ದೇವಾಲಯಗಳಲ್ಲಿ ಚತುರಶ್ರಾಕಾರದ ಗರ್ಭಗೃಹವಿದ್ದು, ಮುಂಗಡೆ ಸ್ತಂಭಗಳನ್ನಾಧರಿಸಿದ ಮುಖಮಂಟಪವಿದೆ. ಇವೆರಡೂ ಸ್ವತಂತ್ರ ದೇವಾಲಯಗಳ ಮೂಲಸ್ವರೂಪವೆನಿಸಿವೆ. ಈ ರಚನೆಗಳ ಛಾವಣಿ ಸಮತಟ್ಟಾಗಿದ್ದು, ನೀರು ಹರಿದುಹೋಗಲು ಅವಕಾಶವಿದೆ.

ಗರ್ಭಗೃಹವೊಂದರಿಂದಲೇ ದೇವಾಲಯವೆಂದು ಗುರುತಿಸಲು ಸಾಧ್ಯವಿದೆ. ವಸ್ತುತಃ ದೇವಾಲಯಗಳ ಮಾದರಿಗಳನ್ನು ಗಮನಿಸಿದಾಗ, ಗರ್ಭಗೃಹ ಮತ್ತು ಅದಕ್ಕೆ ಹೊಂದಿಕೊಂಡ ಮುಖಮಂಟಪ, ಇದು ಕನಿಷ್ಠ ಅವಶ್ಯಕತೆ ಎಂದು ಗುರುತಿಸಬಹುದಾಗಿದೆ. ಪಾಶ್ಚಾತ್ಯರ ದೇವಾಲಯಗಳ ಸ್ವರೂಪವನ್ನು ಗಮನಿಸಿದಾಗ ಈ ಕನಿಷ್ಠ ಅವಶ್ಯಕತೆಯು ಸಾರ್ವತ್ರಿಕವಾಗಿ ಮನ್ನಣೆಗಳಿಸಿರುವುದನ್ನು ಕಾಣಬಹುದು. ವಿಟ್ರೂವಿಯಸ್ ಗುರುತಿಸುವ ಆ್ಯಂಟಿಸ್ ಮತ್ತು ಪ್ರೊಸ್ಟೈಲ್ ಮಾದರಿಗಳಲ್ಲಿ ಗರ್ಭಗೃಹ ಮತ್ತು ಮುಖಮಂಟಪವನ್ನು ಮಾತ್ರ ಕಾಣುತ್ತೇವೆ. ತಿಗುವಾ ಹಾಗೂ ಸಾಂಚಿ ದೇವಾಲಯಗಳ ನಂತರ ಗುಪ್ತರಕಾಲದ,ದೇವಘರ್‌ನ ವಿಷ್ಣುದೇವಾಲಯ, ಭೂಮಾರದಲ್ಲಿನ ಶಿವಾಲಯ, ನಾಚ್ನಕುಟಾರದ ಪಾರ್ವತಿ ದೇವಾಲಯ, ಇವುಗಳಲ್ಲಿ ಗರ್ಭಗೃಹವು ಮಧ್ಯ ಪ್ರದೇಶವನ್ನಾವರಿಸಿದೆ. ಈ ರಚನೆಗಳನ್ನೂ ವಿದ್ವಾಂಸರು ಐದನೇ ಶತಮಾನವೆಂದು ಗುರುತಿಸಿದ್ದಾರೆ.[5] ಇದೇ ಹಾದಿಯಲ್ಲಿ ಐಹೊಳೆಯ ಲಾಡ್‌ಖಾನ್ ದೇವಾಲಯವನ್ನೂ ಪರಿಗಣಿಸಬಹುದು.

1. ಕೆ. ಶಿವರಾಮ ಕಾರಂತ : ಭಾರತೀಯ ಶಿಲ್ಪ, ಬೆಂಗಳೂರು, ೧೯೭೫, ಪು. ೧೫
2. ಡಿ. ಸಿ. ಸರ್ಕಾರ್ : ಸೆಲೆಕ್ಟ್ ಇನ್‌ಸ್ಕ್ರಿಪ್ಷನ್ಸ್, ಕಲ್ಕತ್ತಾ, ೧೯೪೨, ಪು. ೯೦-೯೧
3. ಅದೇ, ಪು. ೯೧-೯೨
4. ಮೋರಿಸ್ ಹಿಕ್ಕಿಮಾರ್ಗನ್ (ಅನು.) : ವಿಟ್ರೂವಿಯಸ್-ದಿ ಟೆನ್ ಬುಕ್ಸ್ ಆನ್ ಆರ್ಕಿಟೆಕ್ಚರ್, ೧೯೬೦, ಪು. ೭೫
5. ವಿ. ಕೆ. ಅಗರ್‌ವಾಲಾ : ಟೆಂಪಲ್ ಆರ್ಕಿಟೆಕ್ಚರ್ ಇನ್ ಗುಪ್ತ ಪೀರಿಯಡ್, ವಾರಣಾಸಿ, ೧೯೬೮, ಪು. ೩೫-೩೬, ೪೨

ಕರ್ನಾಟಕದಲ್ಲಿ ಕ್ರಿಸ್ತಶಕದ ಆರಂಭದಲ್ಲಿ ಕಟ್ಟಿದ ದೇವಾಲಯಗಳು ಉಳಿದಿಲ್ಲವಾದರೂ ಕ್ರಿ.ಶ. ೧೫೦ರ ಕದಂಬರ ಪ್ರಾಕೃತ ಶಾಸನವು ದೇವಾಲಯಗಳು ರಚನೆಗೊಂಡದ್ದನ್ನು ದೃಢಪಡಿಸುತ್ತದೆ.[6] ಕರ್ನಾಟಕದ ಪ್ರಾಚೀನ ದೇವಾಲಯವೆನಿಸಿದ ಕ್ರಿ.ಶ. ೪೫೦ರ ತಾಳಗುಂದದ ದೇವಾಲಯವು,[7] ತನ್ನ ಮೂಲರೂಪವನ್ನು ಕಳೆದುಕೊಂಡಿರುವುದರಿಂದ ದೇವಾಲಯವಿತ್ತೆಂಬ ದಾಖಲೆಯಾಗಿ ಮಾತ್ರ ಗುರುತಿಸಲ್ಪಡುತ್ತದೆ. ಆದ್ದರಿಂದ ದೇವಾಲಯಗಳ ಉಗಮವನ್ನು ಗುರುತಿಸುವಾಗ ಐಹೊಳೆ, ಬಾದಾಮಿ, ಪಟ್ಟದಕಲ್ಲು ದೇವಾಲಯಗಳಿಗೇ ಮೊರೆ ಹೋಗಬೇಕು. ಕನಿಷ್ಠ ಅವಶ್ಯಕತೆಗಳೊಡನೆ ನಿಂತ ಹಲವಾರು ಕಟ್ಟಡಗಳನ್ನು ಮಹಾಕೂಟದಲ್ಲಿಯ ಪುಷ್ಕರಿಣಿಯ ಆವರಣದಲ್ಲಿ, ಬಾದಾಮಿಯ ಭೂತನಾಥ ದೇವಾಲಯದ ಆವರಣದಲ್ಲಿ ಹಾಗೂ ಐಹೊಳೆಯಲ್ಲಿ ಕಾಣುತ್ತೇವೆ. ಕೆಲವೆಡೆಗಳಲ್ಲಿ ಗರ್ಭಗೃಹ, ಎರಡು ಅಥವಾ ನಾಲ್ಕು ಸ್ತಂಭಗಳ ಮುಖಮಂಟಪ, ಮತ್ತೊಂದೆಡೆಯಲ್ಲಿ ಗರ್ಭಗೃಹ, ಮಂಟಪ, ಕಕ್ಷಾಸನಗಳುಳ್ಳ ಮುಖಮಂಟಪ ರಚನೆಗಳನ್ನು ಕಾಣುತ್ತೇವೆ. ತಿಗುವಾ ಮತ್ತು ಸಾಂಚಿ ದೇವಾಲಯಗಳಿಗೂ ಮಹಾಕೂಟ, ಬಾದಾಮಿ, ಇತ್ಯಾದಿಗಳಲ್ಲಿ ಕಂಡು ಬರುವ ಕನಿಷ್ಠ ದೇವಾಲಯಗಳಿಗೂ ಯಾವುದೇ ಸಂಬಂಧಗಳು ಗುರುತಿಸಲ್ಪಡದಿದ್ದರೂ ದೇವಾಲಯಗಳ ಬೆಳವಣಿಗೆಯಲ್ಲಿ ಇವುಗಳ ಅಧ್ಯಯನ ಅಗತ್ಯವೆನಿಸಿದೆ.

ಕರ್ನಾಟಕದ ಐಹೊಳೆ, ಪಟ್ಟದಕಲ್ಲು, ಬಾದಾಮಿ, ಮಹಾಕೂಟ, ಇತ್ಯಾದಿ ಸ್ಥಳಗಳನ್ನು ದೇವಾಲಯದ ತೊಟ್ಟಿಲು ಎಂದು ಕರೆದಿದ್ದು, ಈ ದೇವಾಲಯಗಳ ರಚನೆಯನ್ನು ವಿಶ್ಲೇಷಿಸಿ ಬೆಳೆದುಬಂದ ಬಗೆಯನ್ನು ಗುರುತಿಸುವ ಹಲವಾರು ಪ್ರಯತ್ನಗಳು ನಡೆದಿದೆ. ಐಹೊಳೆಯ ಲಾಡ್‌ಖಾನ್ ದೇವಾಲಯ, ಗೌಡರಗುಡಿ, ಕೊಂತಿಗುಡಿಗಳು ಪ್ರಾರಂಭಿಕ ದೇವಾಲಯಗಳೆನಿಸಿದ್ದು, ಪ್ರಾಚೀನತೆಯನ್ನು ನಿರ್ಧರಿಸುವಲ್ಲಿ ವಾದವಿವಾದಗಳ ಸುಳಿಯಲ್ಲಿ ಸಿಕ್ಕಿಕೊಂಡಿವೆ. ದಾಕ್ಷಿಣಾತ್ಯ ಹಾಗೂ ಔತ್ತರೇಯ ದೇವಾಲಯಗಳ ಕವಲು ಕಾಣಿಸಿಕೊಂಡಿರುವುದು ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿ. ಇದಕ್ಕೆ ಮುನ್ನ ಉತ್ತರದಲ್ಲಿ ದೇವಾಲಯಗಳು ರಚಿಸಲ್ಪಟ್ಟರೂ ಖಚಿತ ಆಕಾರ ಪಡೆದದ್ದು ಈ ಪ್ರದೇಶದಲ್ಲಿ. ಇದರಿಂದಾಗಿ ಈ ಪ್ರದೇಶವು ದೇವಾಲಯಗಳ ಅಧ್ಯಯನದಲ್ಲಿ ಮಹತ್ವಪೂರ್ಣವೆನಿಸಿದೆ.

ಇಲ್ಲಿಯ ದೇವಾಲಯಗಳ ರಚನೆ, ವಿನ್ಯಾಸಗಳನ್ನೂ ಸಾಧ್ಯವಾದೆಡೆಯಲ್ಲಿ ಶಾಸನಗಳನ್ನೂ ಆಧರಿಸಿ ವಿದ್ವಾಂಸರು ಪ್ರಾಚೀನತೆಯನ್ನು ನಿರ್ಧರಿಸುತ್ತಿದ್ದರು. ಇದರೊಡನೆ ದೇವಾಲಯಗಳ ಸುತ್ತಣ ಮಣ್ಣಿನ ಸ್ತರಗಳ ಸರ್ವೇಕ್ಷಣೆ ನಡೆಸಿ ಪ್ರಾಚೀನತೆಯನ್ನು ನಿಷ್ಕರ್ಷಿಸಿದರು. ಇವೆರಡೂ ರೀತಿಯ ಅಧ್ಯಯನದಿಂದ ಮೂಡಿಬಂದ ಫಲಿತಾಂಶಗಳು ವಿವಿಧ ರೀತಿಯವು. ವಿದ್ವಾಂಸ ಪರ್ಸಿಬ್ರೌನ್ ವಾಸ್ತುನೂಲವನ್ನಾಧರಿಸಿ ಲಾಡ್‌ಖಾನ್ ದೇವಾಲಯವನ್ನು ಅತಿ ಪ್ರಾಚೀನ ದೇವಾಲಯವೆಂದು ಗುರುತಿಸಿದರು.[9] ಕೆ. ವಿ. ಸೌಂದರರಾಜನ್ ಅವರು ಐಹೊಳೆಯ ಜ್ಯೋತಿರ್ಲಿಂಗ ಗುಡಿಗಳಲ್ಲಿಯ ನಾಲ್ಕು ಸ್ತಂಭಗಳ ಮಂಟಪ ರಚನೆಯನ್ನು ಗುರುತಿಸಿದ್ದು, ಈ ರಚನೆಗಳು ದೇವಾಲಯಗಳ ಮೂಲವಿರಬಹುದೆಂದು ಗುರುತಿಸಿದರು.[10] ದೇವಾಲಯಗಳ ಸುತ್ತ ತುಂಬಿದ್ದ ಮಣ್ಣಿನ ಸ್ತರಗಳ ಸರ್ವೇಕ್ಷಣೆಯಿಂದ ಇದಕ್ಕಿಂತ ಭಿನ್ನವಾದ ಫಲಿತಾಂಶ ಕಂಡುಬಂದಿದ್ದು, ಈ ಅಧ್ಯಯನರೀತ್ಯಾ ಗೌಡರಗುಡಿಯನ್ನು ಅತಿ ಪ್ರಾಚೀನವೆಂದು ಡಾ॥ ಎಸ್. ಆರ್. ರಾವ್ ಅವರು ಗುರುತಿಸಿದರು.[11]

---

6. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬, ಪು. ೧೭೩
7. ಅದೇ, ಪು. ೧೭೪
8. ಪರ್ಸಿಬ್ರೌನ್ : ಇಂಡಿಯನ್ ಆರ್ಕಿಟೆಕ್ಚರ್ (ಬುದ್ಧಿಸ್ಟ್ ಅಂಡ್ ಹಿಂದೂ), ಬೊಂಬಾಯಿ, ೧೯೬೫, ಪು. ೫೧, ೫೭
9. ಆರ್. ಎಸ್. ಗುಪ್ತೆ : ದಿ ಆರ್ಟ್ ಅಂಡ್ ಆರ್ಕಿಟೆಕ್ಚರ್ ಆಫ್ ಐಹೊಳೆ, ಬೊಂಬಾಯಿ, ೧೯೬೭, ಪು. ೧೧
10. ಕೆ. ವಿ. ಸೌಂದರರಾಜನ್ : ಟೆಂಪಲ್ ಆರ್ಕಿಟೆಕ್ಚರ್ ಇನ್ ಕರ್ನಾಟಕ ಅಂಡ್ ಇಟ್ಸ್ ರಾಮಿಫಿಕೇಷನ್ಸ್, ಧಾರವಾಡ, ೧೯೬೯, ಪು. ೩
11. ಎಸ್. ಆರ್. ರಾವ್ : 'ದಿ ನೋಟ್ ಆನ್ ದಿ ಕ್ರಾನಾಲಜಿ ಆಫ್ ಅರ್ಲಿ ಚಾಲುಕ್ಯನ್ ಟೆಂಪಲ್ಸ್', ಲಲಿತಕಲಾ : ಸಂಖ್ಯೆ ೧೫, ನವದೆಹಲಿ, ೧೯೭೨, ಪು. ೯

ದೇವಾಲಯಕ್ಕೆ ಸಂಬಂಧಿಸಿದಂತೆ ವಾಸ್ತುಗ್ರಂಥಗಳೇ ಅಲ್ಲದೆ, ಮತ್ಸ್ಯಪುರಾಣ, ಶುಕ್ರನೀತಿ, ಮಾನಸೋಲ್ಲಾಸ, ಇತ್ಯಾದಿ ಪ್ರಾಚೀನ ಗ್ರಂಥಗಳೂ ವಾಸ್ತು ರಚನೆಯನ್ನು ಪ್ರಾಸಂಗಿಕವಾಗಿ ವಿವರಿಸಿವೆ. ಈ ಗ್ರಂಥಗಳು ವಿವರಿಸುವ ವಾಸ್ತುರೂಪಗಳು ಆಯಾ ಗ್ರಂಥ ರಚನಾ ಕಾಲಕ್ಕೆ ಅಥವಾ ಹಿಂದಕ್ಕೆ ಪ್ರಚಲಿತದಲ್ಲಿದ್ದು, ದೇವಾಲಯಗಳ ಬೆಳವಣಿಗೆಗೆ ಕಾರಣವಾಗಿವೆ ಎನ್ನಬಹುದು. ಪ್ರಾಚೀನವೆನ್ನುವ ಈ ಗ್ರಂಥಗಳ ಕಾಲ ಖಚಿತವಾಗಿ ನಿಷ್ಕರ್ಷೆಯಾಗದಿದ್ದರೂ ಈ ವಿವರಗಳನ್ನು ವ್ಯವಸ್ಥಿತವಾದ ಕಕ್ಷೆಯಲ್ಲಿರಿಸಿ ದೇವಾಲಯಗಳ ಮೂಲವನ್ನು ಗುರುತಿಸಬಹುದು. ಈ ವಿವರಗಳು ದೇವಾಲಯಗಳ ರಚನೆಯ ವಿಕಾಸವನ್ನು ಗುರುತಿಸಲು ಸಹಾಯಕವಾಗಲಿವೆ. ಅಂತಹ ಪ್ರಯತ್ನವೇ ಈ ಲೇಖನದ ಉದ್ದೇಶ.

ಐಹೊಳೆಯ ಲಾಡ್‌ಖಾನ್ ಕಟ್ಟಡವು ವಿದ್ವಾಂಸ ಪರ್ಸಿಬ್ರೌನರ ಪ್ರಕಾರ ಅತಿಪ್ರಾಚೀನ ದೇವಾಲಯ. ಈ ವಾಸ್ತುರಚನೆಯು ಚತುರಶ್ರಾಕಾರದ ರಚನೆಯೆನಿಸಿದ್ದು ಮುಂಗಡೆ ಮುಖಮಂಟಪವಿದೆ. ಚತುರಶ್ರಾಕಾರದ ರಚನೆಯ ಮಧ್ಯಭಾಗವು ನಾಲ್ಕು ಬೃಹತ್‌ಸ್ತಂಭಗಳಿಂದ ಕೂಡಿದ್ದು ಚತುಷ್ಕವೆನಿಸಿದೆ. ಚತುಷ್ಕದ ಸುತ್ತ ಅಲಿಂದ ರಚನೆಯಿದೆ. ಅಲಿಂದ ರಚನೆಯಲ್ಲಿ ಎರಡು ಹಂತಗಳಿದ್ದು, ಈ ಹಂತಗಳ ಸ್ತಂಭಗಳು ಸ್ಥಾನಕ್ಕೆ ತಕ್ಕಂತೆ ಗಾತ್ರ ಹಾಗೂ ಎತ್ತರದಲ್ಲಿ ಬದಲಾಗಿವೆ. ಮೊದಲ ಹಂತದ ಹನ್ನೆರಡು ಸ್ತಂಭಗಳು ಚತುಷ್ಕದ ನಾಲ್ಕು ಸ್ತಂಭಗಳನ್ನು ಆವರಿಸಿ ನಿಂತಿವೆ. ಹೊರಾಂಗಣದ ಎರಡೂ ಪಾರ್ಶ್ವಗಳಲ್ಲಿ ಗಾಳಿ ಬೆಳಕಿನ ಅನುಕೂಲಕ್ಕಾಗಿ ಜಾಲಂದ್ರಗಳ ಜೋಡಣೆಯಿದ್ದು, ಜಾಲಂದ್ರಗಳೊಡನೆ ಸ್ತಂಭರಚನೆಯಿದೆ. ಹೆಚ್ಚಿನ ಭಾಗದಲ್ಲಿ ಭಿತ್ತಿರಚನೆಯಿದ್ದು, ಮೂಲೆಗಳಲ್ಲಿ ಕುಡ್ಯಸ್ತಂಭಗಳ ರಚನೆಯಿದೆ. ಹಿಂಬದಿಯ ಭಿತ್ತಿಗೆ ಅಂಟಿಕೊಂಡಂತೆ ತದನಂತರ ಕಾಲದಲ್ಲಿ ರಚಿತವಾದ ಪ್ರತ್ಯೇಕ ಗರ್ಭಗೃಹವಿದೆ. ಮುಂಗಡೆಯ ಮುಖಮಂಟಪವು ಹನ್ನೆರಡು ಸ್ತಂಭಗಳಿಂದ ರಚಿಸಲ್ಪಟ್ಟಿದ್ದು ಕಕ್ಷಾಸನದಿಂದಲೂ ಆವರಿಸಿದೆ. ಮುಖಮಂಟಪದ ಸ್ತಂಭಗಳ ಮೇಲೆ ಮೂರ್ತಿರಚನೆಗಳಿವೆ. ಪರ್ಸಿಬ್ರೌನರ ಪ್ರಕಾರ ಈ ದೇವಾಲಯವು ಸಾರ್ವಜನಿಕ ಸಭೆ ನಡೆಸಬಹುದಾದ 'ಶಾಂತಾಗಾರ'. ಇಂತಹ ರಚನೆಗಳನ್ನು ವಾಸ್ತುಶಾಸ್ತ್ರಗಳು 'ಸಭಾ' ಎಂದು ಗುರುತಿಸುತ್ತವೆ. 'ಸಭಾ' ಎನ್ನುವುದು ವಾಸ್ತುವಿಶೇಷರಚನೆಯೂ ಹೌದು. ದೇವಾಲಯಗಳು ನಿಶ್ಚಿತ ಆಕಾರ ತಳೆಯುವುದಕ್ಕೆ ಮುನ್ನ ಸಾರ್ವಜನಿಕ ಕಟ್ಟಡಗಳನ್ನು ಬಳಸಿದವು ಎಂದು ಹೇಳಲು ಅವಕಾಶವಿದ್ದು, ಲಾಡ್‌ಖಾನ್ ಕಟ್ಟಡವು ಸ್ಪಷ್ಟ ಉದಾಹರಣೆಯಾಗಿ ನಿಲ್ಲುತ್ತದೆ. ಈ ರೀತಿಯ ಕಟ್ಟಡಗಳು ಬೆಳೆದುಬಂದ ಬಗೆಯನ್ನು ಶಾಸ್ತ್ರರೀತ್ಯಾ ಹಂತ ಹಂತವಾಗಿ ಗುರುತಿಸಿದಲ್ಲಿ, ದೇವಾಲಯಗಳು ಅನುಸರಿಸಿದ ಹಾದಿಯೂ ವ್ಯಕ್ತಗೊಳ್ಳುವುದು.

ಕ್ರಿಸ್ತಶಕ ೯೪೫ರ ರಾಷ್ಟ್ರಕೂಟರ ಮೂರನೆಯ ಕೃಷ್ಣನ ಪ್ರಧಾನಿ ನಾರಾಯಣನು ಶಾಲೆಯನ್ನು ನಿರ್ಮಿಸಿ ತ್ರಿಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದನ್ನು ಬಿಜಾಪುರದ ಸಾಲೊಟಗಿಯ ಶಾಸನವು ಗುರುತಿಸುತ್ತದೆ.[12] ಕ್ರಿ. ಶ. ೧೦೫೮ರ ಚಾಲುಕ್ಯ ಆಹವಮಲ್ಲನ ಕಾಲದ ಕಲಬುರ್ಗಿ ಜಿಲ್ಲೆಯ ನಾಗಾವಿ ಶಾಸನವು ಮತ್ತೊಂದು ತ್ರೈಪುರುಷ ದೇವರ ಶಾಲೆಯನ್ನು ಹೆಸರಿಸುತ್ತದೆ.[13] ಈ ಶಾಸನಗಳಿಂದ ಕ್ರಿ.ಶ. ಹತ್ತು–ಹನ್ನೊಂದನೆಯ ಶತಮಾನದಲ್ಲಿ ತ್ರೈಪುರುಷರ ದೇವಾಲಯವನ್ನು 'ಶಾಲಾ' ಎಂದು ಕರೆದಿದ್ದನ್ನು ಗಮನಿಸಬಹುದು. ಶಾಲಾ ರಚನೆಯು ವಾಸ್ತುಶಾಸ್ತ್ರಗಳ ಪ್ರಕಾರ ವಾಸ್ತುವಿಶೇಷರಚನೆಯೂ ಹೌದು. ಮತ್ಸ್ಯಪುರಾಣ, ಮಾನಸೋಲ್ಲಾಸ, ಸಮರಾಂಗಣ ಸೂತ್ರಧಾರ, ಅಪರಾಜಿತ ಪೃಚ್ಛಾ ಗ್ರಂಥಗಳು ಶಾಲಾರಚನೆಯ ವೈವಿಧ್ಯತೆಯನ್ನೊದಗಿಸಿವೆ. ಈ ನಾಡಿನಲ್ಲಿಯೂ ವೈವಿಧ್ಯತೆಗಳನ್ನೊಳಗೊಂಡ ಶಾಲಾ

---

12. ಎಪಿಗ್ರಾಫಿಯ ಇಂಡಿಕಾ, ಸಂಪುಟ ೪, ಪು. ೬೦-೬೧

13. ಎ. ಎಸ್. ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ (ಸಂ.) : ಶಾಸನಸಾಹಿತ್ಯ ಸಂಚಯ, ಧಾರವಾಡ, ಪು. ೯೩

ರಚನೆಗಳು ಬಳಕೆಯಲ್ಲಿದ್ದುವೆಂಬುದಕ್ಕೆ ಕೆಳಕಂಡ ಶಾಸನೋಲ್ಲೇಖವು ಸಾಕ್ಷಿಯಾಗಿದೆ:

ಲೀಲೆಯಿನೆಸೆವೇಕ
ಶಾಲ ದ್ವಿಶಾಲ ತ್ರಿ
ಶಾಲ ಚತುಶ್ಶಾಲ ಪಂಚಶಾಲಂ
ಮೇಲೆನಿಸಿತ್ತಲ್ಲಿಂ
ಮೇಲೆ ಪಲ್ಲವನ ಜಿ
ನಾಲಯಂ ಸರ್ವ್ವತೋಭದ್ರದಿಂದಂ.[14]

ಶಾಲಾರಚನೆಗಳು ಪ್ರಮುಖವಾಗಿ ರಾಜಗೃಹಗಳಿಗಾಗಿ ಎಂದು ವಿವರಿಸಿದ್ದರೂ ಕಾಲಾನಂತರ ಮಾರ್ಪಾಡು ಹೊಂದಿ ಬಹು ಉಪಯೋಗಿ ಎನಿಸಿದವು. ಈ ಮಾರ್ಪಾಡುಗಳೊಂದಿಗೆ ಸಭಾ, ಮಠ ಮುಂತಾಗಿ ಹೆಸರಿಸಲ್ಪಟ್ಟವು. ಮತ್ಸ್ಯಪುರಾಣ, ಮಾನಸೋಲ್ಲಾಸ ಗ್ರಂಥಗಳಲ್ಲಿ ಶಾಲಾರಚನೆಯನ್ನು ಮಾತ್ರ ವಿವರಿಸಿದ್ದು ದೇವಾಲಯಗಳಿಗಾಗಿ ಪ್ರತ್ಯೇಕ ವಿವರಣೆಯಿಲ್ಲ. ಚತುಶ್ಶಾಲಗಳ ವಿವರಣೆಯಲ್ಲಿ "ಶುಭಂ ದೇವ ನೃಪಾಲಯೇ" ಎಂದಿದ್ದು, ದೇವಾಲಯಗಳ ರಚನೆಗೂ ಈ ರಚನೆಯನ್ನು ಬಳಸಿರಲು ಸಾಧ್ಯವಿದೆ. ಮತ್ಸ್ಯಪುರಾಣ ಮತ್ತು ಮಾನಸೋಲ್ಲಾಸ ಗ್ರಂಥಗಳ ವಾಸ್ತು ವಿವರಗಳು ಒಂದೇ ಮೂಲವನ್ನು ಆಶ್ರಯಿಸಿ ಬೆಳೆದ ಗ್ರಂಥಗಳು.

ಚತ್ವಾರೋ ಮಧ್ಯಗಾಸ್ತಂಭಾ ಯತ್ರ ತಸ್ಯಾ ಚತುಷ್ಕಕಂ
ತಸ್ಮಾದ್ ಬಹಿರಲಿಂದಂ ಸ್ಯಾಚ್ಛಾಲಾ ಸ್ಯಾತದನಂತರಂ.[15]

ಮಾನಸೋಲ್ಲಾಸ ಗ್ರಂಥದ ಪ್ರಕಾರ, ಮಧ್ಯೆ ನಾಲ್ಕು ಸ್ತಂಭಗಳಿಂದ ಕೂಡಿದ ಚತುಷ್ಕ, ಅದನ್ನು ಸುತ್ತುವರೆದಂತೆ ಮೊದಲ ಹಂತದಲ್ಲಿ ಅಲಿಂದ, ನಂತರ ಎರಡನೆಯ ಹಂತದ ಶಾಲಾರಚನೆ ; ಇದನ್ನು ಸಮಗ್ರವಾಗಿಯೂ 'ಶಾಲಾ' ಎಂದು ಗುರುತಿಸಿದ್ದಾರೆ.

ಅಲಿಂದಂ ಚ ಪುನಃ ಶಾಲಾ ಕ್ರಮೇಣೈವ ಪ್ರವರ್ಧತೇ[16]

ರಾಜಗೃಹಗಳಿಗೆ ಸಂಬಂಧಿಸಿದಂತೆ, ಚತುಷ್ಕ, ಅಲಿಂದ, ಶಾಲಾ, ಅಲಿಂದ, ಶಾಲಾ–ಹೀಗೆ ಹಂತ ಹಂತವಾಗಿ, ವಿಸ್ತಾರವಾಗಿ ಬೆಳೆಯಲು ಅವಕಾಶ ಕಲ್ಪಿಸಿದ್ದನ್ನು ಕಾಣಬಹುದು. ಅಲಿಂದವು ಚತುಷ್ಕವನ್ನಾವರಿಸಿ ಪ್ರದಕ್ಷಿಣಪಥದಂತೆ ಕಾಣುವುದು ಸಹಜ.

ಗೃಹಮೇಕಂ ತು ಯಚ್ಛನ್ನಂ ಸರ್ವಂ ಶಾಲೇತಿ ಸಾ ಸ್ಮೃತಾ[17]

ಶಾಲಾಪದವನ್ನು ಸಮರಾಂಗಣ ಸೂತ್ರಧಾರ ಗ್ರಂಥವು ವಿವರಿಸಿದ್ದು, ಮೇಲ್ಛಾವಣಿಯೊಡನೆ ನಿಂತ ವಾಸ್ತುರಚನೆಯನ್ನು ಶಾಲಾ ಎಂದು ಗುರುತಿಸುತ್ತದೆ. ಶಾಲಾ ಪದವು ಒಟ್ಟಾರೆ ಒಂದು ವಾಸ್ತುಸಮುಚ್ಚಯಕ್ಕೆ ಅಥವಾ ಒಂದು ಭಾಗಕ್ಕೆ ಗುರುತಿಸಲ್ಪಡುತ್ತದೆ. ಪ್ರಸ್ತುತ ಗುರುತಿಸಲ್ಪಟ್ಟ ಶಾಲಾರಚನೆಗೂ ವಿಮಾನರಚನೆಯಲ್ಲಿ ಗುರುತಿಸಬಹುದಾದ ಶಾಲಾ, ಭದ್ರಶಾಲಾ ರಚನೆಗಳಿಗೂ ಯಾವುದೇ ಸಾಮ್ಯವಿಲ್ಲವೆಂದು ಗಮನಿಸಬಹುದು. ಆದ್ದರಿಂದ ಶಾಲಾ ಪದದ ಅರ್ಥವನ್ನು ಸಂದರ್ಭೋಚಿತವಾಗಿ ತಿಳಿಯಬೇಕು. ಶಾಲಾ ಹಾಗೂ ಮಂಟಪಗಳ ರಚನೆಯಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲವೆಂದೆನಿಸುತ್ತದೆ. ಮೇಲ್ಭಾಗದಿಂದ ಮುಚ್ಚಲ್ಪಟ್ಟಿದ್ದು 'ಶಾಲಾ' ಎಂದೂ ಹಲವು ಸ್ತಂಭಗಳಿಂದ ಕೂಡಿದ್ದು 'ಮಂಟಪ' ಎಂದೂ ಅರ್ಥೈಸಬಹುದು. ಮೂಲತಃ ಇವು ತೆರೆದ ರಚನೆಗಳಾಗಿದ್ದು, ತದನಂತರದ ಕಾಲದಲ್ಲಿ ಕಕ್ಷಾಸನ, ಜಾಲಂಧ್ರ, ಭಿತ್ತಿ ಇತ್ಯಾದಿಗಳನ್ನು ಅಳವಡಿಸಿಕೊಂಡಿವೆ.

ಶಾಲಾ ವಿವರಣೆಯೊಂದಿಗೆ ಗರ್ಭಗೃಹದ ವಿವರಣೆಯನ್ನೂ ಗಮನಿಸಬಹುದು. ಮೂಲಬೇರವನ್ನೊಳಗೊಂಡ ದೇವಾಲಯದ ಭಾಗವನ್ನು ಗರ್ಭಗೃಹವೆಂದು ಗುರುತಿಸುವುದು ವಾಡಿಕೆಯಲ್ಲಿದೆ. ಸಾಮಾನ್ಯವಾಗಿ ಗರ್ಭಗೃಹವು ಹಿಂದಕ್ಕಿದ್ದು ಪ್ರತ್ಯೇಕವಾಗಿ ಗುರುತಿಸಲ್ಪ

---

14. ಸೀತಾರಾಮ ಜಾಗೀರ್‌ದಾರ್ : 'ಶಾಸನದಲ್ಲಿ ಇನ್ನೊಂದು ಪಟ್ಟದ', ಕನ್ನಡನುಡಿ, ಸಂಪುಟ ೫೧, ಸಂಚಿಕೆ ೭-೮, ೧೯೮೮, ಪು. ೧೩-೧೪ (ನೆರವು : ಶ್ರೀ ಬಿ. ರಾಜಶೇಖರಪ್ಪ)
15. ಜಿ. ಕೆ. ಶ್ರೀಗೊಂಡೇಕರ್ (ಸಂ.): ಮಾನಸೋಲ್ಲಾಸ, ಸಂ. ೨, ಬರೋಡಾ, ೧೯೩೯, ಪು. ೪, ಶ್ಲೋಕ ೩೧
16. ಅದೇ, ಶ್ಲೋಕ ೩೨
17. ವಿ. ಎಸ್. ಅಗರ್‌ವಾಲಾ (ಸಂ.) : ಸಮರಾಂಗಣ ಸೂತ್ರಧಾರ, ಬರೋಡಾ, ೧೯೬೬, ಪು. ೯೦, ಅಧ್ಯಾಯ ೧೮, ಶ್ಲೋಕ ೧೯

ಡುತ್ತದೆ. ಶಾಲಾರಚನೆಯಲ್ಲಿ ಮಧ್ಯದ ನಾಲ್ಕು ಸ್ತಂಭಗಳ ಚತುಷ್ಕವು ಗರ್ಭಗೃಹವೆಂದೂ ಗುರುತಿಸಲ್ಪಡುತ್ತದೆ:

ಶಾಲಾನಾಂ ಯತ್ ಪುನರ್‌ಮಧ್ಯಂ ವಾಪಿ
ಪುಷ್ಕರಿಣೀ ಚ ಸಾ
ಸಚ್ಛನ್ನಾಪಿ ಯಸ್ಯ ಸ್ಯಾತ್ ತದ್ ಗರ್ಭಗೃಹ
ಮುಚ್ಯತೇ[18]

ಹಿಂದಿನಕಾಲದ ಮನೆಗಳ ರಚನೆಯಲ್ಲಿ ಮಧ್ಯೆ ಬಾವಿಯಿದ್ದು ಸುತ್ತ ಪಡಸಾಲೆಯಂಥ ರಚನೆಗಳನ್ನು ನಿರ್ಮಿಸುತ್ತಿದ್ದರು. ಅದೇ ರೀತಿ ದೇವಾಲಯಗಳಲ್ಲೂ ಪುಷ್ಕರಿಣಿಗಳಿದ್ದು ಸುತ್ತ ಪಡಸಾಲೆಯಂಥ ಶಾಲಾರಚನೆಗಳನ್ನು ಈಗಲೂ ಕಾಣಬಹುದು. ಸುತ್ತ ಶಾಲೆಯಿದ್ದು ಮಧ್ಯೆ ಮೇಲ್ಛಾವಣಿಯಿಂದ ಹೊದ್ದಿಸಿದ್ದಲ್ಲಿ ಅದು ಗರ್ಭಗೃಹವೆನಿಸುತ್ತದೆ. ಸಂಸ್ಕೃತದ 'ಪಟ್ಟಶಾಲಾ' ರಚನೆಯೇ ಕನ್ನಡದ ಪಡಸಾಲೆ ಎನಿಸುತ್ತದೆ. ಇದೇರೀತಿ 'ಮುಖಶಾಲಾ' ರಚನೆಯು ಮೊಗಸಾಲೆ ಎನಿಸಿದೆ.

ಯತ್ ಶಾಲಾಲಿಂದಯೋಃ ಶೇಷಂ ಗರ್ಭಗೃಹಂ
ಹಿ ತತ್[19]

ಶಾಲಾ ಸಮುಚ್ಚಯವು ಚತುಷ್ಕ, ಅಲಿಂದ, ಶಾಲಾ ಇತ್ಯಾದಿ ರಚನೆಗಳಿಂದ ಕೂಡಿದ್ದೆಂದು ತಿಳಿದೆವಷ್ಟೆ. ಆದ್ದರಿಂದ ಶಾಲಾ, ಅಲಿಂದಗಳನ್ನುಳಿದು ಚತುಷ್ಕವೇ ಗರ್ಭಗೃಹವೆನಿಸುತ್ತದೆ.

ಮೇಲ್ಕಂಡ ವಿವರಣೆಗಳೊಡನೆ ಲಾಡ್‌ಖಾನ್ ರಚನೆಯನ್ನು ಪರಿಶೀಲಿಸಬಹುದು. ಮಧ್ಯೆ ನಾಲ್ಕು ಸ್ತಂಭಗಳ ಚತುಷ್ಕವು ಗರ್ಭಗೃಹ. ಸುತ್ತ ಅಲಿಂದ ಮತ್ತು ಶಾಲಾರಚನೆಯಿದೆ. ಇದು ಸಾರ್ವಜನಿಕ ಉಪಯೋಗಕ್ಕಾಗಿ ನಿರ್ಮಿಸಿದ ವಾಸ್ತುರಚನೆ. ತದನಂತರ ಕಾಲದಲ್ಲಿ ಶಿವಾಲಯವಾಗಿ ಮಾರ್ಪಡಿಸುವ ಸಲುವಾಗಿ ಹಿಂಬದಿಯ ಗೋಡೆಗೆ ಹೊಂದಿಕೊಂಡಂತೆ ಮತ್ತೊಂದು ಗರ್ಭಗೃಹವನ್ನು ನಿರ್ಮಿಸಿದರು. ಇವರಿಗೆ ಮಧ್ಯದ ಚತುಷ್ಕವನ್ನೇ ಗರ್ಭಗೃಹವಾಗಿ ಭಿತ್ತಿಗಳನ್ನು ನಿರ್ಮಿಸಿ ಮಾರ್ಪಡಿಸಲಾಗಲಿಲ್ಲವೆನ್ನಬಹುದು. ಬಹುಶಃ ಬೃಹತ್ತಾದ ಸ್ತಂಭಗಳು ಅಡ್ಡಿ ಎನಿಸಿರಬಹುದು.

ವಿಶ್ವಕರ್ಮಪ್ರಕಾಶ ಗ್ರಂಥವು ದ್ವಾರವಿಲ್ಲದ ಶಾಲಾರಚನೆಯನ್ನು ನಿಷೇಧಿಸಿದೆ :

ಯತ್ರಾಲಿಂದಂ ತತ್ರಶಾಲಾ ತತ್ರದ್ವಾರಂ ಚ
ಶೋಭನಂ
ಶಾಲಾಲಿಂದ ದ್ವಾರಹೀನಂ ನಕಾರಯೇತ್
ಬುಧಃ[20]

ಶಾಲಾ, ಅಲಿಂದ, ದ್ವಾರಗಳ ಸಾಮಾನ್ಯ ರಚನೆಯಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲವೆಂದು ಶಾಸ್ತ್ರಗಳು ಗುರುತಿಸುತ್ತವೆ:

ಕೇಚಿದಲಿಂದಕಂ ದ್ವಾರಂ ಪ್ರವದಂತಿ ಮನೀಷಿಣಃ
ಕೇಚಿದಲಿಂದಂ ಶಾಲಾಂ ಚ ಕೇಚಿಚ್ಛಾಲಾಲಿಂದಕಂ
ಚ ತತ್[21]

ಶಾಲಾರಚನೆಯಲ್ಲಿ ಶುದ್ಧ, ಸಂಬದ್ಧ, ಸಂಯುತ, ಪರಿಭ್ರಮ ಎಂದು ನಾಲ್ಕು ಪ್ರಭೇದಗಳು :

ಶುದ್ಧಾ ಚ ಕೇವಲಾ ಶಾಲಾ ಸಂಬದ್ಧಾಲಿಂದ
ತಸ್ತಥಾ
ಶಾಲಶ್ರೇಣ್ಯಾ ಸಂಯುತಾ ಸ್ಯಾತ್ ಮಧ್ಯಾ
ಲಿಂದಾ ಪರಿಭ್ರಮಾ[22]

ಶುದ್ಧ ಎಂದಲ್ಲಿ ಶಾಲಾ ಅಥವಾ ಚತುಷ್ಕ ಮಾತ್ರ. ಈ ಸ್ವರೂಪವನ್ನು ಅಲಿಂದವಿಲ್ಲದ್ದು ಎಂದು ಅರ್ಥೈಸಬಹುದು. ಕೇವಲ ನಾಲ್ಕು ಸ್ತಂಭಗಳಿಂದ ಕೂಡಿದ ಗರ್ಭಗೃಹ ಮಾತ್ರವೆನ್ನಬಹುದು.

---

18. ಅದೇ, ಶ್ಲೋಕ ೨೦
19. ಅದೇ, ಪು. ೯೬, ಅಧ್ಯಾಯ ೮೯, ಶ್ಲೋಕ ೨೭
20. ಮಾನಸೋಲ್ಲಾಸ, ಉಪೋದ್ಘಾತ, ಪು. ೬, ಅಡಿಟಿಪ್ಪಣಿ, ಶ್ಲೋಕ ೨೪೩
21. ಅದೇ, ಶ್ಲೋಕ ೨೩೮-೨೩೯
22. ಪಿ. ಎ. ಮಂಕಡ್ (ಸಂ.) : ಅಪರಾಜಿತಪೃಚ್ಛಾ, ಬರೋಡಾ, ೧೯೫೦, ಪು. ೨೫೨, ಅಧ್ಯಾಯ ೧೦೦, ಶ್ಲೋಕ ೨

ಸರ್ವಶ್ಚಾಲಿಂದ ರಹಿತಾಃ ಶುದ್ಧಾ ನಾಮ್ನಾ
ಸಮೀರಿತಾಃ[23]

ಈ ರಚನೆಯನ್ನು ಮಾನಸೋಲ್ಲಾಸ ಗ್ರಂಥವು "ಧ್ರುವಂ ಹೀನಮಾಲಿಂದೇನ" ಎಂದು ಗುರುತಿಸುತ್ತದೆ. ಈ ರಚನೆ ನಾಲ್ಕು ಸ್ತಂಭಗಳಿಂದ ಕೂಡಿದ ಮಂಟಪವೂ ಹೌದು. ಮಹಾಕೂಟದಲ್ಲಿರುವ ಪುಷ್ಕರಿಣಿಯೊಳಗಿರುವ ಮಂಟಪವನ್ನು ಧ್ರುವ ಅಥವಾ ಶುದ್ಧ ಶಾಲಾಗೃಹ ಎಂದು ಗುರುತಿಸಬಹುದು. ಮಾನಸೋಲ್ಲಾಸಗ್ರಂಥವು ಒಂದು ದಿಕ್ಕಿನಲ್ಲಿ ಮಾತ್ರ ಅಲಿಂದವಿರುವ ನಾಲ್ಕು ಪ್ರಭೇದಗಳನ್ನು ಗುರುತಿಸುತ್ತದೆ:

ಧ್ರುವಂ ಹೀನಮಾಲಿಂದೇನ ಪೂರ್ವಾಲಿಂದಂ
ತು ಧಾನ್ಯಕಂ
ಜಯಂ ಸ್ಯಾತ್ ದಕ್ಷಿಣಾಲಿಂದಂ ಪಶ್ಚಾದಲಿಂದಂ
ಖರಂಭವೇತ್
ದುರ್ಮುಖಂ ಚೋತ್ತರಾಲಿಂದಮೇಕಾಲಿಂದಂ
ಚತುರ್ಗೃಹಂ[24]

ಸಾಂಚಿಯ ಹದಿನೇಳನೇ ಸಂಖ್ಯೆಯ ದೇವಾಲಯವನ್ನಾಗಲಿ, ತಿಗುವಾದಲ್ಲಿಯ ದೇವಾಲಯವನ್ನಾಗಲಿ ಏಕಾಲಿಂದ ರಚನೆ ಎಂದು ಗುರುತಿಸಬಹುದು. ಐಹೊಳೆ, ಬಾದಾಮಿ, ಪಟ್ಟದಕಲ್ಲು ಮುಂತಾದ ಎಡೆಗಳಲ್ಲಿ ಕನಿಷ್ಠ ರಚನೆಗಳೆಂದಲ್ಲಿ ಗರ್ಭಗೃಹ ಹಾಗೂ ನಾಲ್ಕು ಸ್ತಂಭಗಳ ಮುಖಮಂಟಪ ಮಾತ್ರ. ಮಧ್ಯದಲ್ಲಿ ಚತುಷ್ಕ, ಸುತ್ತ ಅಲಿಂದ, ಒಂದೆಡೆ ದ್ವಾರ ಅಥವಾ ಶಾಲಾ, ಈ ರಚನೆಯನ್ನು ಏಕಶಾಲಾ ರಚನೆಯೆಂದು ಗಮನಿಸಬಹುದು. ಈ ರಚನೆ ವಿಸ್ತಾರಗೊಂಡಾಗ ಅನುಕೂಲಕ್ಕೆ ತಕ್ಕಂತೆ ಸಭಾ ಎಂದು ಗುರುತಿಸಲ್ಪಟ್ಟಿದೆ.

ಐಹೊಳೆಯ ಒಂಬತ್ತನೇ ಸಂಖ್ಯೆಯ ದೇವಾಲಯವನ್ನು ಗಮನಿಸಿದಾಗ ಈ ರಚನೆಯಲ್ಲಿ ಒಂದೆಡೆ ಗರ್ಭಗೃಹ, ನಂತರ ಮಂಟಪ, ಮುಂಗಡೆ ಮುಖಮಂಟಪವಿದೆ. ತಳಪಾಯದ ನಕ್ಷೆಯಿಂದ ಗಮನಿಸಿದಾಗ ಮಧ್ಯೆ ನಾಲ್ಕು ಸ್ತಂಭಗಳ ಚತುಷ್ಕ, ಸುತ್ತ ಅಲಿಂದ, ನಂತರ ಇಕ್ಕೆಲಗಳಲ್ಲಿ ಶಾಲಾರಚನೆಯಿದ್ದು, ಒಂದು ಗರ್ಭಗೃಹವೆನ್ನಿಸಿದ್ದು ಮತ್ತೊಂದು ಮುಖಮಂಟಪವೆನ್ನಿಸಿದೆ. ಇದು ದ್ವಿಶಾಲಾ ರಚನೆಯ ಉದಾಹರಣೆಯೂ ಹೌದು. ಈ ರಚನೆ ದೇವಾಲಯಗಳ ವಿಕಾಸವನ್ನು ಗುರುತಿಸುವಲ್ಲಿ ಗಮನಾರ್ಹವಾದುದು.

ಈವರೆಗೆ ಗಮನಿಸಿದ ವಾಸ್ತುರಚನೆಗಳನ್ನು ಹಂತ ಹಂತವಾಗಿ ಒಂದೆಡೆ ಕೆಳಕಂಡಂತೆ ಗುರುತಿಸಬಹುದು:

೧. ಚತುಷ್ಕ ಅಥವಾ ಮಂಟಪ ರಚನೆ : ಮಹಾಕೂಟದಲ್ಲಿಯ ಪುಷ್ಕರಿಣಿಯೊಳಗಿನ ಮಂಟಪ.

೨. ಏಕಾಲಿಂದ ರಚನೆ : ಸಾಂಚಿಯ ಹದಿನೇಳನೆಯ ದೇವಾಲಯ ಮತ್ತು ತಿಗುವಾದಲ್ಲಿಯ ದೇವಾಲಯ. ಐಹೊಳೆ, ಬಾದಾಮಿಗಳಲ್ಲಿ ಕಂಡುಬರುವ ದೇವಾಲಯ ರಚನೆಗಳು ಕೊಂಚ ಮುಂದುವರೆದದ್ದು.

೩. ಏಕಶಾಲಾ ರಚನೆ : ಉದಾಹರಣೆಗಳನ್ನು ಗುರುತಿಸಬೇಕಾಗಿದೆ. ಮಧ್ಯೆ ಚತುಷ್ಕ, ಸುತ್ತ ಅಲಿಂದ, ಒಂದೆಡೆ ಶಾಲಾ ಅಥವಾ ಮುಖಮಂಟಪ.

೪. ದ್ವಿಶಾಲಾ ರಚನೆ : ಐಹೊಳೆಯ ಒಂಬತ್ತನೆಯ ದೇವಾಲಯ.

ಸಾಂಚಿಯ ದೇವಾಲಯ ಹಾಗೂ ತಿಗುವಾದಲ್ಲಿಯ ದೇವಾಲಯಗಳು ಕ್ರಿಸ್ತಶಕದ ರಚನೆಗಳಾದರೂ, ಈ ರಚನೆಗಳಿಗಿಂತ ಹಿಂದೆ ಕೆಲವಾರು ಶತಮಾನಗಳ ಪೂರ್ವದಲ್ಲಿ ಕಟ್ಟಡಗಳು ಖಚಿತ ಆಕಾರ ತಳೆದಿದ್ದವು ಎಂದು ಗುರುತಿಸಲು ಸಾಧ್ಯವಿದೆ. ಭರತನ ನಾಟ್ಯಶಾಸ್ತ್ರದಲ್ಲಿ ನಾಟ್ಯಗೃಹದ ರಚನೆಯನ್ನು ವಿವರಿಸುತ್ತಾ, ಮತ್ತವಾರಣ ರಚನೆ, ರಂಗಶೀರ್ಷದ ರಚನೆಯಲ್ಲಿ ಷಡ್ದಾರುಕಗಳ ಜೋಡಣೆಗಳು ಉಲ್ಲೇಖಿಸಲ್ಪಟ್ಟಿದೆ.[25] ಇವು ಭರತನ ನಾಟ್ಯಶಾಸ್ತ್ರದ ಕಾಲಕ್ಕೆ ಖಚಿತಗೊಂಡ ವಾಸ್ತುವಿನ್ಯಾಸಗಳು. ಇಲ್ಲಿ ವಿವರಿಸಲ್ಪಟ್ಟಿರುವ ನಾಟ್ಯಗೃಹದ

23. ಅದೇ, ಶ್ಲೋಕ ೩
24. ಮಾನಸೋಲ್ಲಾಸ, ಪು. ೬, ಶ್ಲೋಕ ೬೦-೬೧
25. ಕೆ. ಎಲ್. ನರಸಿಂಹಶಾಸ್ತ್ರಿ (ಅನು.) : ನಾಟ್ಯಶಾಸ್ತ್ರ, ಬೆಂಗಳೂರು, ೧೯೬೬, ಪು. ೨೬, ಅಧ್ಯಾಯ ೨, ಶ್ಲೋಕ ೯-೧೦, ಪು. ೩೯-೪೦, ಶ್ಲೋಕ ೬೮-೭೩

ಅಥವಾ ನಾಟ್ಯಮಂಟಪದ ಅಳತೆಗಳನ್ನು ಸಮರಾಂಗಣ ಸೂತ್ರಧಾರ ಗ್ರಂಥದ ಕರ್ತೃವೂ ಸಂಕ್ಷಿಪ್ತವಾಗಿ ಸೂಚಿಸಿದ್ದಾನೆ.

ಗರ್ಭಗೃಹವನ್ನು ಮಧ್ಯಭಾಗದಲ್ಲಿ ಗುರುತಿಸುವುದರೊಂದಿಗೆ ಮೇಲ್ಭಾಗದಲ್ಲಿ ಭೂಮಿರಚನೆಯೂ ಕಾಣಿಸಿದ್ದು ಹರ್ಮ್ಯ ಎಂದೆನಿಸಿತು:

ಗೃಹಸ್ಯೋಪರಿ ಭೂಮಿರ್ಯಾ ಹರ್ಮ್ಯ ತತ್
ಪರಿಕೀರ್ತತಂ[26]

ಲಾಡ್‌ಖಾನ್ ದೇವಾಲಯದ ಮೇಲ್ಭಾಗದ ಕೋಷ್ಠರಚನೆಯನ್ನು ಉಪಸ್ಥಾನಕ ಅಥವಾ ಅಪವರಕಾ ಎಂದು ಗುರುತಿಸಬಹುದು:

ಯದುಪಸ್ಥಾನಕಂ ನಾಮಯೇ ಚಾಪವರಕಾ
ಸ್ತಥಾ
ತೇ ಕೋಷ್ಠಕಾ ಕಂಠಾ ಕುಡ್ಯಂ ಭಿತ್ತಿಶ್ಚಯಶ್ಚಸಾ[27]

ಗರ್ಭಗೃಹವನ್ನು ಮಧ್ಯೆ ಗುರುತಿಸುವುದರೊಂದಿಗೆ ಸುತ್ತಲಿರುವ ಅಂಕಣಗಳಲ್ಲಿ ಪರಿವಾರದೇವತೆಗಳನ್ನು ಇರಿಸುವ ಕಲ್ಪನೆ ಗುಪ್ತರ ಕಾಲದಲ್ಲಿ ಮೂಡಿಬಂತು ಎಂದು ವಿದ್ವಾಂಸರು ವಿವರಿಸುತ್ತಾರೆ. ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತಪೃಚ್ಛಾ ಗ್ರಂಥಗಳಲ್ಲಿ 'ಸಭಾಷ್ಟಕ'ವೆನ್ನುವ ಪ್ರತ್ಯೇಕ ಅಧ್ಯಾಯಗಳಿವೆ. ಸಭಾ ಎಂದಲ್ಲಿ ಸಾರ್ವಜನಿಕ ಸಮಾರಂಭಗಳಿಗಾಗಿ ರಚಿಸಲ್ಪಟ್ಟಿದ್ದು ಎಂಬ ಧ್ವನಿ ಇದೆ. ಡಾ॥ ಎಂ. ಚಿದಾನಂದ ಮೂರ್ತಿಯವರು, ಪ್ರಾಚೀನ ಅಗ್ರಹಾರಗಳಲ್ಲಿ ಮಹಾಜನರು ಸೇರಲು ಪ್ರತ್ಯೇಕ 'ಸಭೆ'ಗಳು ಇದ್ದವು ಎಂದು ಗುರುತಿಸಿದ್ದಾರೆ.[28] ಪ್ರಸ್ತುತ ವಿವರಿಸಲ್ಪಡುವ ಸಭಾ ಪದವೂ ವಾಸ್ತುರಚನೆಗೆ ಸಂಬಂಧಿಸಿದ್ದೆಂದು ಗಮನಿಸಬಹುದು.

ಛನ್ನಂ ಭವೇತ್ ಯತ್ತು ಮಹಾಜನಸ್ಯ ಸ್ಥಾನಂ
ಸಭಾ ಸಾ ಕಥಿತಾ ಚ ಶಾಲಾ[29]

ಸಮರಾಂಗಣ ಸೂತ್ರಧಾರ ಗ್ರಂಥದ ಪ್ರಕಾರ, ಮಹಾಜನರು ಸಮಾವೇಶಗೊಳ್ಳುವ ಸ್ಥಾನ ಸಭಾ. ಸಭಾ ಎನ್ನುವುದು ಶಾಲಾರಚನೆಯ ವಿಶಿಷ್ಟ ರೂಪ. ಈಗ ಬಳಕೆಯಲ್ಲಿರುವ ಸಭಾ ಎನ್ನುವ ಪದ ವಾಸ್ತುಮೂಲದ್ದೆಂದೂ ಗುರುತಿಸಬಹುದು. ಕೆಳಕಂಡ ವಿವರಣೆಯು ಸಭಾರಚನೆಯ ಸ್ವರೂಪವನ್ನು ಗುರುತಿಸುತ್ತದೆ:

ಚತುರಶ್ರೀ ಕೃತೇ ಕ್ಷೇತ್ರೇ ದ್ವಿರಷ್ಟಪದ ಭಾಜಿತೆ
ಮಧ್ಯಮ ಪದ ಚತುಷ್ಕೇಣ ಚತುಷ್ಕೋಲಿಂದ
ಶೇಷತ ಃ
ನಂದಾ ನಾಮ ಸಮಾಖ್ಯಾತಾ ಸರ್ವಕಾಮ
ಫಲಪ್ರದಾ
ಚತುಷ್ಕೋ ಭದ್ರ ವಿಸ್ತಾರ ಏಕೋ ಭಾಗಶ್ಚ
ನಿರ್ಗಮಃ[30]

ಅಪರಾಜಿತಪೃಚ್ಛಾ ಗ್ರಂಥದ ಪ್ರಕಾರ, ಚತುರಶ್ರಾಕಾರದ ಕ್ಷೇತ್ರವನ್ನು ಹದಿನಾರು ಭಾಗಗಳಾಗಿ ವಿಂಗಡಿಸಿ ಮಧ್ಯದಲ್ಲಿ ಚತುಷ್ಕವನ್ನು ಗುರುತಿಸಬೇಕು. ತದನಂತರ ಉಳಿದ ಭಾಗವು ಅಲಿಂದವೆನಿಸುತ್ತದೆ. ಇದರೊಂದಿಗೆ ಚತುಷ್ಕದಷ್ಟೇ ವಿಸ್ತಾರವುಳ್ಳ ಒಂದು ಭಾಗದಷ್ಟು ನಿರ್ಗಮನ ಅಥವಾ ಮುಖಮಂಟಪವನ್ನು ನಿರ್ಮಿಸಬೇಕು. ಈ ರಚನೆಯು ನಂದಾ ಎಂಬ ಪ್ರಭೇದವೆನಿಸುತ್ತದೆ. ಸಮರಾಂಗಣ ಸೂತ್ರಧಾರ ಗ್ರಂಥವು ನಾಲ್ಕುದಿಕ್ಕುಗಳಲ್ಲಿಯೂ ಪ್ರಾಗ್ರೀವವನ್ನು ರಚಿಸಬೇಕೆಂದು ನಿರ್ದೇಶಿಸುತ್ತದೆ:

ಪ್ರಾಗ್ರೀವಾಖ್ಯಾ ಸ್ತೃತೀಯಶ್ಚ ಬಹಿಃಕ್ಷೇತ್ರಾ
ಚತುರ್ದಿಶಾ[31]

---

26. ಸಮರಾಂಗಣ ಸೂತ್ರಧಾರ, ಪು. ೮೯, ಅಧ್ಯಾಯ ೧೮, ಶ್ಲೋಕ ೧೦
27. ಅದೇ, ಪು. ೯೧, ಶ್ಲೋಕ ೨೬
28. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೧೩
29. ಸಮರಾಂಗಣ ಸೂತ್ರಧಾರ, ಪು. ೯೩, ಅಧ್ಯಾಯ ೧೮, ಶ್ಲೋಕ ೫೮
30. ಅಪರಾಜಿತಪೃಚ್ಛಾ, ಪು. ೧೯೨, ಅಧ್ಯಾಯ ೭೭, ಶ್ಲೋಕ ೨-೩
31. ಸಮರಾಂಗಣ ಸೂತ್ರಧಾರ, ಪು. ೧೫೩, ಅಧ್ಯಾಯ ೨೭, ಶ್ಲೋಕ ೩

ಪ್ರಾಗ್ರೀವವೆಂದಲ್ಲಿ ಪ್ರಾಸಾದಗಳ ಮುಂಭಾಗದಲ್ಲಿ ರಚಿಸಲ್ಪಟ್ಟ ಎರಡು ಸ್ತಂಭಗಳನ್ನಾಧರಿಸಿದ ಮುಖ ಮಂಟಪ:

ಪ್ರಾಸಾದಾಗ್ರೇ ತು ದ್ವೌ ಸ್ತಂಭೌ ಪ್ರಾಗ್ರೀವಃ
ಪ್ರಕೀರ್ತಿತಃ[32]

ಗರ್ಭಗೃಹ ಅಥವಾ ಚತುಷ್ಕ, ಅಲಿಂದ, ಪ್ರಾಗ್ರೀವ ಅಥವಾ ಮುಖಮಂಟಪ–ಇವು ಸಭಾ ರಚನೆಯ ಅಂಗಗಳೆನಿಸಿವೆ. ಸಭಾರಚನೆಯಲ್ಲಿ ಎಂಟು ಪ್ರಭೇದಗಳಿದ್ದು, ಅಂಕಣಗಳ ಹಾಗೂ ಸ್ತಂಭಗಳ ಸಂಖ್ಯೆಯಿಂದ ಈ ಪ್ರಭೇದಗಳು ಗುರುತಿಸಲ್ಪಟ್ಟಿವೆ :

ಚತುರಶ್ರ ಸಮಂಕ್ಷೇತ್ರಂ ವಿಭಕ್ತಂ ನವಾಂಶಕೈಃ
ಕೇವಲಾ ನವಶಾಲಾಶ್ಚ ದಿವ್ಯಾ ನಾಮಪಿ
ಸುಂದರೀ[33]

ಕ್ಷೇತ್ರದಲ್ಲಿ ಒಂಬತ್ತು ಅಂಕಣಗಳನ್ನು ಗುರುತಿಸಿ ಮಧ್ಯೆ ಚತುಷ್ಕವನ್ನು ಗುರುತಿಸಿದಲ್ಲಿ ಸುತ್ತ ಅಲಿಂದ ರಚನೆ ಏರ್ಪಡುತ್ತದೆ. ಈ ರಚನೆಯಲ್ಲಿ ಹದಿನಾರು ಸ್ತಂಭಗಳನ್ನು ಗುರುತಿಸಬಹುದು. ಮುಂಗಡೆ ಮುಖ ಮಂಟಪದೊಂದಿಗೆ ಏಕಶಾಲಾ ರಚನೆಯೆನಿಸುತ್ತದೆ. ಇದು ಸಭಾರಚನೆಯ ಅತಿ ಸಾಮಾನ್ಯ ರಚನೆಯೂ ಹೌದು. ಹದಿನಾರು ಅಂಕಣಗಳ ರಚನೆಯಲ್ಲಿ ಸಭಾ ಗೃಹವು ಇಪ್ಪತ್ತೈದು ಸ್ತಂಭಗಳಿಂದ ರಚಿಸಬೇಕು. ಮಧ್ಯದ ಒಂದು ಸ್ತಂಭವನ್ನು ಕಳಚಿದಲ್ಲಿ ವಿಶಾಲವಾದ ಚತುಷ್ಕವನ್ನೂ ಸುತ್ತ ಅಲಿಂದ ರಚನೆಯನ್ನೂ ಗುರುತಿಸ ಬಹುದು.

ಮೂವತ್ತಾರು ಸ್ತಂಭಗಳ ರಚನೆಯಿಂದ ಇಪ್ಪತ್ತೈದು ಅಂಕಣಗಳುಳ್ಳ ರಚನೆ ಸಾಧ್ಯವಿದೆ. ಈ ರಚನೆಯಲ್ಲಿ ಮಧ್ಯಭಾಗದಲ್ಲಿ ಚತುಷ್ಕವೂ ಎರಡು ಹಂತಗಳ ಅಲಿಂದವೂ ಸಾಧ್ಯವಿದೆ:

ಸ್ತಂಭಾನ್ ಷಟ್ತ್ರಿಂಶದೇತಾಸು ಪಂಚಸ್ವಪಿ
ನಿವೇಶಯೇತ್
ಸ್ತಂಭಾನ್ ಪ್ರಾಗ್ರೀವ ಸಂಬದ್ಧಾನ್ ಪೃಥಗೇಭ್ಯೋ
ವಿನಿರ್ದಿಶೇತ್[34]

ಪ್ರಾಗ್ರೀವವೆಂದಲ್ಲಿ ಎರಡು ಸ್ತಂಭಗಳಿಂದ ಕೂಡಿದ್ದು, ಲಾಡ್‌ಖಾನ್ ದೇವಾಲಯದಲ್ಲಿ ಮುಖ ಮಂಟಪವು ಹನ್ನೆರಡು ಸ್ತಂಭಗಳಿಂದ ಕೂಡಿದ್ದು, ಪ್ರಾಗ್ರೀವಾದಿ ಪ್ರಭೇದಗಳಲ್ಲಿ ವಿವರಿಸಲ್ಪಡುವ ಪ್ರಪ್ಪಕವೆನಿಸಿದೆ.

ಲಾಡ್‌ಖಾನ್ ರಚನೆಯ ಹೊರಾಂಗಣದ ಭಿತ್ತಿಗೆ ಬದಲಾಗಿ ಸ್ತಂಭಗಳನ್ನು ನಿಯತವಾಗಿ ನಿರ್ಮಿಸಿದ್ದಲ್ಲಿ ಗೌಡರಗುಡಿಯ ಪಾರ್ಶ್ವ ರಚನೆಯಂತೆ ಆರು ಸ್ತಂಭಗಳ ಸಾಲನ್ನು ರಚಿಸಬೇಕಾಗಿತ್ತು. ಆದರೆ ಜಾಲಂಧ್ರಗಳ ಜೋಡಣೆಗೆ ಇಕ್ಕೆಲಗಳಲ್ಲಿ ನಾಲ್ಕು ಸ್ತಂಭಗಳಿದ್ದು ಮೂಲೆಗಳಲ್ಲಿ ಭಿತ್ತಿರಚನೆಯಿದೆ. ಸಮರಾಂಗಣ ಸೂತ್ರಧಾರ ಗ್ರಂಥವು ಸಭಾರಚನೆಯು ವಿಶಾಲವಾದಂತೆ ಮೂಲೆಗಳಲ್ಲಿ ರಚನೆಯನ್ನು ಸೂಚಿಸಿದ್ದು, ಕರ್ಣಭಿತ್ತಿ ಎಂದು ಗುರುತಿಸಲ್ಪಟ್ಟಿದೆ :

ಷಡ್ಭಾಗ ಭಾಜಿತೇ ಕ್ಷೇತ್ರೇ ಕರ್ಣಭಿತ್ತಿಂ ನಿವೇಶ
ಯೇತ್[35]

ಕರ್ಣಭಿತ್ತಿಯೊಂದಿಗೆ ಕೂಟಸ್ತಂಭ ಅಥವಾ ಕುಡ್ಯ ಸ್ತಂಭ ರಚನೆಗಳನ್ನೂ ಕಾಣಬಹುದು. ಸ್ತಂಭಗಳು ಸಾಲಭಂಜಿಕೆಗಳಿಂದ ಅಥವಾ ಪ್ರತಿಮೆಗಳಿಂದ ಕೂಡಿರುವಂತೆ ರಚಿಸಬಹುದು. ಛಾದ್ಯದ ನಂತರ ಘಂಟಾಕೂಟ ರಚನೆಗಳನ್ನೂ ಶಾಸ್ತ್ರಗಳು ಸಮ್ಮತಿಸಿವೆ :

ಶಾಲಭಂಜ್ಯಾದಿ ಪ್ರತಿಮಾ ಸ್ತಂಭ ವಿಮಾನ
ಸಂಭವಾಃ
ಮುಕ್ತಾಲೂಮಾ ಛಾದ್ಯೋಪರಿ ಘಂಟಾಕೂಟೈರ
ಲಂಕೃತಾಃ[36]

---

32. ಅಪರಾಜಿತಪೃಚ್ಛಾ, ಪು. ೪೮೪, ಅಧ್ಯಾಯ ೧೮೮, ಶ್ಲೋಕ ೫
33. ಅದೇ, ಪು, ೧೯೨, ಅಧ್ಯಾಯ ೭೭, ಶ್ಲೋಕ ೬
34. ಸಮರಾಂಗಣ ಸೂತ್ರಧಾರ, ಪು. ೧೫೩, ಅಧ್ಯಾಯ ೨೭, ಶ್ಲೋಕ ೬
35. ಅದೇ, ಶ್ಲೋಕ ೫
36. ಅಪರಾಜಿತಪೃಚ್ಛಾ, ಪು. ೧೯೨, ಅಧ್ಯಾಯ ೭೭, ಶ್ಲೋಕ ೧೦

ಲಾಡ್‌ಖಾನ್ ದೇವಾಲಯದ ಮೇಲ್ಭಾಗದಲ್ಲಿ ಗರ್ಭಗೃಹದ ಮೇಲೆ ಚತುಷ್ಕವನ್ನಾಧರಿಸಿದ ದೇವ ಕೋಷ್ಠವಿದೆ. ಇದನ್ನು ಉಪಸ್ಥಾನಕ ಅಥವಾ ಅಪವರಕಾ ಎಂದು ಗುರುತಿಸಬಹುದು. ಅಪವರಕವನ್ನು "ಅಲ್ಪಾಲ್ಪಸ್ತು ಚತುಷ್ಕುಡ್ಯಾ ಯೇತೇಪವರಕಾ ಮತಾಃ"[37] ಎಂದು ಸೂಚಿಸಿದ್ದು, ಇದರ ಖಚಿತಾರ್ಥಕ್ಕೆ ಮತ್ತಷ್ಟು ಸಾಕ್ಷ್ಯಾಧಾರಗಳು ಬೇಕು. ಮುಖಮಂಟಪದ ಸಾಲಭಂಜಿಕೆಯರ ಕಂಡರಣೆ ಮುಂದಿನ ದೇವಾಲಯಗಳಲ್ಲಿ ಮುಂದುವರೆದಿದ್ದರೂ ಮೂಲತಃ ಶಾಲಾ ಅಥವಾ ಸಭಾ ರಚನೆಯಿಂದ ಪಡೆದ ಅಂಗಗಳು.

ಲಾಡ್‌ಖಾನ್ ದೇವಾಲಯ ರಚನೆಯಲ್ಲಿರುವ ಚತುಷ್ಕವು ಮುಂದಿನ ದೇವಾಲಯಗಳಲ್ಲಿ ಪ್ರತ್ಯೇಕ ಭಿತ್ತಿಯನ್ನಳವಡಿಸಿಕೊಂಡು ಗರ್ಭಗೃಹವೆನಿಸಿತು. ಇದರಿಂದ ಪ್ರದಕ್ಷಿಣಾಪಥವೂ ಸಮರ್ಥವಾಗಿ ಗುರುತಿಸಲ್ಪಟ್ಟಿತು. ಇಂತಹ ಸ್ಥಿತಿಯನ್ನು ಗೌಡರಗುಡಿಯಲ್ಲಿ ಕಾಣಬಹುದು. ಇಲ್ಲಿ ಅಗಲವೂ ಕಿರಿದಾದದ್ದನ್ನು ಗಮನಿಸಬಹುದು. ಸಭಾರಚನೆಯ ನಂತರ ಸಾಂಧಾರ ರಚನೆಯ ಮೊದಲ ಹಂತವೆಂದು ಗೌಡರಗುಡಿಯನ್ನು ಗುರುತಿಸಬಹುದು. ಇದೇರೀತಿ ಪ್ರತ್ಯೇಕ ಗರ್ಭಗೃಹ, ಮುಖಮಂಟಪವುಳ್ಳ ಗರ್ಭಗೃಹ ಇತ್ಯಾದಿಗಳು ಶಾಲಾರಚನೆಯ ಧ್ರುವ, ವಿಕಾಲಿಂದ ರಚನೆಗಳಿಂದ ಮೂಡಿದ್ದನ್ನು ವಿಕಾಸದ ಹಂತಗಳಲ್ಲಿ ಗುರುತಿಸಬಹುದು. ಇವುಗಳಲ್ಲಿ ಯಾವುದು ಪ್ರಾಚೀನ ಎಂದು ಗುರುತಿಸುವುದು ಸಾಧ್ಯವಾಗದು. ಆದರೆ ದೇವಾಲಯಗಳ ಪರಿಕಲ್ಪನೆ ಸಾರ್ವಜನಿಕ ಕಟ್ಟಡಗಳ ನಂತರವೇ ಎಂಬ ಅಂಶ ಪ್ರಮುಖವಾಗುತ್ತದೆ.

ಪಿ. ಎನ್. ಬೋಸ್‌ರವರು ತಮ್ಮ ಗ್ರಂಥದಲ್ಲಿ ದೇವಾಲಯಗಳ ಹದಿನಾರು ಪ್ರಭೇದಗಳನ್ನು ಪಟ್ಟಿ ಮಾಡಿದ್ದಾರೆ.[38] ಇದರೊಂದಿಗೆ ವರಾಹಮಿಹಿರನ ಬೃಹತ್‌ಸಂಹಿತೆಯಲ್ಲಿ ಗುರುತಿಸುವ ಇಪ್ಪತ್ತು ಪ್ರಭೇದಗಳನ್ನೂ ಗುರುತಿಸಿದ್ದಾರೆ.[39] ಈ ಪ್ರಭೇದಗಳನ್ನು ಹೆಸರಿಸಬಹುದೇ ಹೊರತು ಹೆಚ್ಚಿನ ಉಪಯೋಗವಾಗದು. ಶುಕ್ರನೀತಿ ಗ್ರಂಥವು ಚತುಃಶಾಲಾ ಪ್ರಾಸಾದವನ್ನು ಮಾತ್ರ ಉಲ್ಲೇಖಿಸಿದೆ. ಈ ಪ್ರಾಸಾದವು ದೇವಮಂದಿರಗಳಿಗೆ ಸಂಬಂಧಿಸಿದಂತೆ ಒಂದುನೂರಾ ಇಪ್ಪತ್ತೈದು ಭೂಮಿಗಳಿರುವ ಆಲಯ ನಿರ್ಮಾಣಕ್ಕೆ ಅವಕಾಶ ಕಲ್ಪಿಸಿದೆ ![40] ಈ ಸಂಖ್ಯೆಯಲ್ಲಿ ಉತ್ಪ್ರೇಕ್ಷೆಯಿದ್ದರೂ ಈ ಗ್ರಂಥರಚನಾ ಕಾಲಕ್ಕೆ ಭೂಮಿಗಳಿಂದ ಕೂಡಿದ ವಿಮಾನರಚನೆಯ ಸ್ಪಷ್ಟ ಕಲ್ಪನೆ ಮೂಡಿತ್ತು ಎನ್ನಬಹುದು.

ಲಾಡ್‌ಖಾನ್ ಕಟ್ಟಡದ ನಿರ್ಮಾಣದ ವೇಳೆಗೆ ಸಭಾ ಇತ್ಯಾದಿ ಸರ್ವಜನೋಪಯೋಗಿ ವಿವಿಧ ರಚನೆಗಳು ಖಚಿತ ಆಕಾರ ತಳೆದಿದ್ದವು. ಆದರೆ ಈ ದೇವಾಲಯದ ಮೇಲಣ ಉಪಸ್ಥಾನಕ ಅಥವಾ ಅಪವರಕಾ ರಚನೆಯು ಮಾತ್ರ ಪ್ರಯೋಗದೃಷ್ಟಿಯಿಂದ ರಚಿತವಾದುದೆಂದು ತಿಳಿಯಬಹುದು.

ಔತ್ತರೇಯ ಶಿಖರದ ಕಲ್ಪನೆ ಹಾಗೂ ಮೂಲಬೇರಕ್ಕಾಗಿ ಪ್ರತ್ಯೇಕಗೊಳ್ಳುವ ಗರ್ಭಗೃಹರಚನೆ ತದನಂತರ ಕಾಲದ್ದು. ಐಹೊಳೆ, ಬಾದಾಮಿ, ಮಹಾಕೂಟ, ಪಟ್ಟದಕಲ್ಲುಗಳಲ್ಲಿಯ ದೇವಾಲಯಗಳ ನಿರ್ಮಾಣದ ಕಾಲಮಾನವನ್ನು ನಿರ್ಧರಿಸುವಲ್ಲಿ ಅವುಗಳೊಂದಿಗೆ ದೊರೆತ ಶಾಸನಗಳೇ ಹೆಚ್ಚು ಪ್ರಯೋಜನಕಾರಿಯಾಗಿದ್ದು, ಔತ್ತರೇಯ ಸಂಪ್ರದಾಯದ ಶಿಖರದ ಕಲ್ಪನೆ ಮೂಡುವ ವೇಳೆಗೆ ದಾಕ್ಷಿಣಾತ್ಯ ಸಂಪ್ರದಾಯದ ಶೈಲಿಗಳು ಸಂಪೂರ್ಣವಾಗಿ ವಿಕಸನಗೊಂಡಿದ್ದವು ಎಂದು ಖಚಿತವಾಗಿ ಗುರುತಿಸಬಹುದು.

---

37. ಸಮರಾಂಗಣ ಸೂತ್ರಧಾರ, ಪು. ೯೦, ಅಧ್ಯಾಯ ೧೮, ಶ್ಲೋಕ ೨೪
38. ಪಿ. ಎನ್. ಬೋಸ್: ಪ್ರಿನ್ಸಿಪಲ್ಸ್ ಆಫ್ ಶಿಲ್ಪಶಾಸ್ತ್ರ, ದೆಹಲಿ, ೧೯೭೮, ಪು. ೭೪, ೭೫
39. ಅದೇ, ಪು. ೭೧
40. ಬ್ರಹ್ಮಾನಂದ ಮಿಶ್ರಾ (ಸಂ.) : ಶುಕ್ರನೀತಿ, ವಾರಣಾಸಿ, ೧೯೬೮, ಪು. ೨೪೭, ಶ್ಲೋಕ ೬೭-೬೯

ಕೂ. ಸ. ಅಪರ್ಣ

# ದೇವಾಲಯದ ಕಂಬಗಳು : ಒಂದು ಅಧ್ಯಯನ

ಯಾವುದೇ ಒಂದು ವಸ್ತು ಸ್ಥಿರವಾಗಿ, ದೃಢವಾಗಿ ನಿಲ್ಲಬೇಕಾದರೆ ಅದಕ್ಕೊಂದು ಆಧಾರ ಬೇಕು. ಹೀಗೆ ಆಧಾರಕ್ಕಾಗಿ ಬಳಸುವ ವಸ್ತುವಿನ ಶಕ್ತಿ, ಗಾತ್ರಗಳು ಆಧರಿಸಬೇಕಾಗಿರುವ ವಸ್ತುವಿನ ಶಕ್ತಿ ಮತ್ತು ಗಾತ್ರಕ್ಕಿಂತ ಹೆಚ್ಚಿರುತ್ತದೆಂಬುದು ಸಹಜವೇ. ಉದಾಹರಣೆಗೆ, ಮಂಟಪಗಳನ್ನು ಇಲ್ಲಿ ನೋಡಬಹುದು. ನಾಲ್ಕು ಕಂಬಗಳ ಮೇಲೆ ಮೇಲ್ಛಾವಣಿಯನ್ನಿಟ್ಟರೆ ಅದು ಕಂಬಗಳನ್ನಾಧರಿಸಿ ನಿಲ್ಲುತ್ತದೆ. ಹೀಗೆ ಕಂಬಗಳೇ ಮನೆ, ದೇವಾಲಯ ಮೊದಲಾದವುಗಳ ಮೇಲ್ಛಾವಣಿಗೆ ಆಸರೆಯನ್ನಿತ್ತು, ವಾಸಿಸಲು ಅಗತ್ಯವಾದ ತಂಗುದಾಣಗಳಿಗೆ ಕಾರಣವಾದವು. ಹಿಂದೆ ಮಣ್ಣಿನಿಂದ, ಇಟ್ಟಿಗೆಯಿಂದ ಗುಡಿಸಲು, ಮನೆಗಳನ್ನು ನಿರ್ಮಿಸುವಲ್ಲಿ ಆಸರೆಗಾಗಿ ಕಂಬಗಳನ್ನೇ ನಿಲ್ಲಿಸುತ್ತಿದ್ದು, ಈಗ ಗಟ್ಟಿಗಾರೆಯ ಬಳಕೆಯಿಂದ ಗೃಹವಾಸ್ತುವಿನಲ್ಲಿ ಕಂಬಗಳು ಕಣ್ಮರೆಯಾಗಿವೆ.

ಇನ್ನೂ ಉಳಿದುಬಂದಿರುವ ಮತ್ತು ಶಿಥಿಲವಾಗಿರುವ ನಮ್ಮ ಪ್ರಾಚೀನ ದೇವಾಲಯಗಳನ್ನು ಗಮನಿಸಿದರೆ, ಅವುಗಳ ಭದ್ರತೆಗೆ ಸ್ತಂಭಗಳೇ ಆಧಾರವೆಂಬುದು ಸ್ಪಷ್ಟವಾಗುತ್ತದೆ. ಭಿತ್ತಿಯು ಆಲಯವನ್ನು ಆವೃತ್ತಗೊಂಡು ಭಾರವನ್ನು ಹೊರುವುದಾದರೂ ದೇವಾಲಯ ನಿಂತಿರುವುದು ಸ್ತಂಭಗಳ ಆಧಾರದ ಮೇಲೆಯೇ. ಇದರಿಂದ, ದೇವಾಲಯ ನಿರ್ಮಾಣದಲ್ಲಿ ಸ್ತಂಭಗಳೇ ಸರ್ವಾಧಾರವೆಂಬುದು ಸ್ಪಷ್ಟವಾಗುತ್ತದೆ.

ಇದರಂತೆ, ಸರ್ವಲೋಕೈಕಾಧಾರನಾದ ಶಿವನನ್ನು 'ಮೂಲಸ್ತಂಭ' ಎಂದು ಶಾಸನಗಳಲ್ಲಿ ಕರೆದಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[1] ಈ ಕಲ್ಪನೆ ಬಹಳ ಹಿಂದಿನಿಂದಲೂ ಇದೆ. ಅಥರ್ವವೇದದಲ್ಲಿ ಶಿವನನ್ನು ಚರಾಚರ ಜಗತ್ತನ್ನೆಲ್ಲ ಹಿಡಿದು ನಿಲ್ಲಿಸಿರುವ ಸ್ತಂಭವೆಂದು ಕರೆಯಲಾಗಿದೆ.[2] ಸರ್ವಸೃಷ್ಟಿಯನ್ನು (ಮೂರುಲೋಕಗಳನ್ನು) ತನ್ನೊಳಗು ಮಾಡಿಕೊಂಡಿರುವ ಈ ಕಂಬಕ್ಕೆ ಆದ್ಯಂತಗಳೇ ಇಲ್ಲ. ಈ ಕಂಬದ ಆದ್ಯಂತಗಳನ್ನು ಗುರುತಿಸಲು ಬ್ರಹ್ಮ, ವಿಷ್ಣುವಿಗೂ ಸಾಧ್ಯವಾಗಲಿಲ್ಲವೆಂಬುದನ್ನು 'ಲಿಂಗೋದ್ಭವಮೂರ್ತಿ'ಯ ಹಿನ್ನೆಲೆಯು ಸೂಚಿಸುತ್ತದೆ. ಹೀಗೆ 'ಅಗ್ನಿಸ್ತಂಭ'ವಾದ ಆ ಪರಮೇಶ್ವರನೇ ಸ್ತಂಭದ ಕಲ್ಪನೆಯನ್ನಿತ್ತು, ತಾನು ಆಧಾರವಾಗಿ ನಿಂತು ಜಗತ್ತನ್ನು ಎತ್ತಿಹಿಡಿದಿರುವುದರ ದ್ಯೋತಕದಂತೆ, ವಾಸ್ತುವಿನ್ಯಾಸದಲ್ಲಿ ಸ್ತಂಭಗಳೇ ಸರ್ವಪ್ರಧಾನವಾಗಿ ನಿಲ್ಲುತ್ತವೆ. ಸ್ತಂಭದ ಪರ್ಯಾಯಪದಗಳಾದ ಸ್ಥಾಣು, ಸ್ಥೂಣ, ಸ್ಕಂಭ–ಇವುಗಳು ಶಿವನಿಗೂ ಸಂಬಂಧಿಸಿದ್ದೆಂಬುದು ಗಮನಾರ್ಹ.[3]

1. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ।
   ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥
2. ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ: ನೆಲೆ-ಹಿನ್ನೆಲೆ, ಬೆಂಗಳೂರು, ೧೯೭೭, ಪು. ೧೦೩-೧೦೪
3. ಈಗಿನ ತಾಳಗುಂದಕ್ಕೆ 'ಸ್ಥಾಣಕುಂದೂರು' ಎಂಬ ಹೆಸರಿದ್ದು, ಅಲ್ಲಿದ್ದ ಶಿವ ದೇವಾಲಯದಿಂದಲೇ ಈ ಹೆಸರು ಬಂದಿತೆಂಬುದನ್ನು ಇಲ್ಲಿ ಗಮನಿಸಬಹುದು.

'ಸ್ತಭ್' ಎಂಬ ಧಾತುವಿನಿಂದ ವ್ಯುತ್ಪತ್ತಿಯಾಗಿರುವ 'ಸ್ತಂಭ'ವೆಂಬ ಪದವು ಹಿಡಿ, ನಿಲ್ಲಿಸು, ಆಧರಿಸು ಎಂಬರ್ಥವನ್ನು ಹೊಂದಿದ್ದು, ಬೀಳದಂತೆ ಆಧಾರವಾಗಿ ಹಿಡಿದುಕೊಳ್ಳಬಲ್ಲ, ಸ್ಥಿರವಾಗಿ ನಿಲ್ಲಿಸಬಲ್ಲ ಎತ್ತರದ ಹಿಡಿಕೆಯಾಗಿದೆ. ಇದಕ್ಕೆ ಸುಲಭ ಉದಾಹರಣೆಯೆಂದರೆ, ನಮ್ಮ ಕಾಲುಗಳು. ಈ ಕಾಲುಗಳ ಆಧಾರದ ಮೇಲೆ ನಮ್ಮ ದೇಹವು ನಿಂತಿದೆ. ದೇಹವೇ ದೇವಾಲಯವೆಂದು ಬಗೆದ ಬಸವಣ್ಣನವರು ತಮ್ಮ ವಚನವೊಂದರಲ್ಲಿ ಆ ದೇವಾಲಯಕ್ಕೆ 'ಕಾಲುಗಳೇ ಕಂಬ'ವೆಂದು ನುಡಿದಿದ್ದಾರೆ.[4]

ಹೀಗೆ ಆಧಾರಸ್ತಂಭಗಳಿಂದಲೇ ದೇವಾಲಯ ನಿರ್ಮಾಣ ಸಾಧ್ಯವೆಂದಾಗ, ಕಂಬಗಳನ್ನು ಕೇವಲ ಎತ್ತರವಾದ ಮರದ ಕೊರಡುಗಳಂತೆ ನಿಲ್ಲಿಸುವ ಬದಲು ಅವುಗಳನ್ನು ಅಲಂಕಾರಯುಕ್ತವಾಗಿ ರಚಿಸಿ, ದೇವಾಲಯದ ಶೋಭೆಯನ್ನು ಹೆಚ್ಚಿಸಲು ಪ್ರಯತ್ನಿಸಿದರು. (ಕೆಲವು ದೇವಾಲಯಗಳನ್ನು ಕಂಬದ ಹೆಸರಿನಿಂದಲೇ ಕರೆಯುವುದುಂಟು. ಉದಾಹರಣೆಗೆ, ಮೂಡಬಿದಿರೆಯ ಸಾವಿರಕಂಬದ ಬಸದಿ, ಚಿದಂಬರಂನ ಸಾವಿರಕಂಬದ ಮಂಟಪ, ಇತ್ಯಾದಿ). ಇದರಿಂದ ಕಂಬಗಳ ವಿನ್ಯಾಸದಲ್ಲಿ ವಿವಿಧ ಮಾದರಿಗಳುಂಟಾಗಿ ನಾನಾ ಪ್ರಕಾರದ ಕಂಬಗಳು ದೇವಾಲಯ ವಾಸ್ತುನಿರ್ಮಾಣದಲ್ಲಿ ಕಾಣಿಸಿಕೊಂಡವು. ದೇವಾಲಯಗಳ ರಚನೆ ಇತ್ಯಾದಿಗಳ ಬಗ್ಗೆ ರೀತಿ-ನಿಯಮಗಳನ್ನು ತಿಳಿಸುವ ವಾಸ್ತುಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಸ್ತಂಭಗಳ ಬಗೆಗೂ ಸಾಕಷ್ಟು ವಿವರಣೆಗಳು ಮೂಡಿಬಂದವು.

ಮಯಮತ, ಮಾನಸಾರ, ಕಾಮಿಕಾಗಮ, ಸುಪ್ರಭೇದಾಗಮ ಮುಂತಾದ ಶಾಸ್ತ್ರಗ್ರಂಥಗಳು ಸ್ತಂಭಗಳ ಬಗ್ಗೆ ಸವಿವರವಾಗಿ ತಿಳಿಸುತ್ತವೆ. ಸ್ತಂಭಗಳ ಭಾಗಗಳು, ಅವುಗಳ ಅಲಂಕರಣಗಳು, ಅವುಗಳ ಪ್ರಭೇದಗಳು ಇತ್ಯಾದಿಗಳ ಬಗ್ಗೆ ಈ ಗ್ರಂಥಗಳಲ್ಲಿ ಹೇಳಲಾಗಿದೆ. ಆದರೆ ಈ ಲೇಖನದಲ್ಲಿ, ಪ್ರಧಾನವಾಗಿ 'ಮಾನಸಾರ' ಗ್ರಂಥವನ್ನೂ ಅದಕ್ಕೆ ಪೂರಕವಾಗಿ ಕೆಲವೆಡೆ ಇತರ ಗ್ರಂಥಗಳನ್ನೂ ಬಳಸಿಕೊಳ್ಳಲಾಗಿದೆ. 'ಮಾನಸಾರ'ದ ಹಿನ್ನೆಲೆಯಲ್ಲಿ ಸ್ತಂಭದ ಭಾಗಗಳನ್ನು ಗುರುತಿಸುವ ಮತ್ತು ಅದರಲ್ಲಿ ವರ್ಣಿಸಿರುವ ಕೆಲವು ಪ್ರಭೇದಗಳನ್ನು ಈಗ ಅಸ್ತಿತ್ವದಲ್ಲಿರುವ ದೇವಾಲಯದ ಸ್ತಂಭದೊಂದಿಗೆ ಸಮೀಕರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕಂಬದ ಮೊದಲ ಭಾಗವೇ 'ಪೀಠ' (Pedestal ; ಮೂಲ ಅಥವಾ ಆಸನ). ಪೀಠವು ಚೌಕಾಕಾರವಾಗಿರಬೇಕೆಂದು 'ಮಾನಸಾರ'ದಲ್ಲಿ ಹೇಳಿದೆ.[5] ಇದನ್ನು ಸಣ್ಣ ವೇದಿಕೆಯಂತೆ ರಚಿಸಬಹುದು ಅಥವಾ ಇದು ಪೂರ್ಣರೂಪದಲ್ಲಿರುವ ಉಪಪೀಠದಂತಿರಬಹುದು. ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯದಲ್ಲಿ ಇಂತಹ ಸುಂದರ ಉಪಪೀಠವಿದೆ. ಪೀಠವು ನಿರಲಂಕೃತವಾಗಿರುವುದಾದರೂ ಬಾದಾಮಿಯ ಗುಹಾಲಯಗಳ ಕೆಲವು ಸ್ತಂಭಗಳಲ್ಲಿಯ ಪೀಠವು ಪದ್ಮಗಳಿಂದಾವೃತವಾಗಿರುವುದನ್ನು ಕಾಣುತ್ತೇವೆ.

ಪೀಠದ ಮೇಲಿನ ಭಾಗವೇ 'ಪಾದ' (Base).[6] ಇದು ಸಾಮಾನ್ಯವಾಗಿ ಚೌಕಾಕಾರದ ಪೆಟ್ಟಿಗೆಯ ರೀತಿಯಲ್ಲಿರುತ್ತದೆ ; ಸಿಂಹ, ವ್ಯಾಳಿ ಇತ್ಯಾದಿಗಳ ಶಿಲ್ಪವನ್ನೂ ಈ ಭಾಗದಲ್ಲಿ ಬಿಡಿಸಿರುತ್ತಾರೆ.[7] ಗಂಗರ ಕಾಲಕ್ಕೆ ಸೇರುವ ಗಂಗವಾರದ ಸೋಮೇಶ್ವರ ದೇವಾಲಯದಲ್ಲಿ ಮತ್ತು ರಾಷ್ಟ್ರಕೂಟರ ಕಾಲದ ಸಿರಿವಾಳ್‌ನ ಒಂದು ದೇವಾಲಯದಲ್ಲಿ (ಸಂಖ್ಯೆ ೧೫) ಇಂತಹ 'ಸಿಂಹಪಾದ'

---

4. "ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನಕಳಸವಯ್ಯಾ...."
ಈ ಭಾವನೆ ಬಹಳ ಹಿಂದಿನಿಂದಲೂ ಇದೆಯೆಂಬುದು ''ದೇಹೋ ದೇವಾಲಯಃ ಪ್ರೋಕ್ತೋ। ದೇವೋ ದೇವಃ ಸನಾತನಃ'' ಎಂಬುದರಿಂದ ಸ್ಪಷ್ಟವಾಗುತ್ತದೆ.
5. ಮಾನಸಾರ, ಅಧ್ಯಾಯ ೧೫, ಶ್ಲೋಕ ೧೨
6. ಇದನ್ನು 'ಹೋಮ' ಎಂದು 'ಮಯಮತ'ದಲ್ಲಿ ಕರೆಯಲಾಗಿದೆ—ಮಯಮತ, ಅಧ್ಯಾಯ ೧೫, ಶ್ಲೋಕ ೮.
7. 'ಮಾನಸಾರ'ದಲ್ಲಿ ಇದನ್ನು ಬೇರೊಂದು ಸ್ತಂಭದ ಬಗ್ಗೆ ವಿವರಿಸುವಲ್ಲಿ ಹೇಳಿದ್ದರೆ,'ಮಯಮತ'ದಲ್ಲಿ ನೇರವಾಗಿ ಹೇಳಿದ್ದು, ಅವುಗಳನ್ನು ಕ್ರಮವಾಗಿ 'ಸಿಂಹಸ್ತಂಭ' ಅಥವಾ 'ಸಿಂಹಪಾದಸ್ತಂಭ' ಮತ್ತು 'ವ್ಯಾಳಿಸ್ತಂಭ' ಎಂದು ಕರೆಯಲಾಗಿದೆ—ಮಯಮತ, ಅಧ್ಯಾಯ ೧೫, ಶ್ಲೋಕ ೨೦.

ಸ್ತಂಭವಿದೆ. ಇದು ಈ ನಾಡಿನ ಆ ಕಾಲದ ಸ್ತಂಭವಿಧವೆನಿಸಿದರೂ ವಿಜಯನಗರದ ಅರಸರ ಕಾಲದಲ್ಲಿ ಇದರ ಮುಂದುವರಿದ ರೀತಿಯ ಸ್ತಂಭಗಳು ಪ್ರಸಿದ್ಧಿಗೆ ಬರುತ್ತವೆ. ಹಂಪೆ, ಲೇಪಾಕ್ಷಿ ಮತ್ತು ಬೆಂಗಳೂರಿನ ಕೆಲವು ದೇವಾಲಯಗಳಲ್ಲಿ ಸಿಂಹ/ವ್ಯಾಳಿಗಳನ್ನೇ ಪ್ರಧಾನವಾಗಿ ಬಿಡಿಸಿರುವ ಸ್ತಂಭಗಳನ್ನು ಕಾಣಬಹುದು.

ಇದರ ಮೇಲಿನ ಭಾಗವೇ 'ದಂಡ'(Shaft). ಇದು ಕಂಬದಲ್ಲಿ ಬಹುಮುಖ್ಯವಾದ ಭಾಗ. ಕಂಬದ ಅಳತೆಯ ದೃಷ್ಟಿಯಿಂದ ಮತ್ತು ಅಲಂಕಾರದ ದೃಷ್ಟಿಯಿಂದ ಇದು ಮಹತ್ವವನ್ನು ಪಡೆದಿದೆ. ಕಂಬದರೂಪ ವಿನ್ಯಾಸವನ್ನು ಈ ಭಾಗದ ಆಧಾರದ ಮೇಲೆಯೇ ನಿರ್ಧರಿಸಲಾಗುತ್ತದೆ. 'ದಂಡ'ವು ನಾಲ್ಕು ಮುಖಗಳನ್ನು ಹೊಂದಿದ್ದರೆ 'ಬ್ರಹ್ಮಕಾಂತ'; ಎಂಟು ಮುಖಗಳನ್ನು ಹೊಂದಿದ್ದರೆ 'ವಿಷ್ಣುಕಾಂತ'; ಹದಿನಾರು ಮುಖಗಳಿದ್ದರೆ ಅಥವಾ ವೃತ್ತಾಕಾರವಾಗಿದ್ದರೆ 'ರುದ್ರಕಾಂತ' ; ಐದು ಮುಖಗಳಿದ್ದರೆ 'ಶಿವಕಾಂತ' ಹಾಗೂ ಆರು ಮುಖಗಳಿದ್ದರೆ 'ಸ್ಕಂದಕಾಂತ'ಎಂದು 'ಮಾನಸಾರ'ದಲ್ಲಿ ಹೇಳಿದೆ.[8] ಕಂಬದಹಳ್ಳಿಯ ಪಂಚಕೂಟ ಬಸದಿಯಲ್ಲಿಯ ಶಾಂತಿನಾಥ ಬಸದಿಯಲ್ಲಿ 'ವಿಷ್ಣುಕಾಂತ' ಕಂಬವನ್ನೂ ನರಸಮಂಗಲದ ರಾಮಲಿಂಗೇಶ್ವರ ದೇವಾಲಯದಲ್ಲಿ ವೃತ್ತಾಕಾರದ 'ರುದ್ರಕಾಂತ' ಸ್ತಂಭವನ್ನೂ ಎಲ್ಲೋರದ ಜೈನಗುಹೆಯಲ್ಲಿ (ಸಂಖ್ಯೆ ೩೨) 'ಬ್ರಹ್ಮಕಾಂತ' ಸ್ತಂಭವನ್ನೂ ಅದೇ ಎಲ್ಲೋರದ ಕೈಲಾಸ ದೇವಾಲಯದಲ್ಲಿ ಹದಿನಾರು ಮುಖದ 'ರುದ್ರಕಾಂತ' ಸ್ತಂಭವನ್ನೂ ಕಾಣಬಹುದು. ಮೂಲದಿಂದ ಕೊನೆಯವರೆಗೂ ಕಂಬವು ಒಂದೇ ರೀತಿ ಇರಬೇಕು.[9] ಆದರೆ ಎಲ್ಲ ಸ್ತಂಭಗಳೂ ಈ ರೀತಿ ಇರುವುದಿಲ್ಲ. ಆಗ ಸ್ತಂಭವು 'ದಂಡ' ಭಾಗದಲ್ಲಿ ಯಾವ ರೂಪವನ್ನು ಹೊಂದಿರುವುದೋ ಅದಕ್ಕೆ ಸಂಬಂಧಪಟ್ಟ ಹೆಸರಿನಿಂದಲೇ ಆ ಸ್ತಂಭವನ್ನು ಗುರುತಿಸಲಾಗುತ್ತದೆ.

ಈ 'ದಂಡ' ಭಾಗವನ್ನು ಅನೇಕ ರೀತಿಯಲ್ಲಿ ಅಲಂಕರಿಸುತ್ತಾರೆ. ಅದರ ತುದಿಯಲ್ಲಿ 'ಪದ್ಮದಳ'ಗಳನ್ನು ಸಾಲಾಗಿ ರಚಿಸಿದ್ದು, ಅದರಿಂದ ಹೊರಹೊಮ್ಮಿದಂತೆ, ಕೆಳಭಾಗದಲ್ಲಿ ಮುತ್ತಿನಮಣಿಗಳನ್ನು ಸಾಲಾಗಿ ಪೋಣಿಸಿದಂತೆ ತೋರುವ ಉದ್ದಪಟ್ಟಿಯನ್ನು ರಚಿಸುತ್ತಾರೆ. ಪದ್ಮದಳಗಳ ಸಾಲನ್ನು 'ಮಾಲಬಂಧ' ಎಂದೂ ಮುತ್ತಿನಮಣಿಗಳ ಸಾಲನ್ನು 'ಮುಕ್ತಾದಾಮ' ಎಂದೂ ಮಾನಸಾರವು ಗುರುತಿಸುತ್ತದೆ.[10] (ಆದರೆ ಸಾಮಾನ್ಯವಾಗಿ ಇದು ಪದ್ಮಬಂಧ ಮತ್ತು ಮಾಲಾಸ್ಥಾನ ಎಂದೇ ಗುರುತಿಸಲ್ಪಡುತ್ತದೆ). ಈ ಅಲಂಕಾರವನ್ನು ಬಾದಾಮಿ ಗುಹಾಲಯಗಳ ಸ್ತಂಭಗಳಲ್ಲಿ ಮತ್ತು ಪಟ್ಟದಕಲ್ಲಿನ ದೇವಾಲಯಗಳ ಸ್ತಂಭಗಳಲ್ಲಿ ಕಾಣಬಹುದು.

---

8. ಏತತ್ಪಾದವಿಶಾಲಂ ಸ್ಯಾತ್ತಥಾ(ಧಾ)ಕಾರ ಮಿಹೋಚ್ಯತೇ
ಚತುರಶ್ರಂ ಬ್ರಹ್ಮಕಾಂತಂ ಸ್ಯಾದಷ್ಟಾಶ್ಯಂ ವಿಷ್ಣುಕಾಂತಕಂ ॥ ೧೦ ॥
ಷೋಡಶಾಶ್ರಂ ತು ವೃತ್ತಂ ವಾ ರುದ್ರಕಾಂತಮಿತಿಸ್ಮೃತಂ ।
ಪಂಚಾಶ್ರಂ ಶಿವಕಾಂತಂ ಸ್ಯಾತ್ ಷಡಶ್ರಂಸ್ಕಂದಕಾಂತಕಂ ॥ ೧೧ ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೧೦-೧೧

'ಮಯಮತ'ದಲ್ಲಿ, ಆರು ಮುಖಗಳಿದ್ದರೆ 'ಇಂದ್ರಕಾಂತ'ವೆಂದೂ ಹದಿನಾರು ಮುಖಗಳಿದ್ದರೆ 'ಸೌಮ್ಯಕಾಂತ'ವೆಂದೂ ವಿಶೇಷವಾಗಿ ಹೇಳಿದೆ—ಮಯಮತ, ಅಧ್ಯಾಯ ೧೫, ಶ್ಲೋಕ ೧೪.

9. ಮಾನಸಾರ, ಅಧ್ಯಾಯ ೧೫, ಶ್ಲೋಕ ೧೨

10. ತಸ್ಯಾಧೋ(ಧಃ) ಸಾರ್ಧದಂಡೇನ ಮೂಲಬಂಧಂ ಸಹಾಂಬುಜೈ
ತಸ್ಯಾಧೋಪಿ ವಿಶೇಷಣ ಮುಕ್ತಾದಾಮ ವಿಭೂಷಿತಂ ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೩೨

'ದಂಡ'ದ ಮೇಲಿನ ಭಾಗವನ್ನು ಗ್ರೀವಭಾಗವೆನ್ನಬಹುದು.[11] ಇದರ ಮುಖ್ಯಭಾಗಗಳೆಂದರೆ, ಕ್ರಮವಾಗಿ ಕಲಶ, ಹಾರಿಕಾ, ಅಸ್ಯ, ತಾಟಿಕಾ, ಕಂಠ, ಕುಂಭ, ನಿಮ್ನಕ, ಫಲಕ, ವೀರಕಂಠ ಮತ್ತು ಬೋದಿಗೆ.[12] ಹೀಗೆ ದಂಡದ ಮೇಲಿನ ಅಂಗಗಳ ಬಗ್ಗೆ ಸೂಕ್ತವಾದ ವಿವರಣೆಯನ್ನು ನೀಡುತ್ತಿದ್ದರೂ ಬೇರೆ ಗ್ರಂಥಗಳಲ್ಲಿರುವಂತೆ,[13] ಇದರಲ್ಲಿ 'ಫಲಕ'ದ ಕೆಳಗೆ ಬರುವ 'ಮಂಡಿ'ಯ ಬಗ್ಗೆ ಏನನ್ನೂ ನೇರವಾಗಿ ಹೇಳಿಲ್ಲ. ಎಲ್ಲ ಅಂಗಗಳನ್ನೂ ಒಂದು ಕ್ರಮದಲ್ಲಿ ಹೇಳುತ್ತಾ, 'ಫಲಕ'ದ ಕೆಳಭಾಗವನ್ನು 'ನಿಮ್ನಕ' ಎಂದು ಇದರಲ್ಲಿ ಕರೆದಿರುವುದರಿಂದ, 'ನಿಮ್ನಕ'ವು 'ಮಂಡಿ'ಯನ್ನೇ ಸೂಚಿಸುತ್ತಿರಬಹುದು.

ಇನ್ನು ಇವುಗಳ ಮೇಲೆ ಬರುವ ಬೋದಿಗೆಗಳ ಬಗೆಗೆ ಹೇಳುವುದಾದರೆ, 'ಮಾನಸಾರ'ದಲ್ಲಿ 'ತರಂಗ ಬೋದಿಗೆ' ಮತ್ತು 'ಪುಷ್ಪಬೋದಿಗೆ'ಗಳ ಬಗೆಗೆ ಸ್ಪಷ್ಟ ಉಲ್ಲೇಖವಿದೆ. ಬೋದಿಗೆಯನ್ನು ಅಲೆ ಅಲೆಯಾಗಿ ಕಾಣುವಂತೆ ರಚಿಸಿ ಅದನ್ನು ಎಲ್ಲ ರೀತಿಯಲ್ಲೂ ಅಲಂಕರಿಸಿದಾಗ ಅದು 'ತರಂಗಬೋದಿಗೆ' ಎನಿಸುತ್ತದೆ.[14] ಬಾದಾಮಿ ಚಾಲುಕ್ಯರ ಕಾಲದಿಂದಲೂ ಈ ವಿಧದ ಬೋದಿಗೆಯು ಬಳಕೆಯಲ್ಲಿದೆ. ಬಾದಾಮಿಯ ಗುಹಾಲಯಗಳು ಮತ್ತು ಪಟ್ಟದಕಲ್ಲಿನ ದೇವಾಲಯಗಳಲ್ಲಿ ಮಾತ್ರವಲ್ಲದೆ, ಹೊಯ್ಸಳರ ಕಾಲದ ದೇವಾಲಯಗಳಲ್ಲೂ ತರಂಗಬೋದಿಗೆಯನ್ನು ಕಾಣುತ್ತೇವೆ. ಈ ಬೋದಿಗೆಯ ಮಧ್ಯೆ ಪಟ್ಟಿಕೆಯಿರುತ್ತದೆ. ಪಟ್ಟಿಕೆಯ ಮೇಲೆ ಬಳ್ಳಿ ಇತ್ಯಾದಿ ಚಿತ್ರಗಳನ್ನು ಬಿಡಿಸಿರುತ್ತಾರೆ.[15] ಬೋದಿಗೆಯು ಕಂಬದ ಎರಡು ಕಡೆ ಚಾಚಿದ್ದು, ಉಳಿದೆರಡು ಭಾಗದಲ್ಲಿ ಚೌಕಾಕೃತಿಯ ಫಲಕವಿರುತ್ತದೆ. ಇದನ್ನು ಮಾನಸಾರವು 'ಮಧ್ಯಭದ್ರ' ಎಂದು ಗುರುತಿಸಿದೆ.[16]

'ಪುಷ್ಪಬೋದಿಗೆ'ಯ ಬಗ್ಗೆ ಹೇಳಿರುವ ಗ್ರಂಥವೆಂದರೆ 'ಮಾನಸಾರ'ವೊಂದೇ.[17] ಎಲೆ, ಬಳ್ಳಿ, ಚಿತ್ರಗಳಿಂದ ಅಲಂಕರಿಸಿ 'ಪುಷ್ಪಬೋದಿಗೆ'ಯನ್ನು ರಚಿಸಬೇಕೆಂದು ಇದರಲ್ಲಿ ಹೇಳಿದೆ.[18] ಇದು ಹಿಂದಿನ ಕಾಲದಲ್ಲಿ ಕಂಡುಬರುವ ಬೋದಿಗೆಗಳ ಬೆಳವಣಿಗೆಯ ಒಂದು ರೂಪ ಎನಿಸಿದರೂ ಪುಷ್ಪಬೋದಿಗೆಯು ತನ್ನ ಪರಿಪೂರ್ಣ ರೂಪದಲ್ಲಿ ವ್ಯಕ್ತವಾಗುವುದು ವಿಜಯನಗರ ಕಾಲದಲ್ಲಿಯೇ. ಹಂಪೆಯ ಬಹುಪಾಲು ದೇವಾಲಯಗಳಲ್ಲಿ ಮತ್ತು ಇತರೆಡೆಗಳಲ್ಲಿ ಕಾಣಬರುವ ವಿಜಯನಗರ ಕಾಲದ ಅನೇಕ ದೇವಾಲಯಗಳಲ್ಲಿ ಸುಂದರವಾಗಿ ಬಿಡಿಸಿರುವ ಪುಷ್ಪಬೋದಿಗೆಗಳನ್ನು ಕಾಣುತ್ತೇವೆ. ಇದರಲ್ಲಿ ಕಂಬದಿಂದ ಹೊರಬಾಗಿರುವ ಬೋದಿಗೆಯ ಮೇಲ್ಭಾಗ

---

11. ಈ ಭಾಗಗಳನ್ನು ಬೇರೆ ಬೇರೆ ಗ್ರಂಥಗಳು ಬೇರೆ ಬೇರೆ ಹೆಸರಿನಿಂದ ಕರೆದಿವೆ. 'ಸುಪ್ರಭೇದಾಗಮ'ದಲ್ಲಿ ಮಂಡಿ, ಕಂಠ, ಫಲಕ, ವೀರಕಂಠ ಬೋದಿಗೆಗಳನ್ನು ಹೇಳಿದ್ದರೆ (ಅಧ್ಯಾಯ ೩೧, ಶ್ಲೋಕ ೫೬-೬೦), 'ಮಯಮತ'ದಲ್ಲಿ ಕಲಶ, ಸ್ಕಂಧ, ಕುಂಭ, ಮಂಡಿ, ಪೋತಿಕಾ ಎಂದು ಗುರುತಿಸಲಾಗಿದೆ (ಅಧ್ಯಾಯ ೧೫, ಶ್ಲೋಕ ೩೧).
12. ಮಾನಸಾರ, ಅಧ್ಯಾಯ ೧೫, ಶ್ಲೋಕ ೨೦-೩೧
13. ಸುಪ್ರಭೇದಾಗಮ ಮತ್ತು ಕಾಮಿಕಾಗಮಗಳಲ್ಲಿ ಇದರ ಬಗ್ಗೆ ಉಲ್ಲೇಖವಿದೆ.
14. ಬೋದಿಕೇ ಚ ತರಂಗಂ ಸ್ಯಾತ್ಸರ್ವಾಲಂಕಾರ ಸಂಯುತಂ।
ತದೇವ ತುಂಗಮಾನೇ ತು ದ್ವಾದಶಾಂಶೇ ವಿಭಾಜಿತೇ॥
ಅಧೋಭಾಗೇ ತ್ರಿಭಾಗೇನ ತರಂಗಾಕೃತಿಂ ವಿನ್ಯಸೇತ್ ।
ತದೂರ್ಧ್ವೇ ಬೋಧಿಕೋತ್ಸೇಧಂ ಷಡಂಶೇನ ವಿಶೇಷತಃ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೭೮-೭೯
15. ಈ ಚಿತ್ರಪಟ್ಟಿಯನ್ನು 'ಮಯಮತ'ವು 'ಮಧ್ಯಪಟ್ಟ' ಎಂದು ಕರೆದಿದೆ—ಅಧ್ಯಾಯ ೧೫, ಶ್ಲೋಕ ೪೪.
16. ಮಾನಸಾರ, ಅಧ್ಯಾಯ ೧೫, ಶ್ಲೋಕ ೭೫-೭೬
17. ಮಯಮತ (ಅಧ್ಯಾಯ ೧೫, ಶ್ಲೋಕ ೪೮-೪೯) ಮತ್ತು ಸುಪ್ರಭೇದಾಗಮ(ಅಧ್ಯಾಯ ೩೧, ಶ್ಲೋಕ ೬೧)ಗಳು ಚಿತ್ರ, ಪತ್ರ ಮತ್ತು ತರಂಗಬೋದಿಗೆಗಳನ್ನು ಮಾತ್ರ ಹೇಳುತ್ತವೆ.
18. ಪತ್ರವಲ್ಯಾದಿರತ್ನೈಶ್ಚ ಪತ್ರಚಿತ್ರಾಭಿಭೂಷಿತಂ ।
ಸರ್ವಾಲಂಕಾರ ಸಂಯುಕ್ತಂ ಪುಷ್ಪಬೋಧಿಕಮೀರಿತಂ ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೮೪

ದಲ್ಲಿ ಬಳ್ಳಿಯಿಂದ ಹೊಮ್ಮಿದ ಕಮಲದಳಗಳನ್ನು ಬಿಡಿಸಿದ್ದು, ಕೆಳಭಾಗದಲ್ಲಿ ಕಮಲದ ಮೊಗ್ಗು ಇರುವುದು.

ಕಂಬದ ಪ್ರಭೇದಗಳು : 'ಮಾನಸಾರ'ದಲ್ಲಿ ಪದ್ಮಕಾಂತ, ಚಿತ್ರಸ್ಕಂಭ, ಚಿತ್ರಕುಂತ, ಕುಂಭಸ್ತಂಭ, ಕೋಷ್ಠಸ್ತಂಭ. ಸಂಯೋಗಸ್ತಂಭ ಮುಂತಾದ ಸ್ತಂಭ ಪ್ರಭೇದಗಳನ್ನು ಹೇಳಲಾಗಿದೆ. ಈ ಲೇಖನದಲ್ಲಿ ಪದ್ಮಕಾಂತ, ಚಿತ್ರಸ್ಕಂಭ, ಕೋಷ್ಠಸ್ತಂಭ ಮತ್ತು ಸಂಯೋಗ ಸ್ತಂಭ ಪ್ರಭೇದಗಳ ಬಗ್ಗೆ ವಿವರವಾಗಿ ನೋಡಿ, ಆ ಪ್ರಭೇದಗಳು ಯಾವ ಯಾವ ದೇವಾಲಯಗಳಲ್ಲಿವೆ ಎಂಬುದನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

ಪದ್ಮಕಾಂತಸ್ತಂಭ : "ಮೂಲದಲ್ಲಿ ಪದ್ಮದಿಂದ ಕೂಡಿದ ಪೀಠ, ಅದರ ಮೇಲೆ ಪಾಲಿಕಾ (ಸೇತುವೆಯಂತಹ ರಚನೆ) ಇದ್ದು, ಸುತ್ತಲೂ ಎಲೆ, ಹೂ, ಬಳ್ಳಿಗಳಿಂದ ಕೂಡಿದ ಚಿತ್ರಪಟ್ಟಗಳು ಇರುತ್ತವೆ. ಮೂಲದಿಂದ ತುದಿಯವರೆಗೂ ಮೊಗ್ಗುಗಳಿಂದ ಕೂಡಿದ್ದು, ಚಿತ್ರಪಟ್ಟಗಳ ಮೇಲೆ ಮತ್ತು ಕೆಳಗೂ ಮೊಗ್ಗುಗಳು ಇರುತ್ತವೆ. ಇದು ಪದ್ಮಕಾಂತಸ್ತಂಭ"[19]–ಇದು ಪದ್ಮಕಾಂತಸ್ತಂಭದ ಬಗೆಗೆ 'ಮಾನಸಾರ'ದ ವಿವರಣೆ.

ಹೀಗೆ ಪಾಲಿಕಾದಿಂದ ಕೂಡಿದ್ದು, ಚಿತ್ರಪಟ್ಟಗಳಿಂದಲೂ ಕುಡ್ಮಲಗಳಿಂದಲೂ ಅಲಂಕೃತಗೊಂಡ 'ಪದ್ಮಕಾಂತಸ್ತಂಭ'ವನ್ನು ಹಂಪೆಯ ಅಚ್ಯುತರಾಯ ಮತ್ತು ಹಜಾರರಾಮ ದೇವಾಲಯಗಳ ಕಲ್ಯಾಣ ಮಂಟಪದಲ್ಲಿ ಕಾಣುತ್ತೇವೆ. ಈ ಸ್ತಂಭಗಳಲ್ಲಿ ಹೂ, ಬಳ್ಳಿಗಳಿಗೆ ಬದಲಾಗಿ ಚಿತ್ರಪಟ್ಟಗಳ ಮೇಲೆ ಹಂಸ, ಸಿಂಹಮುಖ, ಗಂಧರ್ವರು ಇತ್ಯಾದಿ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಅಂತ್ಯದಲ್ಲಿ 'ಗ್ರೀವ'ದ ಭಾಗಗಳಾವುವೂ ಇರದೆ, ಪುಷ್ಪಬೋದಿಗೆಯನ್ನು ಮಾತ್ರ ಬಿಡಿಸಿರುವುದು ಕಂಡುಬರುತ್ತದೆ.

ಇಂತಹುದೇ ಸ್ತಂಭವನ್ನು ಪೀಠವಿಲ್ಲದೆ ರಚಿಸಿದಾಗ, ಅದಕ್ಕೆ 'ಚಿತ್ರಸ್ಕಂಭ'ವೆಂದು ಹೆಸರು.[20] ಇದು 'ಪದ್ಮಕಾಂತ' ಸ್ತಂಭವಿಧದ ಒಂದು ಉಪಪ್ರಭೇದವೆಂಬುದು ಇಲ್ಲಿ ಸ್ಪಷ್ಟವಾಗಿದೆ. ಈ ರೀತಿಯ ಚಿತ್ರಸ್ಕಂಭವನ್ನು ಬೆಂಗಳೂರಿನ ಚೊಕ್ಕನಾಥ ದೇವಾಲಯ ಮತ್ತು ತಾವರೆಕೆರೆಯ ಸೋಮೇಶ್ವರ ದೇವಾಲಯಗಳಲ್ಲಿ ಕಾಣಬಹುದು. ಇವುಗಳಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಿಲ್ಲವಾದರೂ ಪೀಠವಿಲ್ಲದೆ ರಚಿಸಿರುವುದರಿಂದ ಮತ್ತು ಇದು ಬೇರೆಲ್ಲ ರೀತಿಯಲ್ಲಿ ಪದ್ಮಕಾಂತಸ್ತಂಭವನ್ನು ಹೋಲುವುದರಿಂದ ಇದನ್ನು ಚಿತ್ರಸ್ಕಂಭ ರೀತಿಯ ಸ್ತಂಭವೆಂದೇ ಹೇಳಬಹುದಾಗಿದೆ. ಚಿದಂಬರಂನ ಸಾವಿರ ಸ್ತಂಭಗಳ ಮಂಟಪದ ಕಂಬಗಳು, ಬಳ್ಳಿಗಳಿಂದ ಕೂಡಿದ ಚಿತ್ರಪಟ್ಟಿಕೆಗಳು ಕುಡ್ಮಲಗಳಿಂದ ಕೂಡಿ ಚಿತ್ರಸ್ಕಂಭದಂತಿವೆ.[21]

---

19. ತನ್ಮೂಲೇ ಚಾಸನಂ ಕುರ್ಯಾತ್ಪಾದುಕಂ ವಾ ಸಪಾಂಬುಜಂ(ಜೇನ) ।
ಮೂಲಾಗ್ರೇ ಚಿತ್ರಸಂಯುಕ್ತಮಗ್ರಾಂತೇ ಮುಕುಲಾನ್ವಿತಂ ॥
ತನ್ಮೂಲೇ ಪಾಲಿಕಾಹಂ(ಕಾಹಿ) ಸ್ಯಾದ್ಯಥಾ ಶೋಭಂ ತು ಕಾರಯೇತ್ ।
ಅಂತರೇ ಚಿತ್ರಪಟ್ಟಂ ಸ್ಯಾತ್ಪರಿತೋ ದ್ವ್ಯಾಂಗುಲೇನ ಚ ॥
ಪತ್ರಾದಿರತ್ನಪುಷ್ಪೈಲಶ್ಚ ಏತತ್ಪಟ್ಟೈಲಶ್ಚ ಭೂಷಿತಂ ।
ಮಧ್ಯಾಗ್ರೇ ಪದ್ಮಪತ್ರಾದಿ ಊರ್ಧ್ವಾ(ಮೂಲಾ)ಧೋಗ್ರಂ(ಗ್ರೇ)ತು ಕುಡ್ಮಲಂ॥
ಮೂಲವಚ್ಚಾಗ್ರಮಗ್ರೇತು ಚಾಗ್ರಾಥಃ ಕುಡ್ಮಲಾನ್ವಿತಂ ।
ಸರ್ವಾಲಂಕಾರ ಸಂಯುಕ್ತಂ ಪದ್ಮಕಾಂತಮಿತಿಸ್ಮೃತಂ ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೧೬-೧೯

20. ಮೂಲೇ ವಿನಾಸನ ಸ್ತಂಭಂ ಚಿತ್ರಕ (ಸ್ಕ)ಂಭಮುದೀರಿತಂ ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೨೦

21. ಇದನ್ನು 'ಚಿತ್ರಖಂಡ'ವೆಂದು ಗುರುತಿಸಲಾಗಿದೆ– ನೋಡಿ : *Encyclopaedia of Indian Architecture–South India–Lower Dravida Desa*, p. 299.

ಸಂಯೋಗಸ್ತಂಭ : ವಿಜಯನಗರ ಕಾಲದ ಕೆಲವು ದೇವಾಲಯಗಳಲ್ಲಿ ಕಾಣಬರುವ ಒಂದು ವಿಶೇಷ ರೀತಿಯ ಸ್ತಂಭವೆಂದರೆ 'ಸಂಯೋಗಸ್ತಂಭ'. ಈ ಪ್ರಕಾರದಲ್ಲಿ, ಒಂದೇ ಪೀಠದ ಮೇಲೆ ಒಂದು ಪ್ರಧಾನ ಸ್ತಂಭವನ್ನೂ ಅದರೊಂದಿಗೆ ಸಣ್ಣ ಸಣ್ಣ ಸ್ತಂಭಗಳನ್ನೂ ರಚಿಸುತ್ತಾರೆ. ಒಟ್ಟಾರೆ ನೋಡಿದಾಗ ಅದು ಒಂದು ಸ್ತಂಭಸಮೂಹದಂತೆ ತೋರುತ್ತದೆ. ಈ ರೀತಿಯಾಗಿ ರಚಿಸುವ ಕಂಬವನ್ನು 'ಮಾನಸಾರ'ವು 'ಸಂಯೋಗ ಸ್ತಂಭ' ಎಂದು ಕರೆದಿದೆ.[22] ಈ ಸ್ತಂಭಗಳ ಮೂಲದಲ್ಲಿ ಪದ್ಮಪೀಠವನ್ನೂ ಅದರ ಮೇಲೆ ಪಾಲಿಕಾ ಅಥವಾ ಸಿಂಹದ ಪ್ರತಿಮೆಗಳನ್ನೂ ರಚಿಸಬೇಕೆಂದು 'ಮಾನಸಾರ' ದಲ್ಲಿ ಹೇಳಿದೆ. ಪ್ರಧಾನಸ್ತಂಭದೊಂದಿಗೆ ಇರುವ ಸಣ್ಣ ಸಣ್ಣಸ್ತಂಭಗಳಿಗೆ 'ಉಪಪಾದ'ಗಳೆಂದು ಹೆಸರು. ಈ ಉಪ ಪಾದಗಳು ಒಂದರಿಂದ ಎಂಟರವರೆಗೆ ಇರಬಹುದೆಂದು ಹೇಳಿ, ಅವುಗಳಿಗೆ ಸಂಖ್ಯೆಯ ಆಧಾರದ ಮೇಲೆ ಬೇರೆ ಬೇರೆ ಹೆಸರುಗಳನ್ನು ನೀಡಿದೆ. ಈ ಪ್ರಕಾರವಾಗಿ, ನಾಲ್ಕು ಉಪಪಾದಗಳಿಂದ ಕೂಡಿದ್ದುದು 'ಬ್ರಹ್ಮಕಾಂತ'; ಆರು ಉಪಪಾದಗಳಿಂದ ಕೂಡಿದ್ದುದು 'ಸ್ಕಂದಕಾಂತ' ; ಎಂಟು ಉಪಪಾದಗಳಿಂದ ಕೂಡಿದ್ದುದು 'ವಿಷ್ಣುಕಾಂತ' ಇತ್ಯಾದಿ. ಹಂಪೆಯ ವಿಠಲ ದೇವಾಲಯದ ಕಲ್ಯಾಣ ಮಂಟಪದಲ್ಲಿ ಇಂತಹ 'ಸಂಯೋಗಸ್ತಂಭ'ವನ್ನು ಕಾಣ ಬಹುದಾಗಿದೆ.[23] ಇದು ಎಂಟು ಉಪಪಾದಗಳಿಂದ ಕೂಡಿದ ವಿಷ್ಣುಕಾಂತ ರೀತಿಯದಾಗಿದ್ದು, ಮುಂಚಾಚಿದ ಪೀಠದ ಒಂದು ಭಾಗದಲ್ಲಿ ಸಿಂಹದ ಆಶ್ರಯದ ಮೇಲೆ ಸ್ತಂಭವು ನಿಂತಿದೆ. ಲೇಪಾಕ್ಷಿಯ ವೀರಭದ್ರ ದೇವಾಲ ಯದ ಕಲ್ಯಾಣಮಂಟಪ ಮತ್ತು ಬೆಂಗಳೂರಿನ ಕೋಟೆ ವೆಂಕಟರಮಣ ದೇವಾಲಯಗಳಲ್ಲೂ 'ಸಂಯೋಗಸ್ತಂಭ' ಗಳಿವೆ.

ಕೋಷ್ಠಸ್ತಂಭ : 'ಮೂಲಪಾದ'(ಮೂಲ ಸ್ತಂಭ)ದ ಕೋಷ್ಠಗಳನ್ನು ರಚಿಸಿ ಅಲಂಕರಿಸುವ ಸ್ತಂಭವೇ 'ಕೋಷ್ಠಸ್ತಂಭ'ವೆಂದು ಸ್ಥೂಲವಾಗಿ ಹೇಳ ಬಹುದು. "ಈ ವಿವಿಧ ಸ್ತಂಭದ ಮೇಲೆ ಕೋಷ್ಠ. ಅದರಲ್ಲಿ ನಾಸಿಯುಕ್ತ ಪಂಜರವು ಇರುವುದು. ಅದರ ಮೇಲೆ ಪ್ರಸ್ತರದ ಅಂಗಗಳು ಬಂದಿದ್ದು, ಪ್ರಸ್ತರದ ಮೇಲೆ ವೇದಿಯನ್ನು ರಚಿಸಿರುತ್ತಾರೆ. ಈ ವೇದಿಯ

---

22. ತತ್ಸಂಭಲಕ್ಷಣಂ ವಕ್ಷಯೋ ತುಂಗಾದೀಂಚೋಕ್ತವನ್ನಯೇತ್ ।
ಮೂಲಸ್ತಂಭ ವಿಶಾಲೇನ ತ್ರಿಪಾದಂ ವಾರ್ಧಮೇವ ಚ॥
ಸಂಯೋಗಸ್ತಂಭವಿಸ್ತಾರಂ ಯನ್ಮಾನೋರಸ್ಯ(ಂ) ಮಾನಯೇತ್ ।
ಬೋಧಿಕಾ(ಂ) ಫಲಕಾಂತಂ ಚ ಮೂಲದಂಡೇನ ಮಾನಯೇತ್ ॥
ಪಾಲಿಕಾದ್ಯಂಗಂ ಸರ್ವೇಷಾಮುಪದಂಡೇನ ಮಾನಯೇತ್ ।
ಬೋಧಿಕಾದೀನಿ ಸರ್ವಾಂಗಂ(ನಿ) ಪೂರ್ವವತ್ಪ್ರಕಲ್ಪಯೇತ್ ॥
ಉಪಪಾದಾನಿ ಸರ್ವೇಷಾಂ ಪೂರ್ವಪಾದೇತು ಯೋಜಯೇತ್ ।
ಉಪಪಾದಾ(ದಂ) ಮೂಲಪಾದಾಂತಮುಪದಂಡ ಸಮಂತಕಂ ॥
ತದ್ದಂಡಸ್ಯ ತ್ರಿಪಾದಂ ವಾ ದಂಡಾರ್ಧಂ ವಾಧವಾಂಶಕಂ ।
ಏಕೋಪಪಾದ ಸಂಯುಕ್ತಂ ದ್ವಿತ್ಯುಪಪಾದೇನ ಸಂಯುತಂ ॥
ಏವಂ ಕ್ರಮಮಿತಿ ಪ್ರೋಕ್ತಂ ಮೂಲೇ ಪದ್ಮಾಸನಾನ್ವಿತಂ ।
ವೇದೋಪಪಾದ ಸಂಯುಕ್ತಂ ಬ್ರಹ್ಮಕಾಂತಮಿರಿತಂ ॥
ಪಂಚೋಪಪಾದ ಸಂಯುಕ್ತಂ ಶಿವಕಾಂತಮಿತೀರಿತಂ ।
ಷಡೋಪಪಾದ ಸಂಯುಕ್ತಂ ಸ್ಕಂದಕಾಂತಮಿತಿಸ್ಮೃತಂ ॥
ಅಷ್ಟೋಪಪಾದ ಸಂಯುಕ್ತಂ ವಿಷ್ಣುಕಾಂತಮುದೀರಿತಂ ।
ಸರ್ವೇಷಾಂ ಪಾದಮೂಲೇತು ಪಾಲಿಕಾಂ ಚೋಪಪೀಠವತ್ ॥
ಕುರ್ಯಾತ್ಸಿಂಹಸ್ಯ ರೂಪಂ ವಾ ಪಾದಂ ಪತ್ರಾದಿಭೂಷಿತಂ॥
—ಮಾನಸಾರ, ಅಧ್ಯಾಯ ೧೫, ಶ್ಲೋಕ ೧೧೫-೧೨೩

23. ಇದನ್ನು 'ಸಂಯುತಸ್ತಂಭ'ವೆಂದು ಒಂದೆಡೆ ಗುರುತಿಸಲಾಗಿದೆ— ಪ್ರಿಯಮತಿ ಶ್ಯಾಮರಾವ್ : ವಿಜಯನಗರದ ಕಲೆ ಮತ್ತು ಸಾಹಿತ್ಯ, ಬೆಂಗಳೂರು, ೧೯೫೬, ಪು. ೭೦.

ಮೇಲೆ ನಾಸಿಯುಕ್ತ ಶಾಲಾಶಿಖರಗಳಿದ್ದು ಅದರ ಮೇಲೆ 'ಸ್ತೂಪಿ' ಇರುತ್ತದೆ. ಈ ಕೋಷ್ಠದ ಅಕ್ಕಪಕ್ಕಗಳಲ್ಲಿ ಸಣ್ಣ ಸ್ತಂಭಗಳಿದ್ದು (ಕ್ಷುದ್ರಪಾದ) ಅದನ್ನು ವಿಧವಿಧವಾಗಿ ಬಿಡಿಸಿರುತ್ತಾರೆ ; ಈ ಕಂಬಗಳ ಮೇಲೆ ತೋರಣವನ್ನು ರಚಿಸಬಹುದು ; ಆದರೆ ಬೋದಿಗೆ ಇರುವುದಿಲ್ಲ. 'ಮೂಲಪಾದ'ವು ಮೇಲ್ಭಾಗದಲ್ಲಿ, ಹಿಂದೆ ಹೇಳಿರುವಂತೆಯೇ, ಎಲ್ಲ ಅಂಗಗಳಿಂದಲೂ ಕೂಡಿ ಅಲಂಕೃತಗೊಂಡಿದ್ದು ಅಂತ್ಯದಲ್ಲಿ ಬೋದಿಗೆ ಇರುತ್ತದೆ."[24]

ಈ ರೀತಿಯಾಗಿರುವ ರಚನೆಯನ್ನು ಬೇಲೂರಿನ ಚನ್ನಕೇಶವ ದೇವಾಲಯದ ನವರಂಗದಲ್ಲಿರುವ 'ನರಸಿಂಹ ಸ್ತಂಭ'ದಲ್ಲಿ ಕಾಣಬಹುದು. ಈ ಕಂಬವು ವೃತ್ತಾಕಾರವಲ್ಲಿದೆ. ವಲ್ಲಿಗಳಿಂದ ಅಲಂಕೃತಗೊಂಡ ಪೀಠವಿದ್ದು, ಅದರ ಮೇಲೆ ಪಟ್ಟಿಗಳಿಂದಾದ ಚೌಕಟ್ಟಿನೊಳಗೆ ಶಿಲ್ಪಗಳಿವೆ. ಇದರ ಮೇಲೆ 'ಪಾದ'ವನ್ನು ಬಿಡಿಸಿದ್ದು, ಅದರೊಳಗೆ ಮೂರು ಕೋಷ್ಠಗಳನ್ನು ರಚಿಸಿ ಕೋಷ್ಠವು ಉತ್ತರಭಾರತ ರೀತಿಯ ಶಿಖರವನ್ನು ಹೊಂದಿದೆ. ಇದರ ಮೇಲೆ ಕೆಳಗಿನಿಂದ ಮೇಲಕ್ಕೆ ಒಂದರ ಮೇಲೊಂದರಂತೆ ಸಾಲು ಕೋಷ್ಠಗಳನ್ನೇ ರಚಿಸಿದ್ದಾರೆ. ಈ ಕೋಷ್ಠಗಳಿಗೆ ಅಕ್ಕಪಕ್ಕದಲ್ಲಿ ಸಣ್ಣ ಕಂಬಗಳನ್ನಿಟ್ಟು ಅದರ ಮೇಲೆ ನಾಸಿಯುಕ್ತ ಶಾಲಾಶಿಖರದ ಪ್ರತಿಕೃತಿ ಇವೆ. (ಕೋಷ್ಠಗಳಲ್ಲಿ ಬಿಂಬಗಳಿವೆ). ಕೋಷ್ಠದ ಪಕ್ಕಗಳ ಕ್ಷುದ್ರಪಾದಗಳು ಸೇರುವಂತೆ ಮೇಲೆ ಕಪೋತ, ವಾಜನ ಪ್ರತಿಮುಖ ಇತ್ಯಾದಿಗಳಿದ್ದು, ವೇದಿಯ ಮೇಲೆ ಕೋಷ್ಠವನ್ನು ರಚಿಸಿದ್ದಾರೆ. ಇಂತಹ ಆರುಸಾಲು ಕೋಷ್ಠಗಳನ್ನು ರಚಿಸಿದ್ದು, ಸುತ್ತಲೂ ಇದೇ ರೀತಿ ಇದೆ. ಮೂಲಸ್ತಂಭದ ಮೇಲೆ 'ತಾಟಿಕಾ' ಇದ್ದು, 'ಮಂಡಿ'ಯ ಭಾಗದಲ್ಲೂ ಶಿಲ್ಪಗಳಿವೆ. ಇದರ ಹೊಯ್ಸಳ ರೀತಿಯ ಮಣಿಮಾಲೆಗಳಿಂದ ಅಲಂಕೃತವಾದ ಫಲಕವಿದೆ. ಶಿಲ್ಪಗಳಿಂದ ಕೂಡಿರುವ 'ವೀರಕಂಠ'ವಿದ್ದು, ಅದರ ಮೇಲೆ 'ಚಿತ್ರ ಬೋದಿಗೆ'ಯನ್ನು ರಚಿಸಿದ್ದಾರೆ.

'ಮಾನಸಾರ'ದ ಕೋಷ್ಠಸ್ತಂಭದ ವಿವರಣೆಗೆ ಈ ರೂಪ ಹತ್ತಿರವಾಗಿರುವುದಾದರೂ ಅದು ತನ್ನ ಹೊಯ್ಸಳಶೈಲಿಯನ್ನು ಬಿಟ್ಟುಕೊಟ್ಟಿಲ್ಲ. ಪ್ರತ್ಯೇಕವಾದ ಸಣ್ಣ ಸಣ್ಣ ಗೂಡುಗಳಲ್ಲಿ ಹಂತಹಂತವಾಗಿ ಮೇಲೇರುವ ಶಿಖರದ ರೀತಿಯನ್ನೇ ಇಲ್ಲಿಯೂ ಅನುಸರಿಸಲಾಗಿದೆ. ಸಣ್ಣ ಸಣ್ಣ ಗೂಡುಗಳು, ಅತಿಯೆಂಬಷ್ಟು ಕುಸುರಿ ಕೆಲಸಗಳಿಂದ ಇದು ತನ್ನ 'ಹೊಯ್ಸಳತೆ'ಯನ್ನು ಸಾರುತ್ತಿದೆ. "ಪೊಸ ಚಿಗುರು ಹಳೆಬೇರು ಕೂಡಿರಲು ಮರ ಸೊಬಗು" ಎಂಬಂತೆ ಈ ಕಂಬವು ಶಾಸ್ತ್ರದ ಹಿನ್ನೆಲೆಯಲ್ಲಿ ತನ್ನತನವನ್ನು ಉಳಿಸಿಕೊಂಡಿದೆ.

ಈ ರೀತಿಯ ಸ್ತಂಭಗಳನ್ನು ಕರ್ನಾಟಕದಲ್ಲಿ ಗದಗ್‌ನ ಸರಸ್ವತಿ ದೇವಾಲಯದ ಮುಖಮಂಟಪದಲ್ಲೂ ಹಂಪೆಯ ವಿಠಲ ದೇವಾಲಯದ ಕಲ್ಯಾಣಮಂಟಪದಲ್ಲೂ ಕಾಣಬಹುದು. ಗದಗ್‌ನ ಸರಸ್ವತಿ ದೇವಾಲಯದ ಸ್ತಂಭವು ಮೇಲೆ ಹೇಳಿದ ಬೇಲೂರಿನ 'ನರಸಿಂಹ ಸ್ತಂಭ'ಕ್ಕೆ ಮಾದರಿಯಾಗಿ ದೊರೆತಿರಬಹುದು. ಇಷ್ಟೇ ಅಲ್ಲದೆ, ತಮಿಳುನಾಡಿನಲ್ಲೂ ಈ ರೀತಿಯ ಸ್ತಂಭಗಳನ್ನು ಗುರುತಿಸಬಹುದು. ತಮಿಳುನಾಡಿನಲ್ಲಿ, ದಾರಾಶುರಂನ ಐರಾವತೀಶ್ವರ ದೇವಾಲಯದ ಮುಖಮಂಟಪ ಮತ್ತು ಮೂಲಿಕಾಗಳಲ್ಲಿ (ಕ್ರಿ. ಶ. ಸು. ೧೧೪೬-೧೧೭೨) ಮತ್ತು ಚಿದಂಬರಂನ ನಟರಾಜ ದೇವಾಲಯದ ಸಮೂಹದಲ್ಲಿರುವ ಪಾಂಡ್ಯನಾಯಕ ದೇವಾಲಯದ (ಸು. ೧೩ನೇ ಶತಮಾನ) ಮಂಟಪದಲ್ಲಿ ಕೋಷ್ಠಸ್ತಂಭಗಳಿವೆ.[25] ಗದಗ ಮತ್ತು ಬೇಲೂರು ಸ್ತಂಭಗಳನ್ನು ಬಿಟ್ಟರೆ ಉಳಿದ ಯಾವ ಸ್ತಂಭಗಳಲ್ಲೂ ಕಂಬದ ಮೇಲಿನ ಭಾಗಗಳಾವುವೂ ಇಲ್ಲದೆ ಬೋದಿಗೆ ಮಾತ್ರವೇ ಇದೆ. ಈ ಎಲ್ಲ ಸ್ತಂಭಗಳಲ್ಲೂ ಭಿತ್ತಿಯ ಮೇಲೆ ಬರುವ ಕೋಷ್ಠದ ರೂಪವನ್ನು ಪರಿಪೂರ್ಣವಾಗಿ ಕಾಣಬಹುದಾಗಿದೆ.

24. ಮಾನಸಾರ, ಅಧ್ಯಾಯ ೧೫. ಶ್ಲೋಕ, ೪೩-೬೭

25. ತಮಿಳುನಾಡಿನ ಈ ಸ್ತಂಭಗಳನ್ನು ಕೆಲವು ವಿದ್ವಾಂಸರು 'ಚಿತ್ರಖಂಡ'ದ ಒಂದು ವಿಧವೆಂದು ಗುರುತಿಸಿದ್ದಾರೆ. ಆದರೆ 'ಚಿತ್ರಖಂಡ' ಸ್ತಂಭದ ರಚನೆಗಿಂತ ಇದು ಭಿನ್ನವಾಗಿದೆ. ಅಂತೆಯೇ, ಪಿ. ಕೆ. ಆಚಾರ್ಯರವರು ತಮ್ಮ Encyclopaedia of Hindu Architecture (p. 534) ಗ್ರಂಥದಲ್ಲಿ, ಇದು 'ಕುಡ್ಯಸ್ತಂಭ'ವೆಂದು ಹೇಳಿದ್ದಾರೆ. ಆದರೆ ಈ ರೀತಿಯ 'ಕೋಷ್ಠಸ್ತಂಭ'ಗಳು ಭಿತ್ತಿಯ ಮೇಲೆ ಕಂಡಬಂದಿಲ್ಲ.

'ಮಾನಸಾರ'ದಲ್ಲಿ ಹೇಳಿರುವ ರೂಪವನ್ನು ಇವು ಬಹುಪಾಲು ಹೋಲುತ್ತಿರುವುದರಿಂದ ಇವುಗಳನ್ನು 'ಕೋಷ್ಠಸ್ತಂಭ'ವೆಂದು ಗುರುತಿಸಲು ಇಲ್ಲಿ ಯತ್ನಿಸಲಾಗಿದೆ.

ಹೀಗೆ, ಮಾನಸಾರದಲ್ಲಿ ಉಕ್ತವಾಗಿರುವ ಸ್ತಂಭ ಪ್ರಭೇದಗಳಲ್ಲಿ, ಪದ್ಮಕಾಂತ–ಚಿತ್ರಸ್ಕಂಭ, ಸಂಯೋಗ ಸ್ತಂಭ ಮತ್ತು ಕೋಷ್ಠಸ್ತಂಭ–ಈ ಪ್ರಭೇದಗಳನ್ನು ಈಗ ಇರುವ ದೇವಾಲಯಗಳಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಇದು ಒಂದು ಪ್ರಯತ್ನವಷ್ಟೇ ಹೊರತು ಇದೇ ಕೊನೆಯಲ್ಲ ; ಇದು ಮೊದಲಂತೂ ಅಲ್ಲವೇ ಅಲ್ಲ. ಈ ಅಧ್ಯಯನಕ್ಕಾಗಿ ಪಿ. ಕೆ. ಆಚಾರ್ಯರವರ *An Encyclopaedia of Hindu Architecture, Manasara : On Architecture and Sculpture* ಮತ್ತು ಅವರಿಂದಲೇ ಆಂಗ್ಲಭಾಷೆಗೆ ಅನುವಾದಿತವಾಗಿರುವ *Manasara : Translated from Original Text*—ಈ ಕೃತಿಗಳನ್ನು ಮುಖ್ಯವಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ, 'ಮಯಮತ'ದ ಸಂಸ್ಕೃತ ಮತ್ತು ಅನುವಾದಿತ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. 'ಮಾನಸಾರ' ಮತ್ತಿತರ ಶಾಸ್ತ್ರಗ್ರಂಥಗಳ ಬಗ್ಗೆ ಆಳವಾದ ಅಧ್ಯಯನ ಮಾಡಿರುವ ಪಿ. ಕೆ. ಆಚಾರ್ಯರವರು 'ಮಾನಸಾರ'ವನ್ನು "A standard work on Architecture" ಎಂದು ಹೇಳಿ, ಅದರ ಕಾಲವನ್ನು ಕ್ರಿ.ಶ. ೫೦೦–೭೦೦ಕ್ಕಿಂತ ಹೆಚ್ಚಿಗೆ ಇರಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಇದರ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿರಬಹುದಾದರೂ, ಕಾಲಕ್ರಮೇಣ ಹೊಸ ಹೊಸ ವಿಷಯಗಳು ಅದಕ್ಕೆ ಸೇರ್ಪಡೆಯಾಗಿರಬಹುದೇನೋ ಎಂಬ ಅನುಮಾನದೊಂದಿಗೆ ಅವರು ಹೇಳಿರುವ ಕಾಲವನ್ನೇ ಸದ್ಯಕ್ಕೆ ಒಪ್ಪಿಕೊಂಡಿರುತ್ತೇನೆ. ಈ ಗ್ರಂಥದಲ್ಲಿ ಹೇಳಿರುವ ವಿಷಯಗಳನ್ನು ಈಗ ಇರುವ ದೇವಾಲಯಗಳೊಂದಿಗೆ ಹೋಲಿಸಿ ಅರ್ಥೈಸುತ್ತಾ ಹೋದಲ್ಲಿ ಅದರಲ್ಲಿ ಸೇರ್ಪಡೆಯಾಗಿರಬಹುದಾದ ಭಾಗಗಳು ಯಾವುವೆಂಬುದು ತಾನೇ ತಾನಾಗಿ ಸ್ಪಷ್ಟವಾಗಬಹುದು.

ಇಷ್ಟೇ ಅಲ್ಲದೆ, ಹೀಗೆ ಗಮನಿಸುತ್ತಾ ಹೋದರೆ, ನಮ್ಮ ನಾಡಿನಲ್ಲಿರುವ ಎಲ್ಲ ರೀತಿಯ ಸ್ತಂಭಗಳಿಗೆ ಸರಿಯಾದ ಶಾಸ್ತ್ರೋಕ್ತ ಪ್ರಭೇದದ ಹೆಸರು ದೊರೆಯಬಹುದು. ಇದರಿಂದ ಪ್ರತಿಯೊಂದು ಶತಮಾನದಲ್ಲಿಯ ವಾಸ್ತುಶಿಲ್ಪ ಶೈಲಿಯನ್ನು ಗ್ರಂಥಗಳ ಹಿನ್ನೆಲೆಯಲ್ಲಿ ನೋಡಲು ಸಾಧ್ಯವಾಗುವುದರೊಂದಿಗೆ ಸ್ತಂಭದ ಪ್ರಭೇದದ ಆಧಾರದಿಂದ ಕಂಬದ ಕಾಲನ್ನು ನಿರ್ಧರಿಸಲು ಸಾಧ್ಯವಾಗಬಹುದು. ಇಂತಹ ಅಧ್ಯಯನಗಳಿಂದ ಒಂದು ಕಾಲದಲ್ಲಿ ಒಂದು ಪ್ರದೇಶದಲ್ಲಿ ಬಳಕೆಯಲ್ಲಿದ್ದ ಶಾಸ್ತ್ರಗ್ರಂಥಗಳನ್ನೂ ಗುರುತಿಸಲು ಸಾಧ್ಯವಿದೆ.*

## ಆಧಾರ ಗ್ರಂಥಗಳು


1. P. K. Acharya : i) *Manasara—On Architecture and Sculpture—Sanskrit Text with Critical Notes* (Manasara Series, Vol. III), New Delhi, 1979 (Second Edition)

   ii) *Manasara—Translated from Original Text* (Manasara Series)


---

* ಈ ಲೇಖನವನ್ನು ಸಿದ್ಧಪಡಿಸುವಲ್ಲಿ ನನಗೆ ಸಹಾಯ ಮಾಡಿದ ಶ್ರೀಯುತರಾದ ದೇವರಕೊಂಡಾರೆಡ್ಡಿ, ಪಿ. ವಿ. ಕೃಷ್ಣಮೂರ್ತಿ, ಎಂ. ಕೃಷ್ಣಮೂರ್ತಿ ಮತ್ತು ಶ್ರೀಮತಿ ಕೆ. ವಸಂತಲಕ್ಷ್ಮಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

iii) *Indian Architecture according to Manasara-Shilpasastra* (Manasara Series, Vol. II), New Delhi, 1981 (Second Edition)

iv) *An Encyclopaedia of Hindu Architecture* (Manasara Series, Vol. VII), New Delhi, 1979 (Second Edition)

2. *Mayamata*

3. Bruno Dayens (Tr.) : *An Indian Treatise on Housing Architecture and Indian Iconography*, New Delhi, 1985

4. Michael W. Meister and M. A. Dhaky (Ed.) : *Encyclopaedia of Indian Temple Architecture* (Vol. I, Part 1 & 2), Delhi, 1986

ಆರ್. ಆರ್. ಜೋಶಿ

# ಒಂದು ಅಪೂರ್ವ ಕಂಚಿನ ಮಹೇಶ್ವರಮೂರ್ತಿ

ಇತ್ತೀಚೆಗೆ (ಆಗಸ್ಟ್ ೨೭, ೧೯೮೭ ಶ್ರಾವಣ ಮಾಸದ ಮೊದಲನೇ ಸೋಮವಾರ) ಧಾರವಾಡ ಜಿಲ್ಲೆ, ನವಲಗುಂದ ತಾಲ್ಲೂಕಿನ ತುಪ್ಪದಕುರಹಟ್ಟಿಯಲ್ಲಿ ದೊರೆತ ಕಂಚಿನ ಮಹೇಶ್ವರಮೂರ್ತಿಯಿಂದಾಗಿ ಇದೀಗ ಈ ಹಳ್ಳಿ ಪ್ರಸಿದ್ಧವಾಗಿದೆ. ತುಪ್ಪದಕುರಹಟ್ಟಿಯು ನವಲಗುಂದದಿಂದ ಗದಗಿಗೆ ಹೋಗುವ ಹೆದ್ದಾರಿ ನಡುವೆ ಸುಮಾರು ೧೮ ಕಿ.ಮೀ. ಪೂರ್ವದಿಕ್ಕಿನಲ್ಲಿದೆ. ತುಪ್ಪದ ಕುರಹಟ್ಟಿಯ ಬಳಿ ಹಂದಿಗನಹಳ್ಳಿ ಮತ್ತು ಪಿಂಜರಹಳ್ಳಿ ಕೂಡುತ್ತವೆ. ನವಲಗುಂದ ತಾಲ್ಲೂಕಿನಲ್ಲಿ ಇನ್ನೂ ಎರಡು ಕುರಹಟ್ಟಿಗಳಿವೆ. ಒಂದು ಅರೆಕುರಹಟ್ಟಿ (ಈ ಗ್ರಾಮದ ಪ್ರಾಚೀನ ಹೆಸರು ಹಿರಿಯಕುರಹಟ್ಟಿ), ಇನ್ನೊಂದು ಕುರಹಟ್ಟಿ (ಈ ಗ್ರಾಮದ ಪ್ರಾಚೀನ ಹೆಸರು ಕಾರಣಗುರಿಪಟ್ಟಿ). ಬಹುಶಃ ಒಂದೇ ಪ್ರದೇಶದಲ್ಲಿ ಬರುವ ಈ ಮೂರು ಕುರಹಟ್ಟಿಗಳನ್ನು ಪ್ರತ್ಯೇಕವಾಗಿ ಗುರುತಿಸಲು ಈ ಕುರಹಟ್ಟಿಯನ್ನು ತುಪ್ಪದಕುರಹಟ್ಟಿ ಎಂದು ಕರೆದಿರಬಹುದು. ಈ ಗ್ರಾಮದ ಪ್ರಾಚೀನ ಹೆಸರು ಇನ್ನೂ ತಿಳಿದುಬಂದಿಲ್ಲ. ಗ್ರಾಮದ ಹೆಸರೇ ಸೂಚಿಸುವಂತೆ, ಇಲ್ಲಿ ಪಶುಸಂಗೋಪನೆ ಹೆಚ್ಚಾಗಿದ್ದು, ಹೆಚ್ಚು ತುಪ್ಪದ ಉತ್ಪಾದನೆಯಿಂದಾಗಿ ಈ ಗ್ರಾಮಕ್ಕೆ ತುಪ್ಪದಕುರಹಟ್ಟಿ ಎಂದು ಕರೆಯಲಾರಂಭಿಸಿರಬಹುದು.

ಐತಿಹಾಸಿಕವಾಗಿ ಈ ಗ್ರಾಮವು ಬೆಳ್ವಲ ಮುನ್ನೂರ ಒಂದು ಭಾಗವಾದ ನವಿಲುಗುಂದ ನಲವತ್ತರ (ಈಗಿನ ನವಲಗುಂದ) ವಿಭಾಗದಲ್ಲಿ ಇತ್ತು. ಈ ಗ್ರಾಮದಲ್ಲಿ ಗುಡಿಗಳು, ಹಲವು ಶಾಸನಗಳು, ವೀರಗಲ್ಲುಗಳಿವೆ. ಹನುಮಂತದೇವರ ಗುಡಿ ಎದುರಿನ ತೃಟಿತ–ಅಸ್ಪಷ್ಟ ಶಾಸನವೇ ಅತ್ಯಂತ ಪ್ರಾಚೀನ ವಾದುದು ; ಇದು ರಾಷ್ಟ್ರಕೂಟರ ಕಾಲದ ಶಾಸನ ವಾಗಿದೆ. ಇದೇ ಗುಡಿಯ ಎದುರಿಗಿರುವ ಇನ್ನೊಂದು ಶಾಸನವು ಸಂಪೂರ್ಣ ಅಸ್ಪಷ್ಟವಾಗಿದ್ದು, ಸುಮಾರು ೧೧–೧೨ನೇ ಶತಮಾನಕ್ಕೆ ಸೇರಿದುದಾಗಿದೆ. ಇದೇ ಕಾಲಕ್ಕೆ ಸೇರಿದ ಇನ್ನೊಂದು ಸಂಪೂರ್ಣ ಅಸ್ಪಷ್ಟ ಶಾಸನವು ಶಂಕರಲಿಂಗನ ಗುಡಿ ಎದುರು ಇದೆ. ಇಲ್ಲಿರುವ ಶೈವ ದೇವಾಲಯಗಳಲ್ಲಿ ಶಂಕರಲಿಂಗ ಗುಡಿ, ಕಲ್ಲಪ್ಪನ ಗುಡಿ ಪ್ರಧಾನವಾದವುಗಳು.

ಹಾಳುಬಿದ್ದ ಕಲ್ಲಪ್ಪನ ಗುಡಿ : ಕೆರೆದಂಡೆಯ ಮೇಲೆ ಬಯಲಿನಲ್ಲಿ ಈಶ್ವರಲಿಂಗವಿದ್ದು ನಿತ್ಯ ಪೂಜೆ ಗೊಳ್ಳುತ್ತಾನೆ. ಈ ಸ್ಥಳವನ್ನು ಹಾಳುಬಿದ್ದ ಕಲ್ಲಪ್ಪನ ಗುಡಿ ಎಂದೆನ್ನುತ್ತಾರೆ. ಇಲ್ಲಿ ಭಗ್ನಗೊಂಡ ವೀರಭದ್ರನ ಕೂತ ನಗ್ನಮೂರ್ತಿ ಇದೆ. ವೀರಭದ್ರನ ಕೂದಲು ಸುತ್ತಲೂ ಹರಡಿಕೊಂಡಿದೆ ಮತ್ತು ಜಟೆಯ ಮೇಲೆ ಹೆಡೆ ಬಿಚ್ಚಿದ ನಾಗವಿದೆ. ಕಿವಿಯಲ್ಲಿ ನಾಗವೋಲೆಗಳಿವೆ. ಕೊರಳಲ್ಲಿ ರುದ್ರಾಕ್ಷಿಮಾಲೆ ಇದೆ. ರುಂಡಮಾಲೆಯ ಯಜ್ಞೋಪವೀತವಿದೆ. ನಾಲ್ಕು ಕೈಗಳಲ್ಲಿ ಡಮರು, ತ್ರಿಶೂಲ, ಕಪಾಲ, ಖಡ್ಗಗಳಿವೆ. ನಾಗ ಉದರಬಂಧನ, ನಾಗ ತೋಳಬಂಧಗಳಿವೆ. ಒಟ್ಟಿನಲ್ಲಿ, ಈ ವೀರಭದ್ರ ಮೂರ್ತಿಯು ಸರ್ಪಾಭರಣಗಳಿಂದ ಅಲಂಕೃತಗೊಂಡಿದೆ. ಇದು ೧೨ ಮತ್ತು ೧೩ನೇ ಶತಮಾನಕ್ಕೆ ಸೇರಿದುದೆಂದು ಹೇಳಬಹುದು.

ಶಂಕರಲಿಂಗನ ಗುಡಿ : ಇದು ೧೨-೧೩ನೇ ಶತಮಾನದ ಕಲ್ಯಾಣದ ಚಾಲುಕ್ಯರ ಕಾಲದ ಗುಡಿ. ಇದರಲ್ಲಿ ಅಂತರಾಳ ಮತ್ತು ಗರ್ಭಗುಡಿಗಳಿದ್ದು, ಮುಂದಿನ ಮಂಟಪವನ್ನು ಸಂಪೂರ್ಣ ನವೀಕರಣಗೊಳಿಸಿದ್ದಾರೆ. (ಇದು ಗುಡಿಯ ಹಿಂದಿನ ಗೋಡೆಯ ಮೇಲಿರುವ "ಶಂಕರಲಿಂಗ ಗುಡಿಯ ದುರಸ್ತಿ ಮಾಡಿಸಿದ್ದು ಶಕೆ. ೧೮೮೧ ನಂದನ ಸಂ||" ಎಂಬ ಬರಹದಿಂದ ತಿಳಿದುಬರುತ್ತದೆ).

ಅಂತರಾಳ ಗೋಡೆಯ ಹೊರಗೆ ಎಡ ಬಲಗಳಲ್ಲಿ ಎರಡು ದೊಡ್ಡ ದೇವಕೊಷ್ಟಗಳಿವೆ. ಎಡಭಾಗದ ಕೊಷ್ಟದಲ್ಲಿ ಅಕ್ಕಮಹಾದೇವಿ ಮೂರ್ತಿಯನ್ನು ಇತ್ತೀಚೆಗೆ ಸ್ಥಾಪಿಸಿದ್ದಾರೆ. ದೊಡ್ಡದಾದ ನಕ್ಷತ್ರಾಕಾರದ ಜಾಲಂಧ್ರಗಳಿವೆ. ಗರ್ಭಗುಡಿಯ ದ್ವಾರಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ಗರ್ಭಗುಡಿಯ ಮುಂದಿನ ಚಂದ್ರಶಿಲೆಯನ್ನು ಗುಡಿ ಹಿಂಭಾಗದ ಗೋಡೆಯಲ್ಲಿ ಕೂಡಿಸಿದ್ದಾರೆ. ಅಂತರಾಳದಲ್ಲಿ ದಕ್ಷಬ್ರಹ್ಮನ ಮೂರ್ತಿ ಇದೆ. ಹೊರಭಾಗದ ಎಡ ಬಲ ಗೋಡೆಯ ಮಾಡದಲ್ಲಿ ಎರಡು ಮಹಾವೀರರ ಮೂರ್ತಿಗಳು ಇದ್ದವು ಎಂದು ಹೇಳುತ್ತಾರೆ. ಆದರೆ ಈಗ ಮಾತ್ರ ಒಂದೇ ಮೂರ್ತಿ ಇದೆ. ಸುಮಾರು ೮೪ ಸೆಂ.ಮೀ. ಎತ್ತರವಿದೆ. ಗುಡಿಯ ಮುಂದೆ ಭಗ್ನಗೊಂಡ ಲಿಂಗ, ಸಪ್ತಮಾತೃಕೆಯರ ಫಲಕ, ಗಣಪತಿ, ಪಾದುಕೆ ಹಾಗೂ ಒಂದು ಶಾಸನಗಳಿವೆ.

ಇದನ್ನೆಲ್ಲ ವಿವರವಾಗಿ ಅಭ್ಯಾಸ ಮಾಡುವುದು ಅಗತ್ಯವಾಗಿದ್ದರೂ ಪ್ರಸ್ತುತ ಪ್ರಬಂಧದಲ್ಲಿ ಅಲ್ಲಿ ಈಚೆಗೆ ಪತ್ತೆಯಾದ ಒಂದು ಅಪೂರ್ವ ಮೂರ್ತಿಶಿಲ್ಪದ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ.

ಕಂಚಿನ ಮಹೇಶ್ವರಮೂರ್ತಿ : ತುಪ್ಪದಕುರಹಟ್ಟಿಯ ಭೂಸನೂರಮಠದ ಹಿತ್ತಲಲ್ಲಿ ಸತ್ತ ಆಕಳನ್ನು ಹೂಳುವಾಗ ಈ ಅಪೂರ್ವ ಕಂಚಿನ ನಾಲ್ಕು ಮುಖಗಳುಳ್ಳ ಪದ್ಮಾಸೀನನಾದ ಈಶ್ವರಮೂರ್ತಿ ಸಿಕ್ಕಿತು. ಮದಸ್ಮಿತವಾದ ಈ ಮೂರ್ತಿಯ ನಾಲ್ಕು ಮುಖಗಳು ಯಾರನ್ನೂ ಆಕರ್ಷಿಸದೆ ಬಿಡಲಾರವು. ಕಲಾಸೌಂದರ್ಯಯುತವಾದ ಈ ಮೂರ್ತಿಯನ್ನು ನೋಡಿದವರು ಮುಗ್ಧರಾಗುತ್ತಾರೆ. ಇದರ ಕಲೆಯೇ ಒಂದು ವೈಶಿಷ್ಟ್ಯಪೂರ್ಣವಾಗಿದೆ. ಉತ್ತರಕರ್ನಾಟಕದಲ್ಲಿ ಮತ್ತು ಈ ಭಾಗದಲ್ಲಿ ಇಷ್ಟು ದೊಡ್ಡದಾದ ಲೋಹದ ಮೂರ್ತಿ ಸಿಕ್ಕಿದ್ದು ಇದೇ ಪ್ರಥಮಬಾರಿಗೆ ಎಂದು ಹೇಳಬಹುದು. ಇಲ್ಲಿಯ ಸ್ಥಳೀಕರು ಈ ಮೂರ್ತಿಯನ್ನು ಚತುರ್ಮುಖ ಬ್ರಹ್ಮನೆಂದು ಅನ್ನುತ್ತಾರೆ. ಆದರೆ ಈ ಮೂರ್ತಿಯ ನಾಲ್ಕು ಮುಖಗಳು, ಜಟೆ, ಚಂದ್ರ, ಗಂಗೆ, ಸರ್ಪಾಭರಣಗಳಿಂದ ಈ ಮೂರ್ತಿಯು ಮಹೇಶ್ವರನ ಮೂರ್ತಿ ಅಥವಾ ಚತುರ್ಮುಖ ಈಶ್ವರಮೂರ್ತಿ ಎಂದು ಖಚಿತವಾಗಿ ಹೇಳಬಹುದು.

ಚತುರ್ಮುಖ ಲಿಂಗದ ಮೂರ್ತಿಗಳ ಪೂಜೆಯು ಕಲ್ಯಾಣ ಚಾಲುಕ್ಯರ ಕಾಲದಿಂದ ಮತ್ತು ಚೋಳರ ಕಾಲದಿಂದ ಹೆಚ್ಚು ಪ್ರಚಲಿತ ಬಂದಿತ್ತೆಂದು ಐ. ಕೆ. ಶರ್ಮಾ ಅವರು ಅಭಿಪ್ರಾಯಪಟ್ಟಿದ್ದಾರೆ. ಲಿಂಗ ಮತ್ತು ಶಿವಮೂರ್ತಿಪೂಜೆಗಳು ಪಾಶುಪತರಲ್ಲಿಯೇ ಹೆಚ್ಚು ಪ್ರಚಲಿತದಲ್ಲಿದ್ದಿತೆಂದು ಇವರೇ ಅಭಿಪ್ರಾಯಪಟ್ಟಿದ್ದಾರೆ.

ಈ ತುಪ್ಪದಕುರಹಟ್ಟಿಯ ಮಹೇಶ್ವರಮೂರ್ತಿಯ ಮೇಲೆ ಇವರ ಪ್ರಭಾವ ಇದ್ದಿತೆಂದು ತೋರುತ್ತದೆ. ಏಕೆಂದರೆ ಈ ಗ್ರಾಮದ ಸಮೀಪವೇ ಅಂದರೆ ಆರು ಕಿ.ಮೀ. ದೂರದಲ್ಲಿ ಹೊಂಬಳ(ಪ್ರಾಚೀನ ಹೆಸರು ಪೊಂಬಲ, ಪೊಂಗುಲ)ವು ಕಾಳಾಮುಖ ಲಾಕುಳಶೈವರ ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಬಹುಶಃ ಈ ಪಂಥದ ಶೈವಾರಾಧನೆಯಲ್ಲಿ ಇದು ಪ್ರಮುಖಪಾತ್ರ ವಹಿಸಿದ್ದಿರಬೇಕು.

ಮೂರ್ತಿಯ ಶಿಲ್ಪಲಕ್ಷಣಗಳು : ಈ ಮೂರ್ತಿಯ ಎತ್ತರ : ೮೮ ಸೆಂ. ಮೀ., ಅಗಲ : ೫೪ ಸೆಂ. ಮೀ., ದಪ್ಪ : ೧೫ ಸೆಂ. ಮೀ. ಮತ್ತು ತೂಕ : ೧೨೫ ಕಿಲೋ ಇದೆ. ಪದ್ಮಾಸೀನವಾಗಿದೆ. ಮೂರು ಕೈ ಇಲ್ಲ. ಬಲಗೈಯಲ್ಲಿ(ಮುಂದಿನ) ಫಲವಿದೆ. ಸುಂದರವಾದ ನಾಲ್ಕು ನಗುಮುಖಗಳಿವೆ.

೧. ಮುಂಭಾಗದ ಎದುರಿನ ಮುಖ : ಕೊರಳಲ್ಲಿ ಸಾದಾ ಸರ, ಎರಡು ಮುತ್ತಿನಹಾರಗಳಿವೆ. ಕಿರೀಟದ ಹತ್ತಿರ ಪದಕವಿದೆ. ಕಿವಿಯಲ್ಲಿ ಹೆಡೆಬಿಚ್ಚಿದ ನಾಗರಹಾವಿನ ಕಿವಿಯೋಲೆ ಇದೆ (ಮುರಿದಿದೆ). ಕಿರೀಟದ ಪದಕದ ಮೇಲೆ ಗಂಗೆ ಇರುವಳು ಅಥವಾ ಪುಷ್ಪಗಳಿಂದ ಅಲಂಕೃತಗೊಂಡ (ಬಿಲ್ವಪತ್ರ) ಜಟೆ, ಎಡಭಾಗದ ಮತ್ತು ಎದುರಿನ ಮುಖದ ನಡುವೆ ಜಟೆಯ ಮೇಲೆ

ಸ್ತ್ರೀಯೋರ್ವಳು ಕೈ ಮುಗಿದು ನಿಂತಿದ್ದಾಳೆ. (ಬಹುಶಃ ಶಿವಭಕ್ತೆಯಾಗಿರಬಹುದು). ಅವಳ ಮೇಲೆ ಅಂದರೆ ಎಡ ಭಾಗದ ಮುಖದ ಕಿರೀಟದ ಮೇಲೆ ಅರ್ಧಚಂದ್ರನಿರುವನು.

೨. **ಎಡಭಾಗದ ಮುಖ :** ಈ ಮುಖದ ಹಣೆಯ ಮೇಲೆ ಬಲಭಾಗಕ್ಕೆ ಹೆಡೆಬಿಚ್ಚಿದ ಸುಂದರ ನಾಗನಿರುವನು. ಈ ಮುಖದ ಕೊರಳಲ್ಲಿ ಒಂದು ಸರ ಇದೆ. ಈ ಆಭರಣಗಳು ಎಡಭುಜದ ಮೇಲೆ ಇವೆ. ಹಣೆಯ ಮೇಲೆ ಪದಕವಿದೆ. ಈ ಪದಕದ ಮೇಲೆ ಜಕಣಿ ಚಿತ್ರವಿದೆ. ಎಡಭಾಗದ ಕಿವಿಯಲ್ಲಿ ಸುಂದರ ನಾಗಾಭರಣ, ದುಂಡಗಿನ ಕಿವಿಯೋಲೆಯೂ ಇದೆ.

೩. **ಬಲಭಾಗದ ಮುಖ :** ಈ ಕಿರೀಟ ಸ್ವಲ್ಪ ಬೇರೆ ಬಗೆಯದಾಗಿದೆ. ಉಳಿದ ಲಕ್ಷಣಗಳು ಎದುರಿನ ಮುಖದಂತೆ ಇದ್ದು, ಈ ಮುಖದ ಜಟೆಯು ಹೂಗಳಿಂದ ಅಲಂಕೃತವಾಗಿದೆ.

೪. **ಹಿಂಭಾಗದ ಮುಖ :** ಈ ಮುಖವು ಸುಂದರವಾಗಿದ್ದು, ಎಲ್ಲ ಆಭರಣಗಳೂ ಸ್ಪಷ್ಟ ಇವೆ. ಎರಡೂ ಕಿವಿಯಲ್ಲಿ ನಾಗಕಿವಿಯೋಲೆ, ದುಂಡಗಿನ ಕಿವಿಯೋಲೆಗಳಿವೆ. ಮುಂದಿನ ಮುಖದ ಕೊರಳೊಳಗಿನ ಹಾರಗಳು ಇಲ್ಲಿಯೂ ಇವೆ.

ಈ ನಾಲ್ಕೂ ಮುಖಗಳು ಶಿವನ ವಿವಿಧ ರೂಪಗಳನ್ನು ಪ್ರತಿನಿಧಿಸುತ್ತವೆ : ೧. ತತ್‌ಪುರುಷ, ೨. ಅಘೋರ, ೩. ವಾಮದೇವ, ೪. ಸದ್ಯೋಜಾತ.

**ಕೈಗಳು :** ೧. ಹಿಂದಿನ ಎಡಭಾಗದ ಮುಂಗೈ ಮುರಿದಿದೆ. ಈ ಕೈಮೇಲೆ ಹಾವಿನಬಾಲ ಮಾತ್ರವಿದೆ. ಪದಕದ ಸರವಿದೆ; ೨. ಹಿಂದಿನ ಭಾಗದ ಕೈ ಸಹಾ ಮೊಳಕೈವರೆಗೆ ಮುರಿದಿದೆ. ಆದರೆ ಈ ಕೈಮೇಲೆ ಹಾವಿನ ಬಾಲವಿಲ್ಲ (ಮುರಿದಿದೆ). ಪದಕದ ಸರವಿದೆ ; ೩. ಮುಂದಿನ ಎಡಗೈಯ ಮುಂಭಾಗ ಮುರಿದಿದೆ ; ೪. ಬಲಗೈ ಸಂಪೂರ್ಣವಾಗಿದ್ದು ಕೈಯಲ್ಲಿ ಫಲವಿದೆ. ಬೆರಳಲ್ಲಿ ಉಂಗುರವಿದೆ.

ಕಲಾತ್ಮಕವಾದ ಯಜ್ಞೋಪವೀತವಿದೆ. ಉದರಬಂಧ ಕಟಿಸೂತ್ರಗಳು ಗಮನಾರ್ಹವಾಗಿವೆ.

ಜಟೆಯು ಮೇಲೆ ಸುತ್ತಿಕೊಂಡು ಹೋಗಿದೆ. ಇದರ ಮೇಲೆ ಕಮಲವನ್ನು ತಿರುವಿ ಇಟ್ಟಹಾಗೆ ಇದೆ.

ಈ ಮೂರ್ತಿಶಿಲ್ಪವನ್ನು ಸೂಕ್ಷ್ಮವಾಗಿ ನೋಡಲಾಗಿ, ಈ ಮೂರ್ತಿಯ ಮೇಲೆ ಪ್ರಾದೇಶಿಕ ಪ್ರಭಾವವಿರುವಂತೆ ತೋರುತ್ತದೆ. ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿದ್ದರಿಂದ, ಆ ಕಾಲದ ಕಲ್ಯಾಣ ಚಾಲುಕ್ಯರ ಶಿಲ್ಪಶೈಲಿಯು ಸ್ಪಷ್ಟವಾಗಿದ್ದರಿಂದ ಆ ಕಾಲದ ಕಲ್ಯಾಣ ಚಾಲುಕ್ಯರ ಶಿಲ್ಪಶೈಲಿಯು ಸ್ಪಷ್ಟ ರೂಪ ತಾಳಿರುವ ಹಿನ್ನೆಲೆಯಲ್ಲಿ ಇದನ್ನೂ ಅಭ್ಯಸಿಸಬೇಕು. ಆದರೂ ಇದರ ತಾಂತ್ರಿಕವಿವರ ಸ್ವರೂಪಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿದರೆ ಸಮಕಾಲೀನ ಚೋಳಶೈಲಿಯ ಪ್ರಭಾವಕ್ಕೆ ಒಳಪಟ್ಟಂತೆ ಕಂಡುಬರುತ್ತದೆ. ಕೋಲುಮುಖ, ನೀಳಮೂಗು, ಚೂಪಾದ ಗಡ್ಡ ಮುಂತಾದ ಅಂಗಾಂಗ ಲಕ್ಷಣಗಳಲ್ಲಿ ಹಾಗೂ ಆಭರಣಗಳಲ್ಲಿ ಇದನ್ನು ಗುರುತಿಸಬಹುದು.

ಕರ್ನಾಟಕದಲ್ಲಿ ಈ ಬಗೆಯ ಕಂಚಿನ ಮೂರ್ತಿಗಳು ಹಲವು ಇಲ್ಲದ ಸಂದರ್ಭದಲ್ಲಿ ಇದೀಗ ದೊರೆತಿರುವ ಕಂಚಿನ ಶಿಲ್ಪ ನಿಜಕ್ಕೂ ಅಪೂರ್ವವಾಗಿದೆ. ಅಷ್ಟೇ ಅಲ್ಲ, ನಮ್ಮ ನಾಡಿನ ಶಿಲ್ಪಸಂಪತ್ತನ್ನು ಶ್ರೀಮಂತಗೊಳಿಸುವಲ್ಲಿ ಗಣನೀಯ ಪಾತ್ರ ವಹಿಸುತ್ತದೆ.

(ಈ ವೈಶಿಷ್ಟ್ಯಪೂರ್ಣವಾದ ವಿಗ್ರಹವನ್ನು ಈಗ ನಾಡಿನ ಪ್ರಾಶಸ್ತ ವಸ್ತುಸಂಗ್ರಹಾಲಯ ವಿಭಾಗದಲ್ಲಿ ಸಂರಕ್ಷಿಸಿ ಇಡಲಾಗಿದೆ.)

## ಆಧಾರ ಗ್ರಂಥಗಳು


೧. ಎಸ್. ಎಚ್. ರಿತ್ತಿ : 'ಬೆಳ್ವಲ ಮೂನ್ನೂರು', ಕರ್ನಾಟಕ ಭಾರತಿ, ಸಂಪುಟ ೧, ಸಂಚಿಕೆ ೧, ನವೆಂಬರ್ ೧೯೬೮

೨. ಎಂ. ಎಂ. ಕಲಬುರ್ಗಿ : ಧಾರವಾಡ ಜಿಲ್ಲೆಯ ಶಾಸನ ಸೂಚಿ, ಧಾರವಾಡ, ೧೯೭೫

೩. ಕನ್ನಡ ವಿಶ್ವಕೋಶ, ಸಂಪುಟ ೧೦, ಮೈಸೂರು, ೧೯೮೦

4. *Dharwad District Gazetteer*, Bangalore, 1959

5. C. Sivaramamurthi : *South Indian Bronzes*, New Delhi, 1963

6. Gopinath Rao : *Elements of Hindu Iconography*, Vol. II, Part II, New Delhi, 1971

7. I. K. Sharma : *The Development of Early Saiva Art & Architecture*, Delhi, 1982

8. *SII*, Vol. XI, No. 45: ಈ ಶಾಸನವು ನವಿಲಗುಂದವನ್ನು 'ನವಿಲ್ಗುನ್ದಪುರಂ' ಎಂದು ಬಣ್ಣಿಸಿದೆ; Vol. XV, No. 49 & 73

ಸಿ. ಮಹದೇವ

# ಲಕ್ಷ್ಮೇಶ್ವರದ ರಾಮಲಿಂಗ ದೇವಾಲಯ : ಒಂದು ಅಧ್ಯಯನ

ಲಕ್ಷ್ಮೇಶ್ವರವು ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಕಸಬೆಯಿಂದ ನೈರುತ್ಯಕ್ಕೆ ೨೧ ಕಿಲೋ ಮೀಟರ್ ದೂರದಲ್ಲಿದೆ. ಇದು ಕನ್ನಡ ನಾಡು–ನುಡಿ, ಧರ್ಮ, ಸಾಹಿತ್ಯ, ಸಂಸ್ಕೃತಿಗೆ ಹೆಸರಾದ ಊರು ಎಂಬುದನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಬಾದಾಮಿ ಚಲುಕ್ಯರ ಕಾಲದಿಂದಲೂ ಇದರ ಪ್ರಸ್ತಾಪವನ್ನು ನಾವು ಶಾಸನಗಳಲ್ಲಿ ಕಾಣುತ್ತೇವೆ. ಪ್ರಾಚೀನ ಶಾಸನಗಳಲ್ಲಿ, ಗ್ರಂಥಗಳಲ್ಲಿ ಪುಲಿಗೆರೆ[1], ಪುರಿಗೆರೆ[2], ಪುಲಿಕರ[3], ಪುರಿಕರ[4] ಎಂದು ಮೊದಲಾದ ಹೆಸರುಗಳಿಂದ ಕರೆಯಲಾಗಿದೆ.

ನಾನು ದೇವಾಲಯ ಮತ್ತು ಮಠದ ಬಗೆಗೆ ಅಧ್ಯಯನ ಮಾಡುವಾಗ, ಲಕ್ಷ್ಮೇಶ್ವರದ ಕೆಲವು ಶಾಸನಗಳಲ್ಲಿ ರಾಮೇಶ್ವರ ದೇವಾಲಯ ಮತ್ತು ಮಠದ ಬಗ್ಗೆ ಉಲ್ಲೇಖ ಕಂಡುಬಂದಿತು. ಡಾ॥ ಅ. ಸುಂದರ ಅವರು ೧೨ ಮತ್ತು ೧೩ನೆಯ ಶತಮಾನದ ಶಾಸನಗಳಲ್ಲಿ ಲಕ್ಷ್ಮೇಶ್ವರದಲ್ಲಿ ರಾಮೇಶ್ವರ ದೇವಾಲಯ ಇದ್ದುದಾಗಿ ತಿಳಿದುಬರುತ್ತದೆ ಎಂದಿರುವರು.[5] ಅಂತೆಯೇ, ಡಾ॥ ಎಸ್. ಶೆಟ್ಟರ್ ಅವರು, 'ಪುರಿಗೆರೆ' ಎಂಬ ಗ್ರಂಥಕ್ಕಾಗಿ ಬರೆದ 'ಲಕ್ಷ್ಮೇಶ್ವರದ ದೇವಾಲಯಗಳು' ಎಂಬ ಲೇಖನದಲ್ಲಿ, ರಾಮೇಶ್ವರ ದೇವಾಲಯವು ಯಾದವ ಸಿಂಘಣನ ಕಾಲದಲ್ಲಿ ಉಛ್ರಾಯಸ್ಥಿತಿಯಲ್ಲಿತ್ತೆಂದು ಹೇಳಬಹುದು ; ಆದರೆ ೧೩ನೇ ಶತಮಾನದ ಮಧ್ಯಭಾಗದಿಂದ ಈ ದೇವಾಲಯದ ಬಗ್ಗೆ ಸರಿಯಾದ ವಿವರಗಳು ಇಲ್ಲ ಎಂದು ಪ್ರಸ್ತಾಪಿಸಿರುವರು.[6] ಇದೇ ಲೇಖಕರು ತಮ್ಮ ಲೇಖನದಲ್ಲಿ ರಾಮೇಶ್ವರ ದೇವಾಲಯ ನಶಿಸಿಹೋಗಿದೆ ಎಂದೂ ಸ್ಪಷ್ಟಪಡಿಸಿರುವರು.[7]

ಈಗ ಈ ದೇವಾಲಯದ ಉಲ್ಲೇಖವಿರುವ ಶಾಸನಗಳನ್ನು ಪರಿಶೀಲಿಸುವುದಾದರೆ, ಮೊದಲನೆಯದಾಗಿ, ಬಾದಾಮಿ ಚಲುಕ್ಯ ದೊರೆ ಎರೆಯಮ್ಮ (ಎರಡನೇ ಪುಲಿಕೇಶಿ)ನ ಕಾಲದ ಶಾಸನವೊಂದು, ಶಂಖ ಜಿನಾಲಯಕ್ಕೆ ಸೇಂದ್ರವಂಶದ ದುರ್ಗಶಕ್ತಿಯು ೫೦೦ ನಿವರ್ತನ ಭೂಮಿಯನ್ನು ದತ್ತಿಬಿಟ್ಟ ಉಲ್ಲೇಖವನ್ನು ತಿಳಿಸುತ್ತದೆ.

---

1. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೨೦, ನಂ. ೩, ಲಕ್ಷ್ಮೇಶ್ವರ
2. ಅದೇ, ನಂ. ೫, ಲಕ್ಷ್ಮೇಶ್ವರ, ಕ್ರಿ.ಶ. ೭೨೩
3. ಆರ್. ಸಿ. ಹಿರೇಮಠ ಮತ್ತು ಎಂ. ಎಸ್. ಸುಂಕಾಪುರ (ಸಂ.) : ಸೋಮನಾಥ ಚಾರಿತ್ರ, ಧಾರವಾಡ, ೧೯೬೧, ಪು. ೬೦
4. ಸೌ. ಇ. ಇ., ಸಂಪುಟ ೨೦, ನಂ. ೫೩, ಲಕ್ಷ್ಮೇಶ್ವರ, ಕ್ರಿ.ಶ. ೧೦೮೧
5. ಅ. ಸುಂದರ : 'ಲಕ್ಷ್ಮೇಶ್ವರ', ಕನ್ನಡ ವಿಷಯ ವಿಶ್ವಕೋಶ-ಕರ್ನಾಟಕ, ಮೈಸೂರು, ೧೯೭೯, ಪು. ೧೨೮೭
6. ಸದಾನಂದ ಕನವಳ್ಳಿ ಮತ್ತು ಚನ್ನಪ್ಪ ಕಿರಿಮನಿ (ಸಂ.): ಪುರಿಗೆರೆ, ಪು. ೧೦೦
7. ಅದೇ, ಪು. ೧೦೮

ಹೀಗೆ ಬಿಟ್ಟ ದತ್ತಿಗೆ ಗಡಿಗಳನ್ನು ಹೇಳುವಾಗ 'ಪಶ್ಚಿಮತಃ ರಾಮೇಶ್ವರ ಕ್ಷೇತ್ರಂ'[8] ಮತ್ತು 'ವಾಯುವ್ಯಾಂ ಹೋಬೇಶ್ವರ ಕ್ಷೇತ್ರಂ' ಎಂದು ಹೇಳಿದೆ. ಇದರಲ್ಲಿ ಹೋಬೇಶ್ವರ ಅಥವಾ ಹೋಜೇಶ್ವರ ಇಂದು ಲಕ್ಷ್ಮೇಶ್ವರ ದಲ್ಲಿ ವಾಚೇಶ್ವರ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಇತಿಹಾಸ ವಿದ್ವಾಂಸರು ಈ ವಾಚೇಶ್ವರ ಅಥವಾ ಶಾಸನದ ಹೋಬೇಶ್ವರ ದೇವಾಲಯವು ಬಾದಾಮಿ ಚಲುಕ್ಯರ ಕಾಲದ ವಾಸ್ತುನಿರ್ಮಾಣ ಎಂದು ಸ್ಪಷ್ಟಪಡಿಸಿದ್ದಾರೆ. ಡಾ॥ ಸುಂದರ ಅವರು ವಾಚೇಶ್ವರ ದೇವಾಲಯವು ಕಲ್ಯಾಣ ಚಲುಕ್ಯರ ಕಾಲಕ್ಕಿಂತ ಪೂರ್ವದ್ದು ಎಂದು ತಿಳಿಸುತ್ತಾರೆ.[9] ಡಾ॥ ಶೆಟ್ಟರ್ ಅವರು ಹೋಜೇಶ್ವರ ಅಥವಾ ವಾಚೇಶ್ವರ ದೇವಾಲಯದ ದ್ವಾರದ ಶಿಲ್ಪ ಮತ್ತು ವಾಸ್ತುಲಕ್ಷಣಗಳನ್ನು ಅವಲೋಕಿಸಿದರೆ ಇದು ಬಾದಾಮಿ ಚಲುಕ್ಯರ ಕಾಲದ ನಿರ್ಮಾಣವೆನ್ನುವುದು ವಿದಿತವಾಗುತ್ತದೆಯೆನ್ನುತ್ತಾರೆ.[10] ಈ ಮೇಲಿನ ಹೇಳಿಕೆಗಳು ಮತ್ತು ಶಾಸನಾಧಾರವು ಹೋಬೇಶ್ವರ ದೇವಾಲಯವು ಬಾದಾಮಿ ಚಲುಕ್ಯರ ಕಾಲಕ್ಕೆ ಸೇರುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತವೆ. ರಾಮೇಶ್ವರ ಮತ್ತು ಹೋಬೇಶ್ವರ ಶಿವಾಲಯಗಳು ಪ್ರಸ್ತಾಪವಾಗಿರುವುದರಿಂದ ಇವೆರಡೂ ಸಮಕಾಲೀನ ವಾಸ್ತುನಿರ್ಮಾಣವೆನ್ನುವುದ ರಲ್ಲಿ ಸಂಶಯವಿಲ್ಲ. ಆದ್ದರಿಂದ ರಾಮೇಶ್ವರವು ಸಹಾ ಚಲುಕ್ಯರ ಕಾಲಕ್ಕೆ ಸೇರುವ ದೇವಾಲಯವಾಗಿದೆ. ಇದೇ ಶಾಸನದಲ್ಲಿ ಬರುವ 'ದಕ್ಷಿಣತಃ ಘಟಿಕಾಕ್ಷೇತ್ರಂ' ಎಂದು ಹೇಳಿರುವುದರಿಂದ, ಬಾದಾಮಿ ಚಲುಕ್ಯರ ಕಾಲದಲ್ಲೇ ಲಕ್ಷ್ಮೇಶ್ವರದಲ್ಲಿ ಘಟಿಕಾಲಯವಿತ್ತೆಂದು ಗ್ರಹಿಸಬಹು ದಾಗಿದೆ.

ಇನ್ನು ರಾಮೇಶ್ವರ ದೇವಾಲಯವನ್ನು ನೇರವಾಗಿ ಉಲ್ಲೇಖಿಸುವ ಈ ಶಾಸನವು ಕಲ್ಯಾಣ ಚಲುಕ್ಯರ ಕಾಲದ್ದು. ಇದರ ಕಾಲ ಕ್ರಿ. ಶ. ೧೧೧೮.[11] ಆರನೆಯ ವಿಕ್ರಮಾದಿತ್ಯನು ರಾಜ್ಯಭಾರ ಮಾಡುವಲ್ಲಿ ರಾಮೇಶ್ವರ ದೇವರಿಗೆ ಆ ಪುರದ "ಸಾದದೆ(ಱ³) ಹಂದರುವಣ ವೆಂಬಿವಂ"[12] ಸರ್ವನಮಸ್ಯವಾಗಿ ಬಿಡೆಂದು ಕೇಳಿದಾಗ ಸಾದವೆರ್ಗಡೆ ಸೋಮರಸನು ಅಲ್ಲಿಯ ಆಚಾರ್ಯರಾದ ಸಾಮವೇದಿ ಪಂಡಿತರ ಕಾಲಂ ಕರ್ಚಿ ಸರ್ವನಮಸ್ಯವಾಗಿ ಬಿಟ್ಟನು. ಅನಂತರ ಪುರಿಗೆರೆ ೩೦೦ರ ಮುಂಮುರಿದಣ್ಡು ಗಳು ರಾಮೇಶ್ವರ ದೇವರ ಅಂಗಭೋಗಕ್ಕೆ ಹಸುಂಬೆ(ಗೆ)ಗೆ ಹಾಗವಂ[13] ಸ್ಥಾಯಿಯಾಗಿ ಬಿಟ್ಟರು ಎಂದು ತಿಳಿಸುತ್ತದೆ. ಅಲ್ಲದೆ, ಪಟ್ಟಣದ ಐವತ್ತು ಒಕ್ಕಲು ರಾಮೇಶ್ವರದೇವರ ನಂದಾದೀವಿಗೆಗೆ ಪಟ್ಟಣದ ಗಾಣಕ್ಕೆಲ್ಲ ಸೊಲ್ಲಗೆಯೆಣ್ಣೆಯ ಪ್ರತಿದಿನ ವಾಚಂದ್ರಾರ್ಕ್ಕ ತಾರಂಬರಂ ನಡಯಿಸುವರು ಎಂದಿದೆ. ಶಾಸನದ ಈ ವಿಷಯಗಳು, ರಾಮೇಶ್ವರ ದೇವಾಲಯವು ಸಾಮಾಜಿಕ ವಾಗಿ, ರಾಜಕೀಯವಾಗಿ ಗಳಿಸಿದ್ದ ಪ್ರಭಾವ ಮತ್ತು ಪ್ರಾಮುಖ್ಯತೆಯನ್ನು ತಿಳಿಸುತ್ತವೆ. ಇಲ್ಲಿಯ ಆಚಾರ್ಯರು ಸಾಮವೇದಿ ಪಂಡಿತರು. ಹೆಸರೇ ಸೂಚಿಸುವಂತೆ ಅವರು ಸಾಮವೇದದಲ್ಲಿ ಪಡೆದಿದ್ದ ಪರಿಣತಿಯು ಸ್ಪಷ್ಟ ವಾಗುತ್ತದೆ. ಅಲ್ಲದೆ, ಸಾಮವೇದದ ಬಗ್ಗೆ ಮಠದ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡುತ್ತಿದ್ದರೆಂಬುದನ್ನು ಇಲ್ಲಿ ಸುಲಭವಾಗಿ ಗ್ರಹಿಸಬಹುದು. ಇಂತಹ ವ್ಯವಸ್ಥೆ ಯುಳ್ಳ ಒಂದು ದೇವಾಲಯವು ಆ ಕಾಲಕ್ಕೆ ಸಾರ್ವಜನಿಕ ವಾಗಿ ತನ್ನ ಉನ್ನತಿಯನ್ನು ಸಾಧಿಸಿದ್ದುದರಲ್ಲಿ ಸಂಶಯ ವಿಲ್ಲ.

---

8. ಸೌ. ಇ. ಇ., ಸಂಪುಟ ೨೦, ನಂ. ೩, ಲಕ್ಷ್ಮೇಶ್ವರ
ತಸ್ಯ ಸೀಮಾ ಸಮಾಖ್ಯಾಯತೇ । ಪೂರ್ವತಃ ಕಿನ್ನರಿಕ್ಷೇತ್ರಂ । ಪಾವಕ ದಿಶಿ ಜ್ಯೇಷ್ಠಲಿಂಗಭೂಮಿಃ । ದಕ್ಷಿಣತಃ ಘಟಿಕಾಕ್ಷೇತ್ರಂ । ನೈರುತ್ಯಾಂ ದಿಶಿ (ದಂ)ಡಿಗ ಶ್ರೇಷ್ಠಭೂಮಿಃ
ಪಶ್ಚಿಮತಃ ರಾಮೇಶ್ವರಕ್ಷೇತ್ರಂ । ವಾಯುವ್ಯಾಂ ಹೊಬೇಶ್ವರಕ್ಷೇತ್ರಂ । ಉತ್ತರತಃ ಸಿನ್ದೇಶ್ವರ ಕ್ಷೇತ್ರಂ ।
ಈಶಾನ್ಯಾಂ ದಿಶಿ ಭಟಾರಿಕ್ಷೇತ್ರಂ । ಪೂರ್ವೋಕ್ತ ಕಿನ್ನರಿಕ್ಷೇತ್ರಃ ॥
9. ಕನ್ನಡ ವಿಷಯ ವಿಶ್ವಕೋಶ-ಕರ್ನಾಟಕ, ಪು. ೧೨೮೭
10. ಪುರಿಗೆರೆ, ಪು. ೧೧೯
11. ಸೌ. ಇ. ಇ., ಸಂಪುಟ ೨೦, ನಂ. ೭೮, ಲಕ್ಷ್ಮೇಶ್ವರ, ಕ್ರಿ. ಶ. ೧೧೧೮
12. ಸಾದದೆರೆ ಮತ್ತು ಮದುವೆ ಮೇಲಿನ ತೆರಿಗೆ.
13. ಹಸುಂಬೆ ಎಂದರೆ ಒಬ್ಬ ವ್ಯಕ್ತಿಯು ಭುಜದ ಮೇಲೆ ಹೊತ್ತು ಮಾರುವ ಚೀಲವಸ್ತುವಿಗೆ ಕೊಡಬೇಕಾದ ತೆರಿಗೆ. ಆ ತೆರಿಗೆಯು ದರ ಒಂದು ಹಾಗ.

ರಾಮೇಶ್ವರದೇವರ ಮಠದ ಮೇಲೆ ಬೆಳಕನ್ನು ಚೆಲ್ಲುವ ಮತ್ತೊಂದು ಶಾಸನವು ಸಹಾ ಕಲ್ಯಾಣಿ ಚಲುಕ್ಯರ ಕಾಲಕ್ಕೆ ಸೇರಿದ್ದು, ಇದರ ಕಾಲ ಕ್ರಿ. ಶ. ೧೧೨೩.[14] ಈ ಶಾಸನವು ರಾಮೇಶ್ವರದೇವರತೀರ್ಥವು ಪುರಕರಪುರದಲ್ಲಿ ದಿವ್ಯತೀರ್ಥವೆಂದು ಹೇಳುತ್ತದೆ.[15] ಅಲ್ಲದೆ,ಇದು ಮುಕ್ತಿಯ ಸ್ಥಾನವು ಕೂಡ ಆಗಿದೆಯೆಂದು ಹೇಳುತ್ತದೆ. ಈ ಅಭಿಪ್ರಾಯವು ರಾಮೇಶ್ವರ ದೇವಾಲಯದ ಧಾರ್ಮಿಕ ಮಹತ್ತ್ವವನ್ನು ತಿಳಿಸುತ್ತದೆ. ಅಲ್ಲದೆ, ಇದರಲ್ಲಿ ರಾಮೇಶ್ವರದೇವರ ಮಠದ ಆಚಾರ್ಯರಾದ ಸಾಮವೇದಿಪಂಡಿತರ ಶಿಷ್ಯರಾದ ಅಗಸ್ತ್ಯಪಂಡಿತ ದೇವರಿಗೆ, ರಾಮೇಶ್ವರದೇವರ ಮಠದಲ್ಲಿ ಕೌಮಾರ ವ್ಯಾಕರಣವನ್ನು ಹೇಳುವ ಉಪಾಧ್ಯಾಯರ ಜೀವನೋಪಾಯಕ್ಕೆ ಮತ್ತು ಕೌಮಾರ ವ್ಯಾಕರಣ ಕಲಿಯುವ ತಪೋಧನರ (ವಿದ್ಯಾರ್ಥಿಗಳ) ಊಟ, ವಸತಿ ಮತ್ತು ಬಟ್ಟೆಗಾಗಿ ಭೂಮಿಯನ್ನು ದತ್ತಿಬಿಟ್ಟ ಉಲ್ಲೇಖವಿದೆ.[16]

ಲಕ್ಷ್ಮೇಶ್ವರವನ್ನು ಕುರಿತ ಲೇಖನಗಳಲ್ಲಿ ಶಾಸನೋಕ್ತ ರಾಮೇಶ್ವರ ದೇವಾಲಯವು ಇಂದು ಯಾವುದು, ಅದು ಎಲ್ಲಿದೆ ಎಂಬುದರ ಯಾವುದೇ ಮಾಹಿತಿ ಇಲ್ಲ. ಇದರಿಂದ ಈ ದೇವಾಲಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ್ನು ನಡೆಸಲು ಅವಕಾಶವಾಯಿತು. ಈಗ್ಯೆ ಎರಡು ತಿಂಗಳ ಹಿಂದೆ ನಾನು ಲಕ್ಷ್ಮೇಶ್ವರಕ್ಕೆ ಕ್ಷೇತ್ರಕೆಲಸಕ್ಕಾಗಿ ಹೋದಾಗ, ಅಲ್ಲಿಯ ಹಿರೇಬಣದಲ್ಲಿರುವ ರಾಮಲಿಂಗವು ನನ್ನ ಗಮನಕ್ಕೆ ಬಂದಿತು. ಎಷ್ಟೋ ಮಂದಿ ಸ್ಥಳೀಯರಿಗೆ ಈ ರಾಮಲಿಂಗ ದೇವಾಲಯದ ಬಗ್ಗೆ ಸರಿಯಾಗಿ ತಿಳಿಯದು. ಮೊದಲಿಗೆ ನಾನು ಅಲ್ಲಿಯ ಕೆಲವು ತಿಳಿದ ಮಂದಿಗಳ ಬಳಿ ರಾಮೇಶ್ವರನ ಬಗ್ಗೆ ವಿಚಾರ ಮಾಡಿದಾಗ ಅವರಿಂದ 'ಇಲ್ಲಿ ರಾಮೇಶ್ವರ ಎಂಬುದೇ ಇಲ್ಲಾ' ಎಂದು ಒಂದೇ ಉತ್ತರ ಬಂದಿತು. ವಯಸ್ಸಾದ ವ್ಯಕ್ತಿಯೋರ್ವರು "ನೋಡ್ರಿ, ಹಿರೇಬಣದಲ್ಲಿ ಒಂದು ಲಿಂಗ ಮಾತ್ರ ಇದೆ. ಅದನ್ನು ಎಲ್ಲರೂ ರಾಮಲಿಂಗ ಎಂದು ಕರೆಯುತ್ತಾರೆ. ಬೇಕಾದರೆ ನೀವು ಅದನ್ನು ನೋಡಬಹುದು" ಎಂದು ತಿಳಿಸಿದರು. ನಾನು ಹಿರೇಬಣದ ಈ ರಾಮಲಿಂಗ ದೇವಾಲಯವನ್ನು ನೋಡಲು ಹೋದಾಗ ಅಲ್ಲಿ ಬರೇ ಲಿಂಗ ಮಾತ್ರ ಇದ್ದು, ಅದರ ಗರ್ಭಗೃಹ ಮತ್ತು ಮುಂದಿನ ಕೊಠಡಿಯನ್ನು ಈಗ್ಯೆ ಸುಮಾರು ೪೦ ವರ್ಷಗಳ ಹಿಂದೆ ಈಗಿನ ಅರ್ಚಕರ ತಂದೆ ಶ್ರೀ ಮಹದೇವಭಟ್ಟ ಹುಲಮನಿ ಮತ್ತು ಶ್ರೀ ಈಶ್ವರಭಟ್ಟ ಹುಲಮನಿ ಇವರು ಜೀರ್ಣೋದ್ಧಾರ ಮಾಡಿಸಿದ್ದಾರೆ ಎಂದು ತಿಳಿದು ಬಂದಿತು.

ಇದೇ ಲಕ್ಷ್ಮೇಶ್ವರದಲ್ಲಿ ಲಕ್ಷ್ಮಣೇಶ್ವರ ದೇವಾಲಯವಿದ್ದು, ಅದನ್ನು ಈಗ ಜನರು ಆಡುಭಾಷೆಯಲ್ಲಿ ಲಕ್ಷ್ಮಣಲಿಂಗ ಎಂದು ಕರೆಯುತ್ತಿದ್ದಾರೆ. ಅದೇರೀತಿ ಶಾಸನದಲ್ಲಿ ಬರುವ ಈ ರಾಮೇಶ್ವರನನ್ನು ಜನರು ಸರಳವಾಗಿ ರಾಮಲಿಂಗ ಎಂದು ಕರೆದಿರುವುದನ್ನು ಎಲ್ಲರೂ ಒಪ್ಪಬೇಕಾಗುತ್ತದೆ. ಈ ಅಭಿಪ್ರಾಯದ ಜೊತೆಗೆ ಅಲ್ಲಿ ಬಿದ್ದಿರುವ ದೇವಾಲಯದ ಅವಶೇಷಗಳು ಲಕ್ಷ್ಮೇಶ್ವರದ ಹಿರೇಬಣದಲ್ಲಿರುವ ರಾಮಲಿಂಗವೇ ಶಾಸನೋಕ್ತ ರಾಮೇಶ್ವರ ಎಂದು ಖಚಿತಪಡಿಸುತ್ತವೆ. ನಂತರ ದೇವಾಲಯ ಪ್ರದೇಶದಲ್ಲಿ ದೇವಾಲಯಕ್ಕೆ ಸಂಬಂಧಿಸಿದ ಹಲವಾರು ಕುರುಹುಗಳು ಕಣ್ಣಿಗೆ ಬಿದ್ದವು. ಇಲ್ಲಿರುವ ರಾಮಲಿಂಗವು ಸುಮಾರು ೩ ಅಡಿ ಎತ್ತರವಿದ್ದು, ೯ ಅಂಗುಲ ಎತ್ತರದ ವೇದಿಕೆಯ ಮೇಲಿದೆ. ಈಗಿನ ದೇವಾಲಯವು ಎರಡು ಕೋಣೆಗಳನ್ನು ಹೊಂದಿದ್ದು, ಗರ್ಭಗೃಹವು ೧೨ ಅಡಿ ಉದ್ದ ಮತ್ತು ೧೨ ಅಡಿ ಅಗಲವಿದೆ. ಅದರ ಮುಂದಿನ ಕೋಣೆಯ ಉದ್ದ ೧೨ ಅಡಿ ಮತ್ತು ಅಗಲ ೧೬.೮ ಅಡಿ. ಈ ಎರಡೂ ಕೋಣೆಗಳ ಮೇಲ್ಛಾವಣಿಯು ಮಟ್ಟಸವಾಗಿದ್ದು ಗೋಡೆಯ ಆಧಾರವಲ್ಲದೆ, ಗೋಡೆಗೆ ಹೊಂದಿಕೊಂಡಂತೆ ಗರ್ಭಗೃಹದಲ್ಲಿ ಮತ್ತು ಮುಂದಿನ ಕೋಣೆಯಲ್ಲಿ ತಲಾ ೮ ಮರದ ಕಂಬಗಳ ಆಧಾರವನ್ನು ಹೊಂದಿದೆ. ಮೇಲ್ಛಾವಣಿಯು ಕಲ್ಲು ಮತ್ತು ಮಣ್ಣಿನಿಂದ ರಚಿತವಾಗಿದೆ. ಕಟ್ಟಡದ ಹೊರ

---

14. ಸೌ. ಇ. ಇ., ಸಂಪುಟ ೨೦, ನಂ. ೮೩, ಲಕ್ಷ್ಮೇಶ್ವರ, ಕ್ರಿ. ಶ. ೧೧೨೩
15. ಅದೇ, ಸಾಲುಗಳು ೧೧ ಮತ್ತು ೧೨
16. ಅದೇ, ಸಾಲುಗಳು ೧೬ ರಿಂದ ೨೩

ಗೋಡೆಯಲ್ಲಿ ಹಾಳಾದ ದೇವಾಲಯದ ಬಿಡಿಶಿಲ್ಪಗಳನ್ನು ಮತ್ತು ಕೆತ್ತನೆ ಇರುವ ಶಿಖರದ ಬಿಡಿಭಾಗಗಳನ್ನು ಅಳವಡಿಸಿ ಕಟ್ಟಿರುವುದನ್ನು ಇಂದಿಗೂ ಕಾಣಬಹುದು. ನವರಂಗದ ನಾಲ್ಕು ಕಂಬಗಳ ನಡುವೆ ಬರುವ ಶಿಲಾ ವೇದಿಕೆಯು ಮೊದಲು ಚತುರಸ್ರಾಕಾರವಾಗಿ ನಂತರ ವೃತ್ತಾಕಾರವಾಗಿದೆ. ಇದು ಕ್ರಮವಾಗಿ ೧೩ ಅಡಿ ಉದ್ದವಾಗಿಯೂ ೧೩ ಅಡಿ ಅಗಲವಾಗಿಯೂ ಇದೆ. ವೃತ್ತಾಕಾರವು ೧ ಅಂಗುಲ ಎತ್ತರವನ್ನು ಹೊಂದಿದ್ದು ಜನರು ತಿರುಗಾಡುವ ಓಣಿಯಲ್ಲಿದೆ. ಇದರ ಪೂರ್ವಾರ್ಧ ಭಾಗದಲ್ಲಿ ಗಣಪತಿಯ ಶಿಲ್ಪವೊಂದನ್ನು ರಾಮಲಿಂಗದ ಅಭಿಮುಖವಾಗಿ ಇಟ್ಟು ಸಣ್ಣ ಕೊಠಡಿಯೊಂದನ್ನು ಇತ್ತೀಚೆಗೆ ಕಟ್ಟಲಾಗಿದೆ. ಉಳಿದ ಪಶ್ಚಿಮಾರ್ಧ ಭಾಗವು ಸಾರ್ವಜನಿಕರು ತಿರುಗಾಡುವ ಓಣಿಯಲ್ಲಿದೆ. ಇಂದು ಅದರ ಮೇಲೆ ಜನರೆಲ್ಲರೂ ತಿರುಗಾಡುತ್ತಾರೆ. ಗರ್ಭಗೃಹದಲ್ಲಿರುವ ಲಿಂಗದ ಮುಂದೆ ಬಹುಶಃ ಇತ್ತೀಚೆಗಷ್ಟೆ ಇಟ್ಟಿರಬಹುದಾದ ಪುಟ್ಟ ಬಸವಣ್ಣವೊಂದಿದೆ. ಗರ್ಭಗೃಹದ ಹಿಂಭಾಗದಲ್ಲಿ ಶ್ರೀ ಜಿ. ಐ. ಹುಲಮನಿ ಮತ್ತು ಶ್ರೀ ಪಿ. ಕೆ. ಜೋಶಿಯವರ ವಾಸದ ಮನೆಗಳಿವೆ. ಈ ಮನೆಗಳನ್ನು ದೇವಾಲಯದ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ.

ದೇವಾಲಯದ ಉತ್ತರಕ್ಕೆ ಶ್ರೀ ನಾರಾಯಣ ಧೂಳಖೇಡ ಮತ್ತು ಶ್ರೀ ಕೃಷ್ಣಪ್ಪ ಕುಲಕರ್ಣಿ ಅವರುಗಳ ಮನೆಗಳಿದ್ದು, ಇವರ ಮನೆಯ ವರಾಂಡದಲ್ಲಿ ದೇವಾಲಯದ ಅಡಿಪಾಯಕ್ಕೆ ಸಂಬಂಧಿಸಿದ ಶಿಲಾ ಚಪ್ಪಡಿಗಳು ಹಾದುಹೋಗಿವೆ. ದೇವಾಲಯದ ಹಿಂಭಾಗದಲ್ಲಿ ಅಂದರೆ ಪಶ್ಚಿಮದಿಕ್ಕಿನಲ್ಲಿ ಎರಡು ಹಾಳಾದ ಮಂಟಪಗಳಿವೆ. ಒಂದು ಮಂಟಪವು ನಿಸ್ಸಂದೇಹವಾಗಿ ದೇವಸ್ಥಾನದ ತೀರ್ಥ(ಕೊಳ)ಕ್ಕೆ ಹೋಗುವ ದ್ವಾರ ಮಂಟಪವಾಗಿದೆ. ಇದೇ ರೀತಿಯ ಕೊಳದ ದ್ವಾರ ಮಂಟಪವನ್ನು ಸೋಮನಾಥ ದೇವಾಲಯದಲ್ಲಿ ಕಾಣಬಹುದಾಗಿದೆ. ರಾಮೇಶ್ವರ ದೇವಾಲಯ ಹಾಳಾಗುವುದರೊಂದಿಗೆ ಈ ತೀರ್ಥದ ಹೊಂಡವು ಸಹ ಮುಚ್ಚಿಹೋಗಿರಬಹುದು. ಈ ಜಾಗದಲ್ಲಿ ಈಗ ಶ್ರೀ ಹೆಚ್. ಆರ್. ಕುಲಕರ್ಣಿ ಅವರ ಮನೆ ಇದೆ. ಗರ್ಭಗೃಹದಲ್ಲಿನ ನೀರು ಹರಿದುಹೋಗುವ ಚಪ್ಪಡಿಯು ಸಹಾ ಭೂ ಮೇಲ್ಭಾಗದಲ್ಲಿದ್ದು, ಓಣಿಯ ಜನರೆಲ್ಲಾ ಅದನ್ನು ತುಳಿದು ತಿರುಗಾಡುತ್ತಾರೆ. ರಾಮಲಿಂಗ ದೇವಾಲಯದ ಪೂರ್ವಕ್ಕೆ ನೇರವಾಗಿ ಸುಮಾರು ೮೦ ಅಡಿಗಳ ಅಂತರದಲ್ಲಿ ಮಹಾದ್ವಾರವಿದೆ. ಇದನ್ನು ನಾಲ್ಕು ದೊಡ್ಡ ಶಿಲಾತೊಲೆಗಳಿಂದ ರಚಿಸಲಾಗಿದೆ. ಮಹಾದ್ವಾರದ ಎತ್ತರ ಸುಮಾರು ೨೦ ಅಡಿ ಮತ್ತು ಅಗಲ ೧೨ ಅಡಿ. ಇದೇ ರಾಮೇಶ್ವರ ದೇವಾಲಯದ ಮಹಾದ್ವಾರ.

ಸಾಮಾನ್ಯವಾಗಿ ದೇವಾಲಯಗಳ ದಕ್ಷಿಣಭಾಗದಲ್ಲಿ ಮಠಗಳ ಇರುವಿಕೆಯನ್ನು ನಾವು ಗಮನಿಸಬಹುದು. ಅದೇ ರೀತಿ ಶಾಸನೋಕ್ತ ರಾಮೇಶ್ವರದೇವರ ಮಠವು ದೇವಾಲಯದ ದಕ್ಷಿಣಕ್ಕಿದ್ದು, ದೇವಾಲಯದ ಅವನತಿಯೊಂದಿಗೆ ಅದು ಸಹಾ ಹಾಳಾಗಿರಬಹುದು. ಪ್ರಸ್ತುತ ರಾಮಲಿಂಗ ದೇವಾಲಯವಿರುವ ದಕ್ಷಿಣದಲ್ಲಿ ಈಗ ಶ್ರೀ ಕೂಡಲೀ–ಶೃಂಗೇರಿ ಮಹಾಸಂಸ್ಥಾನ, ಕೂಡಲಿಮಠಕ್ಕೆ ಸೇರಿದ ಶಂಕರಭಾರತೀ ಎಂಬ ಶಾಖಾಮಠವಿದೆ. ಈ ಮಠದಲ್ಲಿ ಈಗಲೂ ಮಕ್ಕಳಿಗೆ ಗಣಪತಿ ಅಥರ್ವಣ, ರುದ್ರ ಮತ್ತು ಸಂಸ್ಕೃತ ಸೂಕ್ತಗಳನ್ನು ಹೇಳಿಕೊಡಲಾಗುತ್ತದೆ. ಈ ಮಠವಿರುವ ಸ್ಥಳದಲ್ಲೇ ಶಾಸನೋಕ್ತ ರಾಮೇಶ್ವರದೇವರ ಮಠವಿದ್ದಿರಲು ಸಾಧ್ಯವಿದೆ. ರಾಮೇಶ್ವರದೇವರ ಮಠದಲ್ಲಿ ನಡೆಯುತ್ತಿದ್ದ ಕೌಮಾರ ವ್ಯಾಕರಣ ಶಿಕ್ಷಣದ ಶಾಸನೋಲ್ಲೇಖವನ್ನು ಇಲ್ಲಿ ಸ್ಮರಿಸಬಹುದಾಗಿದೆ. ಮನೆ ಕಟ್ಟಲು ಈ ಪ್ರದೇಶದಲ್ಲಿ ತೋಡಿದ್ದ ಪಾಯಗಳಲ್ಲಿ ದೇವಾಲಯದ ಶಿಲಾಸ್ತಂಭಗಳು, ತೊಲೆಗಳು ಬಿದ್ದಿರುವುದು ಕಂಡುಬಂದವು. ಅಲ್ಲದೆ, ಅಧಿಕ ಸಂಖ್ಯೆಯಲ್ಲಿ ಭಿನ್ನವಾದ ಸಣ್ಣಪುಟ್ಟ ವಿಗ್ರಹಗಳು ಮನೆಗಳ ಮುಂಭಾಗದಲ್ಲಿ ಮತ್ತು ಓಣಿಗಳಲ್ಲಿ ಚೆಲ್ಲಾಡಿವೆ. (ಈ ಮನೆಗಳು ದೇವಾಲಯದ ಸುತ್ತಮುತ್ತ ಇವೆ.) ಬಹುಶಃ ಇವುಗಳೆಲ್ಲ ಈ ರಾಮಲಿಂಗ ಅಥವಾ ರಾಮೇಶ್ವರ ದೇವಾಲಯಕ್ಕೆ ಸಂಬಂಧಿಸಿದ್ದಾಗಿವೆ. ಈ ವಿಗ್ರಹಗಳಲ್ಲಿ ಗಣಪತಿ ಮತ್ತು ಇತರ ವಿಗ್ರಹಗಳನ್ನು ಕಾಣಬಹುದು. ಈ ಸಾಕ್ಷ್ಯಾಧಾರಗಳಿಂದ ರಾಮಲಿಂಗವು 'ನಾನೇ ಶಾಸನೋಕ್ತ ರಾಮೇಶ್ವರ' ಎಂದು ಸಮರ್ಥಿಸಿಕೊಳ್ಳುವಲ್ಲಿ ಸಫಲವಾಗಿದೆ.

ಲಕ್ಷ್ಮೇಶ್ವರದಲ್ಲಿ ಈಗ್ಯೆ ಸುಮಾರು ೫೦–೬೦ ವರುಷಗಳ ಹಿಂದೆ ಅಗ್ನಿಹೋತ್ರಿಗಳು ಮತ್ತು ಶ್ರೋತ್ರಿಯ ಬ್ರಾಹ್ಮಣರಿದ್ದು, ಕಾಲಾಂತರದಲ್ಲಿ ಅವರುಗಳು ಈ

# ಲಕ್ಷ್ಮೇಶ್ವರದ ಹಿರೇಬಣದಲ್ಲಿರುವ ರಾಮಲಿಂಗ ದೇವಾಲಯದ ನಕ್ಷೆ



ಊರನ್ನು ಬಿಟ್ಟು ಬೇರೆಡೆಗೆ ಹೋದರೆಂದು ಇಲ್ಲಿನ ಹಿರಿಯರು ಹೇಳುತ್ತಾರೆ. ಈಗ ಇಲ್ಲಿ ೧೦ ಅದ್ವೈತ ಸಂಪ್ರದಾಯದ ಮನೆಗಳೂ ಸುಮಾರು ೧೫ ಮಾಧ್ವ ಸಂಪ್ರದಾಯದ ಮನೆಗಳೂ ಇವೆ. ರಾಮಲಿಂಗ ದೇವಾಲಯದ ಪ್ರದೇಶದಲ್ಲಿ ಕೇವಲ ಬ್ರಾಹ್ಮಣರ ಮನೆಗಳು ಮಾತ್ರ ಇವೆ. ಇಲ್ಲಿಯ ಮಾಧ್ವ ಸಂಪ್ರದಾಯಕ್ಕೆ ಸೇರಿದ ವಿದ್ವಾಂಸರಾದ ಶ್ರೀ ನಾರಾಯಣ ಧೂಳಖೇಡ ಅವರು ತಿಳಿಸುವಂತೆ, ಲಕ್ಷ್ಮೇಶ್ವರದ ಮಾಧ್ವರೆಲ್ಲರೂ ಒಂದು ಕಾಲಕ್ಕೆ ಅದ್ವೈತದವರಿದ್ದು, ಕ್ರಮೇಣ ಮಂತ್ರಾಲಯದ ಗುರುಸಾರ್ವಭೌಮರ ಪ್ರಭಾವಕ್ಕೆ ಒಳಗಾಗಿ ಮಾಧ್ವರಾದರು. ಇದಕ್ಕೆ ಜೀವಂತ ಸಾಕ್ಷಿ ಎಂಬಂತೆ, ಲಕ್ಷ್ಮೇಶ್ವರದ ಶ್ರೀ ಮಾರ್ತಾಂಡ ಕುಲಕರ್ಣಿ ಅವರು ಮಾಧ್ವರಿದ್ದು, ಮುಂಜಾನೆ ಹಣೆಗೆ ಅಂಗಾರ ಮತ್ತು ಅಕ್ಷತೆಯನ್ನು ಇಟ್ಟುಕೊಳ್ಳುತ್ತಾರೆ. ಸಾಯಂಕಾಲ ವಿಭೂತಿಯನ್ನು ಧರಿಸುತ್ತಾರೆ. ಅಲ್ಲದೆ, ಅವರು ಮೈಲಾರಲಿಂಗನಿಗೆ ಬಹಳ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅವರ ಹೆಸರು ಮಾರ್ತಣ್ಣ ಎಂದಿರುವುದರಿಂದ ಈ ಹೆಸರು ಮಾಧ್ವ ಸಂಪ್ರದಾಯದಲ್ಲಿ ತೀರಾ ಅಸಂಭವವಾಗಿದೆ. ಸ್ವತಃ ಶ್ರೀ ಮಾರ್ತಣ್ಣ ಕುಲಕರ್ಣಿ ಅವರೇ ತಮ್ಮ ಪೂರ್ವಿಕರು ಅದ್ವೈತದವರಿದ್ದರೆಂದು ತಿಳಿಸುತ್ತಾರೆ. ಬಹುಶಃ ಮಾಧ್ವ ಸಂಪ್ರದಾಯದ ಸಾಮೂಹಿಕ ಆಚರಣೆಯ ಪ್ರಾರಂಭದ ತೀವ್ರತೆಯು ರಾಮೇಶ್ವರ ದೇವಾಲಯ ಮತ್ತು ಅದರ ಮಠದ ಅವನತಿಗೆ ಕಾರಣವಾಗಿರಬಹುದು. ಈ ರೀತಿ ಅವನತಿಗೊಳಗಾದ ದೇವಾಲಯದ ಪ್ರದೇಶಗಳನ್ನು ಅಲ್ಲಿಯ ಜನರು ತಮ್ಮ ವಸತಿ ಸೌಕರ್ಯಕ್ಕಾಗಿ ಬಳಸಿಕೊಂಡು ದೇವಾಲಯವು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಹಿಂದೆ ಸರಿದಂತೆ ಕಾಣಬರುತ್ತದೆ. ರಾಮೇಶ್ವರನು ಸಹಜವಾಗಿ ತನ್ನ ಎಲ್ಲಾ ವೈಭವಗಳನ್ನು ಕಳೆದುಕೊಂಡನಂತರ ಜನರ ಆಡುನುಡಿಯಲ್ಲಿ ರಾಮಲಿಂಗನೆಂದು ಸರಳವಾಗಿ ಕರೆಸಿಕೊಂಡನು.

ಲಕ್ಷ್ಮೇಶ್ವರದ ರಾಮೇಶ್ವರಲಿಂಗ ನಶಿಸಿಹೋಗಿಲ್ಲ. ಇಲ್ಲಿಯ ಹಿರೇಬಣದಲ್ಲಿರುವ ರಾಮಲಿಂಗವೇ ಶಾಸನೋಕ್ತ ರಾಮೇಶ್ವರವಾಗಿದೆ. ರಾಮಲಿಂಗ ದೇವಾಲಯದ ವಾಸ್ತುರಚನೆಯ ಬಗ್ಗೆ ಇಲ್ಲಿ ಸರಿಯಾದ ವಿವರಣೆ ಕೊಡುವುದು ತುಂಬಾ ಕಠಿಣದ ಕೆಲಸ. ಬಹುಶಃ ಇದು ಶಂಖ ಬಸದಿಯ ಸಮಕಾಲೀನ ದೇವಾಲಯವಾಗಿರುವುದರಿಂದ ಹೆಚ್ಚು ಕಡಿಮೆ ಅದೇ ಶೈಲಿಯಲ್ಲಿದ್ದಿರಬಹುದೆಂದು ಗ್ರಹಿಸಬಹುದಾಗಿದೆ. ಬಾದಾಮಿ ಚಲುಕ್ಯರ ಕಾಲಕ್ಕೆ ಸೇರುವ ಈ ರಾಮಲಿಂಗ ಅರ್ಥಾತ್ ರಾಮೇಶ್ವರ ದೇವಾಲಯವನ್ನು ಲಕ್ಷ್ಮೇಶ್ವರದ ಹಿರೇಬಣದಲ್ಲಿ ಇಂದಿಗೂ ನೋಡಬಹುದು.

ಡಾ॥ ಎನ್. ಎಸ್. ರಂಗರಾಜು

# ತುಮಕೂರು ಜಿಲ್ಲೆಯ ಹೊಯ್ಸಳ ದೇವಸ್ಥಾನಗಳು : ಒಂದು ಸಮೀಕ್ಷೆ

'ತುಮಕೂರು' ಎಂಬ ಪದವು ಇಲ್ಲಿಯ ಪದ್ಧತಿಯ ಪ್ರಕಾರ 'ತುಮುಕೆ' ಅನ್ನುವ ಪದದ ಮೂಲದಿಂದ ಬಂದಿರಬಹುದೆಂಬ ಅಭಿಪ್ರಾಯವಿದೆ. 'ತುಮುಕೆ' (Tumuke) ಎಂದರೆ ಒಂದು ಸಣ್ಣ ನಗಾರಿಯಾಗಿದ್ದು, ಅದನ್ನು ಜನರಿಗೆ ವಿಷಯ ಮುಟ್ಟಿಸಲು ಬಾರಿಸುತ್ತಿದ್ದರು. ಆದರೆ ೨೦ನೇ ಶತಮಾನದ ಶಾಸನದ ಆಧಾರದ ಮೇಲೆ ಹೇಳುವುದಾದರೆ, 'ತುಮ್ಮೆಗೂರು' (Tummeguru) ಅಂದರೆ ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವ ಸುವಾಸನೆಯುಳ್ಳ ತುಂಬೆ ಹೂವಿನಿಂದ (Leucas Aspera) ಈ ಹೆಸರು ಬಂದಿರಬಹುದೆಂದು ಹೇಳಲಾಗಿದೆ. ಕೆಲಕಾಲಾನಂತರ 'ತುಮ್ಮೆವೂರು' (Tummeuru) ಬದಲಾವಣೆ ಹೊಂದಿ ಈಗಿನ ತುಮಕೂರು ಆಗಿರಬಹುದು.

ತುಮಕೂರು ಜಿಲ್ಲೆಯು ಶಿಲಾಯುಗದ ಸಂಸ್ಕೃತಿಯಿಂದಲೂ ಬಹಳ ಮುಖ್ಯವಾದ ಸ್ಥಳವಾಗಿದೆ. ಪ್ರೊ॥ ಸಂಪತ್‌ಅಯ್ಯಂಗಾರ್, ಎಲ್. ರಾಮರಾವ್ ಹಾಗೂ ಎಂ. ಶೇಷಾದ್ರಿಯವರಿಂದ ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿಯ ಶಿಲಾಯುಗದ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ಒದಗುತ್ತದೆ. ಈ ಜಿಲ್ಲೆಯಲ್ಲಿ ಭಿನ್ನಸ್ತರ ಶಿಲೆಯು ಹೇರಳವಾಗಿ ಕಂಡುಬರುತ್ತದೆ. ಇದು ಚಿಕ್ಕನಾಯಕನಹಳ್ಳಿ, ಕುಣಿಗಲ್ಲು ಮತ್ತು ಹುಲಿಯೂರು ದುರ್ಗಗಳಲ್ಲಿ ವಿಪುಲವಾಗಿದೆ. ಇದು ದೇವಸ್ಥಾನಗಳನ್ನು ಕಟ್ಟುವುದಕ್ಕೆ ಬಹಳ ಉಪಯೋಗಕಾರಿಯಾಗಿದ್ದು, ಹೊಯ್ಸಳರು ಇದನ್ನು ತಮ್ಮ ದೇವಸ್ಥಾನಗಳ ನಿರ್ಮಾಣದಲ್ಲಿ ಬಳಸಿಕೊಂಡಿರಬಹುದು.

ಇತಿಹಾಸಕಾಲದಲ್ಲಿ ಇದು ತಲಕಾಡು ಗಂಗರ ಕಾಲದಿಂದಲೂ ಮುಖ್ಯವಾದ ಸ್ಥಳ. ಕ್ರಿ.ಶ. ೪೦೦ರಲ್ಲಿ ಕಂಡುಬರುವ ಮೊದಲ ಶಾಸನವೆಂದರೆ ಮಾಧವನ (ಕ್ರಿ.ಶ. ೪೨೦-೪೬೬) ತಾಮ್ರಶಾಸನ. ಇದು ಕ್ರಿ.ಶ. ೪೫೦ಕ್ಕೆ ಸೇರಿದ್ದು, ಬೌದ್ಧಮತಕ್ಕೆ ಭೂಮಿಯನ್ನು ಕೊಡುಗೆಯಾಗಿ ಕೊಟ್ಟದ್ದನ್ನು ತಿಳಿಸುತ್ತದೆ. ಮತ್ತೊಂದು ಶಾಸನವು ಶ್ರೀಪುರುಷನದಾಗಿದ್ದು (ಕ್ರಿ.ಶ. ೭೨೦–೭೮೮), ಅದು ಗಂಗರು ರಾಷ್ಟ್ರಕೂಟರೊಡನೆ ಮಾಡಿದ ಯುದ್ಧದ ಬಗ್ಗೆ ತಿಳಿಸುತ್ತದೆ. ಈ ಶಾಸನವು ಕ್ರಿ.ಶ.ಸು. ೭೫೦ರಲ್ಲಿ ಬರೆದದ್ದಾಗಿದೆ. ಹಾಗೆಯೇ, ಗಂಗರ ಕಾಲದ ಕೊನೆಯ ಶಾಸನವಾಗಿ ಸತ್ಯವಾಕ್ಯನ (ಕ್ರಿ.ಶ. ೯೬೩–೯೭೪) ಕ್ರಿ. ಶ. ೯೭೨ರ ಶಾಸನವು ಕಂಡುಬರುತ್ತದೆ. ಇವನು ನೊಳಂಬರನ್ನು ಸೋಲಿಸಿದವನು. ಇವನನ್ನು ೩ನೇ ಮಾರಸಿಂಹನೆಂತಲೂ ಕರೆಯಲಾಗಿದೆ. ಅನಂತರದ ಬಾದಾಮಿ ಚಾಲುಕ್ಯರ ಯಾವ ಶಾಸನವೂ ಕಂಡುಬರುವುದಿಲ್ಲ. ಆದರೆ ರಾಷ್ಟ್ರಕೂಟರರಿಗೆ ಸೇರಿದ ಶಾಸನಗಳನ್ನು ಕಾಣಬಹುದು. ಇದರಲ್ಲಿ ಅತಿ ಮುಖ್ಯವಾದುದು ೧ನೇ ಕೃಷ್ಣನಿಗೆ (ಕ್ರಿ.ಶ. ೭೫೬–೭೭೫) ಸಂಬಂಧಿಸಿದ ಕಡಬಾದಲ್ಲಿ ದೊರೆತಿರುವ ತಾಮ್ರಶಾಸನ ಈ ಕಾಲದಲ್ಲಿ ವಿಮಲಾದಿತ್ಯನು ಕುಣಿಗಲ್ಲಿನ ರಾಜ್ಯಪಾಲನಾಗಿದ್ದುದು ಕಂಡುಬರುತ್ತದೆ. ಕ್ರಿ.ಶ. ೯೮೨ರಲ್ಲಿ ಬರೆಸಲಾದ ಹೇಮಾವತಿ ಶಾಸನವು ಮತ್ತೊಂದು ಮುಖ್ಯವಾದ ಶಾಸನ. ಇದು ೯೮೨ ಮಾರ್ಚ್ ೨೦ರಂದು ಇಂದ್ರರಾಜನು ಶ್ರವಣಬೆಳಗೊಳದಲ್ಲಿ ಕೈಗೊಂಡ ಸಲ್ಲೇಖನವ್ರತದ ಬಗ್ಗೆ ತಿಳಿಸುತ್ತದೆ. ಹಾಗೆಯೇ, ನೊಳಂಬರ ಬಗ್ಗೆಯೂ ಇದರಿಂದ ಬಹಳಷ್ಟು ಮಾಹಿತಿಯು ಒದಗುತ್ತದೆ. ನೊಳಂಬರು

ಅತೀ ಪ್ರಬಲವಾದ ಹಿಡಿತವನ್ನು ಈ ಜಿಲ್ಲೆಯ ಮೇಲೆ ಹೊಂದಿದ್ದರು. ಕ್ರಿ. ಶ. ೯೪೯ರಿಂದ ಕ್ರಿ. ಶ. ೯೭೫ರ ವರೆಗೆ ಅವರ ಶಾಸನಗಳು ಇಲ್ಲಿ ಕಂಡುಬರುತ್ತವೆ. ಇದಲ್ಲದೆ, ಚೋಳರಾಜರಿಗೆ ಸೇರಿದ ಎರಡು ತಮಿಳು ಶಾಸನಗಳೂ ಕಂಡುಬರುತ್ತವೆ. ಇದರಲ್ಲಿ ಒಂದು ಕ್ರಿ.ಶ. ೧೦೪೮ರಲ್ಲಿ ಬರೆಸಿದ್ದು, ರಾಜಾಧಿರಾಜನ ಬಗ್ಗೆ ತಿಳಿಸುತ್ತದೆ. ಮತ್ತೊಂದು ಶಾಸನವು ಕ್ರಿ. ಶ. ೧೦೬೧ರದಾಗಿದ್ದು, ರಾಜೇಂದ್ರನ ಬಗ್ಗೆ ತಿಳಿಸುತ್ತದೆ. ಹಾಗೆಯೇ, ಕಲ್ಯಾಣಿ ಚಾಲುಕ್ಯರ ಕೆಲವು ಶಾಸನಗಳನ್ನೂ ಇಲ್ಲಿ ಕಾಣಬಹುದು.

ಈ ಜಿಲ್ಲೆಯು ಹೊಯ್ಸಳ ರಾಜಧಾನಿಯಿಂದ ದೂರದಲ್ಲಿದ್ದರೂ ಇವರ ಕಾಲದಲ್ಲಿ ಪ್ರಮುಖವಾದ ಸ್ಥಳವಾಗಿದ್ದಿತೆಂದರೆ ತಪ್ಪಾಗಲಾರದು. ಇಲ್ಲಿ ಸುಮಾರು ೧೧೦ಕ್ಕೂ ಹೆಚ್ಚಿನ ಹೊಯ್ಸಳ ಶಾಸನಗಳನ್ನು ಕಾಣಬಹುದು. ಇವು ಕ್ರಿ.ಶ. ೧೦೭೮ರಿಂದ ೧೩೪೨ರ ಮಧ್ಯಭಾಗಕ್ಕೆ ಸೇರಿದವುಗಳಾಗಿವೆ. ಈ ವಂಶದ ಎಲ್ಲಾ ರಾಜರುಗಳೂ ಸಾಮಾನ್ಯವಾಗಿ ಈ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ವಶಪಡಿಸಿಕೊಂಡಿದ್ದರು. ಅತೀ ಪುರಾತನವಾದ ಹೊಯ್ಸಳರ ಶಾಸನವು ತಿಪಟೂರಿನಲ್ಲಿ ಕಂಡುಬರುತ್ತದೆ. ಅದು ವಿನಯಾದಿತ್ಯನ (ಕ್ರಿ. ಶ. ೧೦೪೭–೧೦೯೮) ಕಾಲದ್ದಾಗಿದ್ದು, ಅವನ ಮುಖ್ಯಸ್ಥಮಾಯಿಂದನ ವಂಶಾವಳಿಯ ಬಗ್ಗೆ ತಿಳಿಸುತ್ತದೆ. ಇಲ್ಲಿಯ ಎಲ್ಲ ಶಾಸನಗಳಿಂದ ನಮಗೆ ತಿಳಿದುಬರುವ ಅಂಶವೆಂದರೆ, ಹೊಯ್ಸಳ ರಾಜರು ಯಾವ ದೊಡ್ಡ ಯುದ್ಧಗಳನ್ನೂ ಈ ಜಿಲ್ಲೆಯಲ್ಲಿ ನಡೆಸಲಿಲ್ಲ. ಅವರ ಅವಧಿಯಲ್ಲಿ ಇಲ್ಲಿ ಹೆಚ್ಚು ಕಡಿಮೆ ಶಾಂತವಾದ ವಾತಾವರಣವು ಇದ್ದಿತು. ಹೊಯ್ಸಳರ ನಂತರ ಆಳ್ವಿಕೆ ನಡೆಸಿದ ವಿಜಯನಗರ ಹಾಗೂ ಮೈಸೂರು ಒಡೆಯರ ಶಾಸನಗಳೂ ಇಲ್ಲಿ ಕಂಡುಬರುತ್ತವೆ.

ತುಮಕೂರು ಜಿಲ್ಲೆಯ ಸುಮಾರು ಹನ್ನೆರಡು ಎಡೆಗಳಲ್ಲಿ ಹೊಯ್ಸಳರ ಹತ್ತೊಂಬತ್ತು ದೇವಸ್ಥಾನಗಳನ್ನು ಕಾಣಬಹುದು. ಇವು ಮುಖ್ಯವಾಗಿ ತಿಪಟೂರು, ತುರುವೇಕೆರೆ, ಕುಣಿಗಲ್ಲು ಹಾಗೂ ತುಮಕೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿದ್ದು, ಗುಬ್ಬಿ ಹಾಗೂ ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳಲ್ಲಿ ಒಂದೊಂದು ದೇವಸ್ಥಾನವಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಹಾಸನ ಜಿಲ್ಲೆಗೆ ಹೊಂದಿಕೊಂಡಂತೆ ಇರುವ ತಿಪಟೂರು, ತುರುವೇಕೆರೆ ಹಾಗೂ ಕುಣಿಗಲ್ಲುಗಳಲ್ಲೇ ಬಹಳಷ್ಟು ಹೊಯ್ಸಳ ದೇವಸ್ಥಾನಗಳಿರುವುದನ್ನು ಕಾಣಬಹುದು. ಹಾಗೆಯೇ, ಮಂಡ್ಯ ಜಿಲ್ಲೆಯಲ್ಲೂ ಹಾಸನ ಜಿಲ್ಲೆಗೆ ಪಕ್ಕದಲ್ಲಿ ಬರುವ ನಾಗಮಂಗಲ ಹಾಗೂ ಕೃಷ್ಣರಾಜಪೇಟೆ ತಾಲ್ಲೂಕುಗಳಲ್ಲೂ ಹನ್ನೆರಡಕ್ಕೂ ಹೆಚ್ಚು ದೇವಸ್ಥಾನಗಳಿವೆ. ಇದರಿಂದ ಹೊಯ್ಸಳರು ದೂರದ ಪಾವಗಡ, ಮಧುಗಿರಿಗಳಿಗಿಂತ ಹಾಸನ ಜಿಲ್ಲೆಗೆ ಸೇರಿದಂತೆ ಇರುವ ಪಕ್ಕದ ತಾಲ್ಲೂಕುಗಳಲ್ಲಿ ಹೆಚ್ಚಿನ ಹೊಯ್ಸಳ ದೇವಸ್ಥಾನಗಳನ್ನು ಕಟ್ಟಿಸಿರುವುದು ವ್ಯಕ್ತಪಡುತ್ತದೆ.

ಕೈದಾಳದ ಚೆನ್ನಕೇಶವ ಹಾಗೂ ಗಂಗಾಧರೇಶ್ವರ ದೇವಸ್ಥಾನಗಳು ಹೊಯ್ಸಳ ಶೈಲಿಯಲ್ಲಿಯೇ ಪುರಾತನವಾದವುಗಳು. ಇವುಗಳು ಕಲೆ ಮತ್ತು ವಾಸ್ತುಶಿಲ್ಪಗಳ ದೃಷ್ಟಿಯಿಂದ ಮುಖ್ಯವಾದ ದೇವಸ್ಥಾನಗಳಲ್ಲದಿದ್ದರೂ ಇಲ್ಲಿಯ ಕ್ರಿ. ಶ. ೧೧೫೧ರ ಶಾಸನದಿಂದ ಇವುಗಳ ಕಾಲವನ್ನು ತಿಳಿದುಕೊಳ್ಳಬಹುದು. ನೊಣವಿನಕೆರೆಯ ವೇಣುಗೋಪಾಲ ದೇವಸ್ಥಾನವನ್ನು ಕ್ರಿ.ಶ. ೧೨೮೬ರಲ್ಲಿ ಕಟ್ಟಿದ್ದು, ಇದು ಕೊನೆಯ ದೇವಸ್ಥಾನವಾಗಿರಬಹುದು.

ಇಲ್ಲಿರುವ ದೇವಸ್ಥಾನಗಳಲ್ಲಿ ಸುಮಾರು ೯ ದೇವಸ್ಥಾನಗಳು ಶೈವಮತಕ್ಕೂ ಇತರ ೯ ದೇವಸ್ಥಾನಗಳು ವೈಷ್ಣವ ಮತಕ್ಕೂ ಸೇರಿದವುಗಳಾಗಿವೆ. ನಿಟ್ಟೂರಿನಲ್ಲಿ ಒಂದು ಜೈನ ಬಸದಿಯನ್ನು ಸಹಾ ಕಾಣಬಹುದು. ಇವುಗಳಲ್ಲಿ ತುರುವೇಕೆರೆಯ ದೇವಸ್ಥಾನಗಳೂ ಅರಳುಗುಪ್ಪೆ, ನಾಗಲಾಪುರ, ಶೆಟ್ಟಿಕೆರೆ, ವಿಘ್ನಸಂತೆ ಹಾಗೂ ನಿಟ್ಟೂರಿನ ದೇವಸ್ಥಾನಗಳೂ ಮುಖ್ಯವಾದುವು.

**ಮುಖ್ಯ ದೇವಸ್ಥಾನಗಳು :** ನಿಟ್ಟೂರಿನ ಶಾಂತೀಶ್ವರ ಬಸದಿಯು ಈ ಜಿಲ್ಲೆಯ ಏಕೈಕ ಜೈನ ಬಸದಿಯಾದರೂ ಇದು ಬಹಳ ಮುಖ್ಯವಾದುದು. ಇದು ಹೊಯ್ಸಳ ಶೈಲಿಯಲ್ಲಿ ಬಳಪದಕಲ್ಲಿನಲ್ಲಿ ಕಟ್ಟಲ್ಪಟ್ಟಿರುವ ದೇವಸ್ಥಾನ. ಗರ್ಭಗೃಹ, ಸುಕನಾಸಿ, ಒಂಬತ್ತು ಅಂಕಣಗಳಿಂದ ಕೂಡಿದ ಸುಂದರವಾದ ನವರಂಗ ಹಾಗೂ ಒಂದು ಸಣ್ಣ ಮುಖಮಂಟಪದಿಂದ ಕೂಡಿದೆ. ಮುಖ್ಯವಾದ ಅಂಶವೆಂದರೆ, ಇಲ್ಲಿಯ ತಿರುಗು ರಾಟೆಯಿಂದ

ಮಾಡಿರುವ ಸುಂದರ ಕಂಬಗಳು ಹಾಗೂ ಒಂಬತ್ತು ಬೇರೆ ಬೇರೆ ವಿಧಾನಗಳಿಂದ ಮಾಡಿರುವ ಅಂಕಣಗಳು ಗಮನಾರ್ಹವಾದುವು. ಗರ್ಭಗೃಹದಲ್ಲಿ ಕಂಡುಬರುವ ಶಾಂತಿನಾಥ ಪ್ರತಿಮೆಯು ಸುಂದರವಾಗಿದ್ದು, ಹೊಯ್ಸಳ ಶೈಲಿಯ ಕೃತಿಯಾಗಿದೆ ; ನಗುಮುಖದಿಂದ ಕೂಡಿದೆ. ಇದನ್ನು ಸಮಪ್ರಮಾಣದಲ್ಲಿ ಕೆತ್ತಿ ಹೊಳಪನ್ನು ಕೊಡಲಾಗಿದೆ. ಇಲ್ಲಿ ಕಂಡುಬರುವ ಆರು ಶಾಸನಗಳಲ್ಲಿ ಕ್ರಿ.ಶ. ೧೨೮೯ರ ಶಾಸನವು ಈ ಬಸದಿಯ ಹೊರಗೋಡೆಯನ್ನು ಕಟ್ಟಿದುದನ್ನು ತಿಳಿಸುತ್ತದೆ. ಮತ್ತೊಂದು ಶಾಸನದಲ್ಲಿ ಇದನ್ನು ಕಟ್ಟಿದ ಶಿಲ್ಪಿ ಮಲೋಜಿಯ ಮಲ್ಲಯ್ಯನ ಬಗ್ಗೆ ಉಲ್ಲೇಖವಿದೆ. ಈತನ ಹೆಸರು ಬೇರೆಲ್ಲೂ ಕಂಡುಬರದೇ ಇರುವುದು ಒಂದು ವಿಶೇಷ.

ಅರಳುಗುಪ್ಪೆಯ ಚೆನ್ನಕೇಶವ ದೇವಾಲಯವು ಪ್ರಮುಖವಾದುದೆಂದು ಪರಿಗಣಿಸಲ್ಪಟ್ಟಿದ್ದು, ಹೊಯ್ಸಳ ಶೈಲಿಯ ಎಲ್ಲ ಮುಖ್ಯ ಗುಣಲಕ್ಷಣಗಳನ್ನೂ ಹೊಂದಿದೆ.

ತುರುವೇಕೆರೆಯ ಚೆನ್ನಿಗರಾಯ ಹಾಗೂ ಶಂಕರೇಶ್ವರ ದೇವಸ್ಥಾನಗಳು ಈ ಜಿಲ್ಲೆಯ ಹೊಯ್ಸಳ ಶೈಲಿಯ ದೇವಸ್ಥಾನಗಳೆಂದು ಹೇಳಿದರೆ ತಪ್ಪಾಗಲಾರದು. ಇವು ೩ನೇ ನರಸಿಂಹನ ಕಾಲಕ್ಕೆ ಸೇರಿದವು. ಚೆನ್ನಿಗರಾಯ ದೇವಸ್ಥಾನದ ಗರ್ಭಗುಡಿಯಲ್ಲಿ ಗರುಡಪೀಠದ ಮೇಲೆ ಸಮಭಂಗದಲ್ಲಿ ನಿಂತಿರುವ ಐದು ಅಡಿ ಎತ್ತರದ ವಿಷ್ಣುವಿನ ಮೂರ್ತಿಯು ಸುಂದರವಾಗಿ ಮೂಡಿಬಂದಿದೆ.

ಈ ಎರಡೂ ದೇವಸ್ಥಾನಗಳ ಶಿಖರಗಳು ಗಮನಸೆಳೆಯುತ್ತವೆ. ಶಿಖರದ ಅಮಲಶಿಲೆಯು ಕೆಳಗಿನಿಂದ ಮೇಲಿನವರೆಗೂ ವೃತ್ತಾಕಾರವಾಗಿದ್ದು, ನಾಗರ ಹಾಗೂ ವೇಸರ ಶೈಲಿಗಳ ಹೊಂದಾಣಿಕೆಯನ್ನು ಕಾಣಬಹುದು. ಇಲ್ಲಿಯ ವಿಮಾನ ಒಂದರಲ್ಲೇ ದ್ರಾವಿಡ, ನಾಗರ ಹಾಗೂ ವೇಸರ ಶೈಲಿಗಳನ್ನು ಕಾಣಬಹುದು. ಯಾವ ಭಿತ್ತಿಚಿತ್ರಗಳನ್ನು ಕಾಣದಿದ್ದರೂ ವಾಸ್ತುಶಿಲ್ಪದಲ್ಲಿ ಬೇರೆ ಯಾವ ದೇವಸ್ಥಾನಕ್ಕೂ ಕಡಿಮೆ ಇಲ್ಲದಂತೆ ಕೆತ್ತಿದ್ದು, ಇತರ ದೇವಸ್ಥಾನಗಳಿಗಿಂತ ಆಕರ್ಷಕವಾಗಿದೆ.

ಕುಣಿಗಲ್ಲಿನಲ್ಲಿ ಮೂರು ಸಣ್ಣ ಹೊಯ್ಸಳ ದೇವಸ್ಥಾನಗಳಿದ್ದು, ಇವುಗಳಲ್ಲಿ ವಿಜಯನಗರ ಕಾಲದ ವಾಸ್ತುಶಿಲ್ಪವನ್ನೂ ಕಾಣಬಹುದು. ನಾಗಲಾಪುರದ ಚೆನ್ನಕೇಶವ ದೇವಸ್ಥಾನ ಮತ್ತು ಶೆಟ್ಟಿಕೆರೆಯ ಯೋಗಮಾಧವ ದೇವಸ್ಥಾನಗಳು ಹೊಯ್ಸಳ ಶೈಲಿಯ ಎಲ್ಲ ಗುಣಲಕ್ಷಣಗಳನ್ನೂ ಹೊಂದಿವೆ. ವಿಘ್ನಸಂತೆಯ ಬಾಲಲಿಂಗೇಶ್ವರ ಹಾಗೂ ಲಕ್ಷ್ಮೀನರಸಿಂಹ ದೇವಸ್ಥಾನಗಳು ಮುಖ್ಯ ದೇವಸ್ಥಾನಗಳಾಗಿವೆ. ಲಕ್ಷ್ಮೀನರಸಿಂಹ ದೇವಸ್ಥಾನವು ತ್ರಿಕೂಟಾಚಲವಾಗಿದ್ದು, ಕಿಕ್ಕೇರಿ ಹಾಗೂ ಅರಸೀಕೆರೆ ದೇವಸ್ಥಾನಗಳ ಮಾದರಿಯಲ್ಲಿದೆ. ಇದರಲ್ಲಿ ಜಗತಿ ಕಂಡುಬರುವುದಿಲ್ಲ. ಅಧಿಷ್ಠಾನದಲ್ಲಿ ಅಡ್ಡಪಟ್ಟಿಕೆಗಳನ್ನು ಕಾಣಬಹುದು. ಇದರಲ್ಲಿ ನಕ್ಷತ್ರಾಕಾರವು ಕಂಡುಬರುವುದಿಲ್ಲ ಹಾಗೂ ಭಿತ್ತಿಯಲ್ಲಿ ಯಾವುದೇ ಮೂರ್ತಿಗಳು ಇಲ್ಲ. ಬದಲಿಗೆ ಅಲ್ಲಲ್ಲಿ ಅಲಂಕಾರ ಕಂಬಗಳನ್ನು ಕೆತ್ತಿರುವುದನ್ನು ಕಾಣಬಹುದು.

ಹೀಗೆ ಈ ಜಿಲ್ಲೆಯಲ್ಲಿ ಹೊಯ್ಸಳ ಶೈಲಿಗೆ ಸೇರಿದ ಎಲ್ಲ ರೀತಿಯ ಸುಂದರ ದೇವಸ್ಥಾನಗಳನ್ನು ಕಾಣಬಹುದು. ಇವುಗಳಲ್ಲಿ ಕಂಡುಬರುವ ಶಾಸನಗಳು ಹೊಯ್ಸಳ ಇತಿಹಾಸವನ್ನು ತಿಳಿದುಕೊಳ್ಳಲು ಬಹಳ ಸಹಾಯಕವಾಗಿವೆ. ಧಾರ್ಮಿಕ ಇತಿಹಾಸ ಹಾಗೂ ಹೊಯ್ಸಳ ಕಲೆ, ವಾಸ್ತುಶಿಲ್ಪ ಮತ್ತು ಶಿಲ್ಪಗಳ ಬಗ್ಗೆ ಮಹತ್ತರವಾದ ವಿಷಯಗಳನ್ನು ತಿಳಿದುಕೊಳ್ಳುವಲ್ಲಿ ಈ ಜಿಲ್ಲೆಯ ದೇವಸ್ಥಾನಗಳು ಮುಖ್ಯಪಾತ್ರ ವಹಿಸುತ್ತವೆ.

### ಆಧಾರ ಗ್ರಂಥಗಳು


೧. ಮಂಡ್ಯ ಜಿಲ್ಲೆಯ ಗೆಜೆಟಿಯರ್

೨. ಡಾ॥ ಬಿ. ಶೇಕ್‌ಅಲಿ (ಸಂ.) : ದಿ ಹೊಯ್ಸಳ ಡೈನಾಸ್ಟಿ

೩. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೬

೪. ಆರ್ಕ್ಯಾಲೋಜಿಕಲ್ ಸ್ಟಡೀಸ್, ಸಂಪುಟ ೩

ಕೆ. ವಸಂತಲಕ್ಷ್ಮಿ

# ತುಮಕೂರು ಜಿಲ್ಲೆಯ ಕೇಶವಶಿಲ್ಪಗಳು

ಅರುಣ ಸರಸಿಜ ಶ್ರೀ ಸೋದರ್ರೈರುತ್ಕು
ದಾರ್ರೈರಖಿಲ ಭುವನ ರಕ್ಷಾ ದೀಕ್ಷಿತೈರ್ದ್ರ್ವಿಷ್ಟಿ
ಪಾತ್ಯೈಃ ।
ತರುಣ ತುಲಶಿಮಾಲಾಲಂಕೃತೋರುಸ್ಥಳ ಶ್ರೀ
ಕರುಣಯತಿ ಕದಾನಃ ಕೇಶವೇಶಃ ಕೃಪೇಶಾಃ ॥[1]

ದಕ್ಷಿಣಭಾರತದ ಪ್ರಮುಖ ಅರಸು ಮನೆತನಗಳಲ್ಲಿ ಹೊಯ್ಸಳ ವಂಶವು ಒಂದಾಗಿದ್ದು, ಇವರ ಕಾಲದಲ್ಲಿ ಕನ್ನಡನಾಡು ಸಾಹಿತ್ಯ ಮತ್ತು ಕಲೆಗಳಲ್ಲಿ ವಿಶೇಷ ಪ್ರಗತಿ ಸಾಧಿಸಿರುವುದನ್ನು ಕಾಣುತ್ತೇವೆ. ಬೇಲೂರು ಮತ್ತು ಸೋಮನಾಥಪುರದ ಕೇಶವ ದೇವಾಲಯಗಳ ಶಿಲ್ಪಗಳು ಇವರ ಕಲೆಯಲ್ಲಿ ಎದ್ದು ಕಾಣುವಂತಹವಾಗಿವೆ. ಕರ್ನಾಟಕದಲ್ಲಿ ಸುಮಾರು ಇನ್ನೂರೈವತ್ತಕ್ಕೂ ಹೆಚ್ಚು ದೇವಾಲಯಗಳನ್ನು ಇವರ ಕಾಲದಲ್ಲಿ ಕಟ್ಟಲಾಗಿದ್ದು, ಅವುಗಳಲ್ಲಿ ಕೆಲವು ಮಾತ್ರ ಇಂದಿಗೂ ಸುಸ್ಥಿತಿಯಲ್ಲಿ ಉಳಿದಿವೆ. ಇವುಗಳಲ್ಲಿ ಜೈನ, ಶೈವ, ವೈಷ್ಣವ ದೇವಾಲಯಗಳೂ ಸೇರಿದ್ದು, ಇವುಗಳ ನಿರ್ಮಾಣದಿಂದ ಆಗಿನ ಸಮಾಜದಲ್ಲಿ ಧಾರ್ಮಿಕ ಸಮನ್ವಯವನ್ನು ಸಾಧಿಸಲು ಯತ್ನಿಸಿರುವಂತಿದೆ.

ಪ್ರಾಚೀನ ಕಾಲದಿಂದಲೂ ವಿಷ್ಣುವಿನ ಆರಾಧನೆಯು ಕರ್ನಾಟಕದಲ್ಲಿ ಇದ್ದಿತಾದರೂ ಕ್ರಿ. ಶ. ಸು. ೧೦ನೇ ಶತಮಾನದ ನಂತರದಲ್ಲಿ ವೈಷ್ಣವಧರ್ಮವು ವ್ಯಾಪಕವಾಗಿ ಹರಡಿತು. ವಿಷ್ಣುವೇ ಸರ್ವಲೋಕಾಧಿಪತಿ ಎಂಬ ಭಾವನೆ ಬೆಳೆದು ವಿಷ್ಣುವಿನ ಆರಾಧನೆಯು ಪ್ರಮುಖವಾಯಿತು. ವೈಷ್ಣವಾಗಮಗಳಲ್ಲಿ ವೈಖಾನಸ ಮತ್ತು ಪಾಂಚರಾತ್ರಾ ಆಗಮಗಳೆಂದು ಎರಡು ವಿಧದ ಆಗಮಗಳಿವೆ. ಇವುಗಳಲ್ಲಿ ಶ್ರೀ ರಾಮಾನುಜಾಚಾರ್ಯರು ಪಾಂಚರಾತ್ರ ಆಗಮವನ್ನು ಪುರಸ್ಕರಿಸಿದರು. ಪಾಂಚರಾತ್ರ ಆಗಮದಲ್ಲಿ ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಬಳಕೆ ಹೆಚ್ಚಾಗಿದೆಯೆಂದು ವಿದ್ವಾಂಸರು ತಿಳಿಸುತ್ತಾರೆ.[2] ಇದರಂತೆ, ಸು. ೧೧ನೇ ಶತಮಾನದಲ್ಲಿ ಮತ್ತು ನಂತರದ ಕಾಲದಲ್ಲಿ ಹೊಯ್ಸಳರ ನಾಡಿನ ಅನೇಕ ಭಾಗಗಳಲ್ಲಿ ಕೇಶವನ ದೇವಾಲಯಗಳು ನಿರ್ಮಾಣಗೊಂಡಿವೆ.

ವಿಷ್ಣುವಿನ ವಿವಿಧ ರೂಪಗಳಲ್ಲಿ ಕೇಶವನ ರೂಪವು ಹೆಚ್ಚು ಜನಪ್ರಿಯವಾಗಿದೆ. ಕೇಶವನ ಮಹಿಮೆಯನ್ನು ಗಮನಿಸಿದಾಗ, ವಿಷ್ಣುವು ಕೇಶಿ ಎಂಬ ರಾಕ್ಷಸನನ್ನು ವಧಿಸಿ ಲೋಕಕಲ್ಯಾಣವನ್ನು ಉಂಟುಮಾಡಿ, ಕಷ್ಟವನ್ನು ಪರಿಹರಿಸಿದ್ದರಿಂದ ಕೇಶವನೆನಿಸಿದನೆಂದು ತಿಳಿದು ಬರುವುದು. ಬಹುಶಃ 'ಕೇಶವಃ ಕ್ಲೇಶ ನಾಶಾಯ' ಎನ್ನುವ ಭಾವನೆ ಇದರಿಂದಾಗಿರಬಹುದು. ಇದರಂತೆ 'ಕೇಶ' ಎಂದರೆ ಸುಂದರವಾದ ಮುಡಿ (ಕೂದಲು) ಎಂದೂ ಅರ್ಥವಿದೆ. ಕೇಶವ ಎಂಬುದು ಕೃಷ್ಣನ ಇನ್ನೊಂದು ಹೆಸರಾದ್ದರಿಂದ 'ಮುಡಿ'ಯಿಂದಲೇ ಈ ಹೆಸರು ಉಂಟಾಗಿರಲೂಬಹುದು. ಹಾಗೆಯೇ, ಈ ಪದವನ್ನು ಬಿಡಿಸಿ 'ಕ' ಎಂದರೆ ಬ್ರಹ್ಮ ; 'ಈಶಃ' ಎಂದರೆ ಈಶ್ವರ : ಕ + ಈಶಃ + ವ = ಕೇಶವ—

1. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೫ (ಹಳೆಯ ಆವೃತ್ತಿ), ಬೇಲೂರು, ಶಾಸನ ಸಂಖ್ಯೆ ೧೬
2. ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ : ನೆಲೆ—ಹಿನ್ನೆಲೆ, ಬೆಂಗಳೂರು, ೧೯೭೫, ಪು. ೧೪೨

ಎಂದು ಹೇಳಿ ಶಿವ, ಬ್ರಹ್ಮ ಇಬ್ಬರಿಗೂ ಒಡೆಯನಾದ 'ಪರಮೇಶ್ವರ'ನೆಂದು ಅರ್ಥೈಸಿ ಮಹಿಮೆಯನ್ನು ಹೊಗಳುತ್ತಾರೆ. ಒಟ್ಟನಲ್ಲಿ ವಿಷ್ಣುವಿನ ವ್ಯೂಹಾವತಾರದ ರೀತಿಯನ್ನು ಗಮನಿಸಿದರೆ, ಕೇಶವನ ರೂಪವು ಪರ ವಾಸುದೇವನಿಂದ ಸ್ವತಃ ರೂಪಾಂತರಗೊಂಡ ಮೊದಲ ರೂಪವಾಗಿದ್ದು, ಇವನ ರೂಪದಲ್ಲಿ ಭಗವಂತನಲ್ಲಿರುವ ಷಡ್ಗುಣೈಶ್ವರ್ಯವು[3] ತುಂಬಿರುತ್ತದೆ. ಆದ್ದರಿಂದಲೇ ಕೇಶವನ ರೂಪವು ಅತ್ಯಂತ ಮಹಿಮೆಯುಳ್ಳದ್ದೂ ಜನ ಪ್ರಿಯದ್ದೂ ಆಗಿದೆ.

ಈ ಕೇಶವನ ಶಿಲ್ಪವನ್ನು ನಿರ್ಮಿಸಿರುವುದನ್ನು ನೋಡಿದರೆ, ಸುಮಾರು ಎಲ್ಲಾ ಬಿಂಬಗಳು ಒಂದೇ ರೀತಿಯಲ್ಲಿಯೂ ಸುಂದರವಾಗಿಯೂ ಇವೆ. ಅಂತೆಯೇ, ಕೇಶವನ ಹೆಸರಿನ ಹಿಂದೆ, ಸುಂದರ ಎಂಬ ಅರ್ಥದಲ್ಲಿ 'ಚೆನ್ನ' ಪದವು ಸೇರಿ 'ಚೆನ್ನಕೇಶವ'ನೆಂದೇ ಕರೆಯಲಾಗಿದೆ. ಕೇಶವದೇವರ ಶಿಲ್ಪವನ್ನು ನಿರ್ಮಿಸುವಲ್ಲಿ ಶಿಲ್ಪಿಯು ಪೀಠವನ್ನು ಭದ್ರಪೀಠವನ್ನಾಗಿಸಿ, ಅದರ ಮೇಲೆ ಪದ್ಮದಳಗಳನ್ನು ಬಿಡಿಸಿರುತ್ತಾನೆ. ಪಾಣಿವಟ್ಟದ ನಳಿಕೆಯಂತೆ ಈ ಪೀಠದ ನಳಿಕೆಯು ದೇವರ ಎಡಗಡೆಗೆ ಬಂದಿರುತ್ತದೆ. ಬಹುಶಃ ಶಿಲ್ಪಿಯು ಈ ಮೂಲಕ ಬ್ರಹ್ಮ ಮತ್ತು ಶಿವನ ಸಂಕೇತಗಳ ಮೇಲೆ ಕೇಶವನನ್ನು ನಿಲ್ಲಿಸಿ, ಕೇಶವನು ಸರ್ವಾಧಿಪತಿ ಎಂಬುದನ್ನು ಸೂಚಿಸಿರುವುದಾಗಿರಬೇಕು. ಹೀಗಾಗಿ ತ್ರೈಪುರುಷರ ಸಂಮ್ಮಿಲನದಂತಿರುವ ಈ ಕೇಶವನ ರೂಪವು ಎಲ್ಲರ ಗೌರವವನ್ನು ಗಳಿಸಿ ಸಮಷ್ಟಿದೈವದಂತೆ ಜನಪ್ರಿಯವಾಗಿದೆ. ಇಂತಹ ಕೇಶವ ದೇವಾಲಯಗಳು ಹೊಯ್ಸಳರ ಕಾಲದ ವಿಶೇಷವಾದ ಕೊಡುಗೆ ಎನ್ನಬಹುದು.

ಪ್ರಸ್ತುತ ಪ್ರಬಂಧದ ಉದ್ದೇಶವಾದರೂ ತುಮಕೂರು ಜಿಲ್ಲೆಯ ಕೇಶವ ದೇವಾಲಯಗಳ ಹೊಯ್ಸಳರ ಕಾಲದ ಚೆನ್ನಕೇಶವ ಶಿಲ್ಪಗಳ ಬಗೆಗೆ ಬೆಳಕು ಚೆಲ್ಲಬೇಕೆಂಬುದೇ ಆಗಿದೆ. ಈ ಜಿಲ್ಲೆಯ ಅರಳುಗುಪ್ಪೆ, ತುರುವೇಕೆರೆ, ನಾಗಲಾಪುರ, ಬೆಸಕನಕೆರೆ, ಕೈದಾಳ ಮೊದಲಾದ ಸ್ಥಳಗಳಲ್ಲಿ ಚೆನ್ನಕೇಶವ ದೇವಾಲಯಗಳಿವೆ.

ಅರಳುಗುಪ್ಪೆಯ ಕೇಶವ ದೇವಾಲಯವು ಹೊಯ್ಸಳರ ಶೈಲಿಯ ಸುಂದರವಾದ ದೇವಾಲಯಗಳಲ್ಲಿ ಒಂದಾಗಿದೆ. ಈಗ ಈ ದೇವಾಲಯದ ಗರ್ಭಗೃಹದಲ್ಲಿರುವ ಗರುಡಪೀಠದ ಮೇಲೆ ಸಮಭಂಗಿಯಲ್ಲಿ ಸ್ಥಾನೀಕನಾದ ಕೇಶವನ ಬಿಂಬವಿದೆ. ಎರಡು ಪಟ್ಟಿಕೆಗಳುಳ್ಳ ಪ್ರಭಾವಳಿಯ ಸಿಂಹಲಲಾಟದ ಕೆಳಗೆ ಕೇಶವನ ಬಿಂಬವಿದೆ. ಪ್ರಭಾವಳಿಯಲ್ಲಿಯ ಬಳ್ಳಿಯ ನಡುವೆ ವಿಷ್ಣುವಿನ ದಶಾವತಾರದ ಚಿಕಣಿಬಿಂಬಗಳನ್ನು ಬಿಡಿಸಲಾಗಿದೆ. ಈ ಮಕರತೋರಣವು ಎರಡುಕಡೆ ಜೋಡಿ ಕುಡ್ಯಸ್ತಂಭಗಳ ಮೇಲೆ ನಿಂತಿದೆ.

ಸುಮಾರು ೪ ಅಡಿ ಎತ್ತರವಿರುವ ಕೇಶವನ ಬಿಂಬದಲ್ಲಿ ಕರಂಡಮಕುಟವನ್ನೂ ಕಿವಿಗಳಲ್ಲಿ ಮಕರ ಕುಂಡಲಗಳನ್ನೂ ಕಾಣುತ್ತೇವೆ. ಕಣ್ಣುಗಳು ಅಗಲವಾಗಿದ್ದು ಕೊರಳಲ್ಲಿ ಕಂಠಿಕೆ, ಉರಹಾರಗಳೂ ಯಜ್ಞೋಪವೀತ ಮತ್ತು ವೈಜಯಂತಿಯೂ ಇವೆ. ಕೈಗಳಲ್ಲಿ ಕಂಕಣವೂ ಕಾಲಿನಲ್ಲಿ ಅಂದಿಗೆ, ಗೆಜ್ಜೆ, ಕಾಲ್ಕಗಡವೂ ಇವೆ. ಈ ದೇವನ ಇಬ್ಬದಿಯಲ್ಲೂ ಸ್ತ್ರೀಬಿಂಬಗಳಿದ್ದು, ಅವುಗಳಲ್ಲಿ ಬಲಭಾಗದಲ್ಲಿರುವ ದೇವಿಯ ಕೈಗಳಲ್ಲಿ ಕಳಶ ಮತ್ತು ಕಮಲಗಳನ್ನೂ ಎಡಗಡೆ ಇರುವ ದೇವಿಯ ಕೈಗಳಲ್ಲಿ ಕಳಶ ಮತ್ತು ಪಾಶಗಳನ್ನೂ ಕಾಣುತ್ತೇವೆ. ಆದರೆ ಈ ಕೇಶವಬಿಂಬವು ಪೀಠಕ್ಕೆ ಹೋಲಿಸಿದರೆ ಚಿಕ್ಕ ಬಿಂಬವಾಗಿದ್ದು, ಮೂಲಬಿಂಬವಲ್ಲವೆನ್ನಿಸುತ್ತದೆ. ದೇವಾಲಯದ ನವರಂಗದಲ್ಲಿ ಕೇಶವನ ಮುರಿದಿರುವ ಬಿಂಬವೊಂದಿದ್ದು, ಮೈಸೂರು ಪುರಾತತ್ತ್ವ ಇಲಾಖೆಯ ವರದಿಯಲ್ಲಿ ಇದು ಮೂಲಬಿಂಬವಾಗಿದ್ದಿರಬೇಕೆಂದು ಊಹಿಸಲಾಗಿದೆ.[5] ಮುರಿದುಹೋಗಿರುವ ಈ ಬಿಂಬವು ಹೊಯ್ಸಳರ ಶೈಲಿಯ ಸುಂದರವಾದ ಬಿಂಬವೇ ಆಗಿದ್ದು, ಈಗಿರುವ ಬಿಂಬಕ್ಕಿಂತ ಚೆನ್ನಾಗಿದೆ.

3. ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು — ಈ ಗುಣಗಳನ್ನು ಷಡ್ಗುಣೈಶ್ವರ್ಯವೆನ್ನುವರು.

4. ಹೊಯ್ಸಳರ ರಾಜ್ಯದಲ್ಲಿ ಕೇಶವಪಂಥದಂತಹ ಚಳುವಳಿಯೊಂದು ನಡೆದಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಈ ಕೇಶವಪಂಥದ ಅಧಿದೈವ ವಿಷ್ಣುವಿನ ವ್ಯೂಹಮೂರ್ತಿಗಳಲ್ಲೊಬ್ಬನಾದ ಕೇಶವನೇ ಆಗಿರಬೇಕು. ಈ ಪಂಥದ ಮುಂಚೂಣಿಯಲ್ಲಿ ಯಾರಿದ್ದರು, ಇದರ ವ್ಯಾಪಕ ಪರಿಣಾಮವೇನು, ಹರವು ಎಷ್ಟು ಮುಂತಾದವುಗಳ ಬಗ್ಗೆ ವಿವರವಾದ ಅಧ್ಯಯನ ನಡೆದಲ್ಲಿ ಇನ್ನೂ ಹೆಚ್ಚಿನ ಸಂಗತಿಗಳು ಹೊರಬರಬಹುದಾಗಿದೆ.

5. ಆನ್ಯುಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್, ೧೯೩೫, ಪು. ೮೦

ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯದಲ್ಲಿರುವ ಕೇಶವನ ಬಿಂಬವು ಸಹಾ ಹೊಯ್ಸಳರ ಶೈಲಿಯದೇ. ಆದರೆ ಇದನ್ನು ಇಲ್ಲಿ ಪರಿವಾರದೇವತೆಯಂತೆ ಇಡಲಾಗಿದೆ.

ತುರುವೇಕೆರೆಯ ಕೇಶವ ದೇವಾಲಯದ ಶಿಲ್ಪವು ಸರಿಯಾದ ಸಂರಕ್ಷಣೆ ಸಿಗದೆ ಕಳಾಹೀನವಾದಂತಿದೆ. ಈ ಶಿಲ್ಪವನ್ನು ನಿರ್ಮಿಸಿರುವ ಶಿಲ್ಪಿಯು ಬಹುಶಃ ಹೆಚ್ಚು ನುರಿತವನಲ್ಲದಿರಬಹುದು. ಅಂತೆಯೇ, ಹೊಯ್ಸಳರ ಕಾಲದ ಶಿಲ್ಪವಾದರೂ ಇದು ಅವರ ಕಾಲದ ಶಿಲ್ಪವೇ ಎಂದು ಅನುಮಾನ ಬರುವಷ್ಟರಮಟ್ಟಿಗೆ ಅಂದಗೆಟ್ಟಿದೆ. ಆದರೆ ಸರಿಯಾಗಿ ಗಮನಿಸಿದರೆ, ದೇವರಿಗೆ ಬಿಡಿಸಲಾಗಿರುವ ನೀಳವಾದ ಬೆರಳುಗಳು, ಮಕುಟದಲ್ಲಿ ಬಿಡಿಸಲು ಯತ್ನಿಸಿರುವ ಮಣಿಮಾಲೆ, ಪ್ರಭಾವಳಿಯಲ್ಲಿ ಮೂಡಿಸಿರುವ ದಶಾವತಾರದ ಚಿಕಣಿಬಿಂಬಗಳು ಹಾಗೂ ಮಕರತೋರಣವನ್ನು ಬಿಡಿಸಿರುವ ಮಾದರಿಗಳು ಈ ಬಿಂಬವು ಹೊಯ್ಸಳರ ಶೈಲಿಯಲ್ಲಿಯೇ ನಿರ್ಮಿತವಾದದ್ದೆಂದು ದೃಢಪಡಿಸುತ್ತವೆ. ಈ ಬಿಂಬವು ಸುಮಾರು ೪ ಅಡಿ ಎತ್ತರದ ಮೂರ್ತಿಯಾಗಿದೆ. ಇದರ ಅಂಗವಿನ್ಯಾಸದಲ್ಲಿ ಉದರಭಾಗವು ವಿಸ್ತಾರವಾಗಿದ್ದು, ಮೂರ್ತಿಯನ್ನು ಅಂದಗೆಡಿಸಿದೆಯೆಂದು ವಿದ್ವಾಂಸರು ಉಲ್ಲೇಖಿಸುತ್ತಾರೆ.[6] ಇದು ಹೊಯ್ಸಳರ ಶೈಲಿಯ ಸಾಮಾನ್ಯವಾದ ಬಿಂಬವಾಗಿದೆ.

ನಾಗಲಾಪುರದ ಕೇಶವ ದೇವಾಲಯವು ಹೊಯ್ಸಳರ ಕಾಲದ ಸುಂದರ ದೇವಾಲಯವಾಗಿದೆ. ಆದರೆ ಗರ್ಭಗೃಹದಲ್ಲಿ ಈಗ ಇರುವ ಬಿಂಬವು ವಿಷ್ಣುವಿನದೇ ಆದರೂ ಇದು ಕ್ರಮವಾಗಿ ವರದಹಸ್ತ, ಚಕ್ರ, ಶಂಖ ಮತ್ತು ಕಟೀಹಸ್ತಗಳನ್ನೊಳಗೊಂಡಿರುವುದರಿಂದ ಕೇಶವನದಲ್ಲವೆಂದು ತಿಳಿಯಬಹುದು. ಇದರಂತೆ, ಬಿಂಬದಲ್ಲಿ ಕಾಣಬರುವ ಆಭರಣದ ವಿನ್ಯಾಸ ಮತ್ತು ಅಂಗವಿನ್ಯಾಸಗಳು ಈ ಮೂರ್ತಿಯು ನಂತರದ ಕಾಲದ್ದಾಗಿದ್ದು, ಎಲ್ಲಿಂದಲೋ ತಂದಿಡಲ್ಪಟ್ಟಿರುವುದಾಗಿದೆಯೆಂದು ಪೀಠದ ಆಧಾರದಿಂದ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಆದ್ದರಿಂದ ಈ ದೇವಾಲಯದಲ್ಲಿ ಕೇಶವ ಇಲ್ಲ.

ನಾಗಲಾಪುರದ ಬಳಿಯಲ್ಲೇ ಇರುವ ಮತ್ತೊಂದು ಗ್ರಾಮವೆಂದರೆ ಬೆನಕನಕೆರೆ. ಇಲ್ಲಿಯೂ ಒಂದು ಚೆನ್ನಕೇಶವ ದೇವಾಲಯವಿದೆ. ಆದರೆ ಈ ದೇವಾಲಯವು ಒಮ್ಮೆ ಜೀರ್ಣೋದ್ಧಾರವಾಗಿರುವುದರಿಂದ ಈ ದೇವಾಲಯದ ಮೂಲಸ್ವರೂಪದ ಬಗೆಗೆ ಏನೂ ತಿಳಿಯುವಂತಿಲ್ಲ. ಆದರೆ ವೇದಿಕೆಯ ಮೇಲೆ ಕಟ್ಟಲಾಗಿದ್ದ ದೇವಾಲಯವೆಂದು ಇಂದು ಮಣ್ಣಿನ ಗುಡ್ಡದ ಮೇಲಿರುವ ಕಾರಣದಿಂದ ಊಹಿಸಬಹುದಾಗಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಸ್ವಲ್ಪವೂ ಮುಕ್ಕಾಗದಿರುವ ಹೊಯ್ಸಳರ ಶೈಲಿಯ ಕೇಶವನ ಬಿಂಬವಿದ್ದು, ಕುಡ್ಯಸ್ತಂಭಗಳನ್ನು ಧರಿಸಿರುವ ಮಕರತೋರಣದ ಕೆಳಗೆ ಸಮಭಂಗಿಯಲ್ಲಿ ನಿಂತಿದೆ. ಕೇಶವನು ಕೈಗಳಲ್ಲಿ ಕ್ರಮವಾಗಿ ಕಮಲ, ಶಂಖ, ಚಕ್ರ ಮತ್ತು ಗದೆಗಳನ್ನು ಹಿಡಿದಿದ್ದಾನೆ. ಮಕರತೋರಣದಲ್ಲಿರುವ ಪಟ್ಟಿಕೆಯಲ್ಲಿ ದಶಾವತಾರದ ಚಿಕಣಿಬಿಂಬಗಳನ್ನು ಬಿಡಿಸಲಾಗಿದ್ದು ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಮತ್ತು ವಾಮನರ ಶಿಲ್ಪಗಳು ಯಥಾವತ್ತಾಗಿವೆ. ಆದರೆ ಇನ್ನೊಂದು ಭಾಗದಲ್ಲಿ ಮುಂದಿನ ಅವತಾರಗಳ ಶಿಲ್ಪವಿರದೆ, ಅಂಜಲಿಬದ್ಧರಾದ ಭಕ್ತರ ಬಿಂಬಗಳನ್ನು ಬಿಡಿಸಲಾಗಿದೆ. ಮೂರ್ತಿಯ ಮುಖವು ನೀಳವಾಗಿದ್ದು, ಅದರ ಶಿರದಲ್ಲಿ ಕಿರೀಟ-ಮಕುಟವನ್ನೂ ಕಿವಿಗಳಲ್ಲಿ ಮಕರಕುಂಡಲಗಳನ್ನೂ ಕಾಣಬಹುದು. ಕೊರಳ್ಲಿ ಕಂಠಿಕೆ, ರತ್ನಮಾಲೆ, ಪದಕದ ಹಾರ, ಉರಹಾರಗಳಲ್ಲದೆ, ಯಜ್ಞೋಪವೀತ, ವೈಜಯಂತಿಮಾಲೆಗಳೂ ಇವೆ. ಉದರಬಂಧವು ಸುಂದರವಾಗಿದೆ. ಕಟೀಬಂಧವು ಪುಷ್ಪಯುಕ್ತವಾಗಿದೆ. ಕೈಗಳಲ್ಲಿ ಎರಡು ಕಡಗಗಳೂ ಬೆರಳಿಗೆ ಉಂಗುರಗಳೂ ಇವೆ. ಕಾಲಿನಲ್ಲಿ ಅಂದಿಗೆ, ಗೆಜ್ಜೆ, ಕಾಲ್ಕಡಗಗಳಲ್ಲದೆ, ಕಾಲಿನ ಎಲ್ಲ ಬೆರಳಿನಲ್ಲೂ ಉಂಗುರಗಳಿವೆ. ದೇವರಿಗೆ ಹಿಂದಿನಿಂದ ವಸ್ತ್ರವನ್ನು ಇಳಿಬಿಟ್ಟಿರುವಂತೆ ಕೆತ್ತಲಾಗಿದೆ. ಮೂಲಬಿಂಬಕ್ಕೆ ಸೇರಿದಂತಿರುವ ಪೀಠಭಾಗದ ಅಡಿಯಲ್ಲಿ ಅಷ್ಟದಳದ ಪದ್ಮವೊಂದನ್ನು ಬಿಡಿಸಲಾಗಿದೆ. ಈ ಬಿಂಬವನ್ನಿಟ್ಟಿರುವ ಪೀಠದ ಮಧ್ಯಭಾಗದಲ್ಲಿ ಅಂಜಲಿಬದ್ಧನಾದ ಗರುಡನ ಬಿಂಬವಿದೆ. ಈ ಬಿಂಬವು ಹೊಯ್ಸಳರ ಶೈಲಿಯದೇ ಆದರೂ ಹೊಯ್ಸಳರ ಕಾಲದ ಕೊನೆಯಲ್ಲಿ ಕೆತ್ತಲಾಗಿರುವ ಬಿಂಬವಾಗಿದ್ದಿರಬೇಕು.

6. ಅದೇ, ೧೯೩೪, ಪು. ೨೮

ಕೈದಾಳದ ಕೇಶವ ದೇವಾಲಯದ ವಾಸ್ತು ವಿನ್ಯಾಸವು ಹೊಯ್ಸಳರ ದೇವಾಲಯದಂತಿರದಿದ್ದರೂ ಇಲ್ಲಿಯ ಶಿಲ್ಪವು ಈ ಜಿಲ್ಲೆಯಲ್ಲಿ ಕಾಣಸಿಗುವ ಎಲ್ಲ ಕೇಶವಶಿಲ್ಪಗಳಿಗಿಂತಲೂ ಅತ್ಯಂತ ಸುಂದರವಾದುದಾಗಿದೆ. ಸುಮಾರು ಎರಡೂವರೆ ಅಡಿ ಎತ್ತರದ ಕಮಲ ಪೀಠದ ಮೇಲೆ ಕೇಶವನು ಸಮಭಂಗಿಯಲ್ಲಿ ನಿಂತಿದ್ದಾನೆ. ಶಿಲ್ಪಿಯು ಪೀಠವನ್ನು ಬ್ರಹ್ಮನ ಭದ್ರಪೀಠದಂತೆ ಬಿಡಿಸಿ, ಶಿವಲಿಂಗದ ಪಾಣವಟ್ಟದಲ್ಲಿ ಬರುವಂತೆ ಪ್ರನಾಳವನ್ನು ಬಲಗಡೆಗೆ ತಿರುಗಿಸಿದ್ದಾನೆ. ಪೀಠದ ಮಧ್ಯಭಾಗದಲ್ಲಿರುವ ಚೌಕಳಿಯಲ್ಲಿ ಕರಂಡ ಮಕುಟಧಾರಿಯಾದ ಗರುಡನ ಬಿಂಬವು ವಿಷ್ಣುವಿನ ಸೇವೆಗೆ ಅಂಜಲಿಬದ್ಧನಾಗಿ ಸಿದ್ಧವಾಗಿರುವಂತೆ ರೆಕ್ಕೆಬಿಚ್ಚಿ, ಮಂಡಿಯೂರಿ ಕುಳಿತಿರುವಂತಿದೆ.

ಸುಮಾರು ಆರೂವರೆ ಅಡಿ ಎತ್ತರದ ಸುಂದರವಾದ ಕೇಶವನ ಬಿಂಬವು ಈ ಪೀಠದ ಮೇಲಿದ್ದು, ಪೀಠದಿಂದ ಆರಂಭವಾಗಿರುವ ಅರೆಗಂಬಗಳನ್ನು ಆಧರಿಸಿ ಮಕರತೋರಣವನ್ನು ಬಿಡಿಸಲಾಗಿದೆ. ಈ ತೋರಣದಲ್ಲಿ ಎರಡು ಹಂತಗಳಿವೆ. ಮೊದಲನೇ ಹಂತದಲ್ಲಿ ಬಳ್ಳಿಯನ್ನು ಬಿಡಿಸಲಾಗಿದೆ. ಈ ಬಳ್ಳಿಗಳ ಸುರುಳಿಗಳಲ್ಲಿ ವಿಷ್ಣುವಿನ ದಶಾವತಾರದ ಚಿಕಣಿಬಿಂಬಗಳಿವೆ. ಇವುಗಳು ಚಿಕ್ಕ ಬಿಂಬಗಳಾದರೂ ಬಹು ಸ್ಪಷ್ಟವಾಗಿ, ಅಂದವಾಗಿ ಕೆತ್ತಲ್ಪಟ್ಟಿವೆ. ಮತ್ಸ್ಯ, ಕೂರ್ಮ ಮತ್ತು ವರಾಹಬಿಂಬಗಳು ಪ್ರಾಣಿಯ ಆಕಾರವಾಗಿಯೂ ನರಸಿಂಹನ ಬಿಂಬವು ಸಿಂಹವದನವಾಗಿಯೂ ಕೆತ್ತಲಾಗಿದೆ. ವಾಮನನನ್ನು ಯೋಗಿಯಂತೆ ಬಿಡಿಸಿದೆ. ಧನುರ್ಧಾರಿ ರಾಮ, ಪರಶುರಾಮ, ಕೃಷ್ಣರಲ್ಲದೆ, ಧ್ಯಾನಾವಸ್ಥೆಯಲ್ಲಿರುವ ಕುದುರೆಯ ಮೇಲೆ ಕುಳಿತಿರುವ ಕಲ್ಕಿಯ ಕೈಯಲ್ಲಿ ಕತ್ತಿ ಇದೆ. ಹೀಗೆ ದಶಾವತಾರಬಿಂಬಗಳು ಯಥಾಕ್ರಮವಾಗಿದ್ದು, ತೋರಣದ ಅಂದವನ್ನು ಹೆಚ್ಚಿಸಿವೆ. ಎರಡನೇ ಹಂತದಲ್ಲಿ ಸಾಮಾನ್ಯವಾಗಿ ಎಲ್ಲೆಡೆ ಕಾಣುವ ಶುಂಕುವಿನಾಕಾರದ ಬಳ್ಳಿಯು ಸುತ್ತುವರೆದಿದೆ. ಇಂತಹ ಮಕರ ತೋರಣದ ಮಧ್ಯಭಾಗದಲ್ಲಿ ಸಿಂಹಲಲಾಟವಿದ್ದು, ಅದರ ಕೆಳಗೆ ಕೇಶವನ ಬಿಂಬವಿದೆ.

ಕೇಶವನ ಬಿಂಬವು ಪೀಠವೂ ಸೇರಿದಂತೆ ಸುಮಾರು ಎಂಟೂವರೆ ಅಡಿ ಎತ್ತರದ ಬಿಂಬವಾಗಿದ್ದು, ಎತ್ತರವಾದ ಮತ್ತು ಮಣಿಯುಕ್ತವಾದ ಕಿರೀಟ–ಮಕುಟವನ್ನು ಹೊಂದಿದೆ. ಕಿರೀಟದ ಶಿಖಾಮಣಿ, ಕರ್ಣಪುಷ್ಪ, ಮುಕ್ತಾವಳಿಗಳನ್ನು ಬಿಡಿ ಬಿಡಿಯಾಗಿ ಬಿಡಿಸಲಾಗಿದ್ದು, ಸ್ಪಷ್ಟವಾಗಿ ಗುರುತಿಸುವಂತಿದೆ. ಕೇಶವನ ವದನವು ಪುರುಷಗಾಂಭೀರ್ಯದಿಂದ ಕೂಡಿದೆ. ನೀಳವಾದ ಮುಖ, ಅಗಲವಾದ ಕಣ್ಣುಗಳು, ವಿಸ್ತಾರವಾದ ಫಾಲ, ಬಾಗಿದ ಹುಬ್ಬು, ನೀಳವಾದ ಮೂಗು, ಮುಂದುಬ್ಬಿರುವ ಗಲ್ಲ ಮತ್ತು ಉದ್ದವಾದ ಕಿವಿಗಳನ್ನು ತಾಳಮಾನ ಪದ್ಧತಿಯಂತೆ ಪ್ರಮಾಣಬದ್ಧವಾಗಿ ಉತ್ತಮಪುರುಷನಂತೆ ರೂಪಿಸಲಾಗಿದೆ. ಈ ಮಂದಸ್ಮಿತ ಕೇಶವನನ್ನು ನೋಡಿದರೆ ಈ ಬಿಂಬವು ಪ್ರಸನ್ನಕೇಶವ ಎನ್ನುವಂತಿದೆ. ಕೇಶವನಿಗೆ ಉದ್ದವಾದ ಕಿವಿಗಳಿದ್ದು, ಕಿವಿಯಲ್ಲಿ ಸುಂದರವಾದ ಮಕರಕುಂಡಲಗಳಿವೆ. ಕೇಶವನ ದೀರ್ಘ ಬಾಹುಗಳಲ್ಲಿ ಮಣಿಯುಕ್ತವಾದ ಕೇಯೂರವೂ ಮುಕ್ತ ಮಾಲೆಯುಳ್ಳ ಬಾಹುಪೂರವೂ ಇವೆ. ಕೈಯ ಬೆರಳುಗಳನ್ನು ನೀಳವಾಗಿ ಬಿಡಿಸಿದ್ದು, ಉದ್ದವಾಗಿ ಚೂಪಾಗಿರುವ ಉಗುರುಗಳನ್ನೂ ಕಾಣಬಹುದು. ಉಗುರಿನ ಭಾಗಕ್ಕೆ ಶಿಲ್ಪಿಯು ಹೆಚ್ಚಿನ ಮೆರುಗನ್ನಿತ್ತಿದ್ದಾನೆ. ಕೈಗಳಲ್ಲಿ ದಪ್ಪದಾದ ಎರಡೆರಡು ರತ್ನದ ಕಡಗಗಳಿವೆ. ಎಲ್ಲ ಬೆರಳುಗಳಲ್ಲೂ ಇರುವ ಉಂಗುರಗಳು ವಿವಿಧ ವಿನ್ಯಾಸದ್ದಾಗಿವೆ. ಕೆಲವು ಬೆರಳುಗಳಲ್ಲಿ ೨–೩ ಉಂಗುರಗಳಿವೆ. ಒಂದೆಡೆ ವಂಕಿ ಉಂಗುರವಿದೆ. ಗದೆಯನ್ನು ಹಿಡಿದಿರುವ ಮುಂಗೈಯ ಮೇಲಿರುವ ಮುಂಗೈ ಆಭರಣವನ್ನು ಮುತ್ತಿನ ಎಳೆಗಳಿಂದ ರೂಪಿಸಲಾಗಿದೆ.

ಚತುರ್ಭುಜನಾದ ಕೇಶವನು ತನ್ನ ಕೈಗಳಲ್ಲಿ ಕ್ರಮವಾಗಿ ಕಮಲ, ಶಂಖ, ಚಕ್ರ ಮತ್ತು ಗದೆಗಳನ್ನು ಹಿಡಿದಿದ್ದಾನೆ. ಇಲ್ಲಿ ಶಿಲ್ಪಿಯು ಆಯುಧಗಳನ್ನು ಬಿಡಿಸಿರುವ ರೀತಿಯು ಗಮನಾರ್ಹವಾಗಿದೆ. ಆಯುಧಗಳಿಗೆ ಆಲಂಕಾರಿಕ ಹಿಡಿಕೆಗಳನ್ನು ಬಿಡಿಸಿದ್ದಾನೆ. ಚಕ್ರ-ಶಂಖಗಳ ವಿನ್ಯಾಸವು ಬಹು ಸ್ಪಷ್ಟವಾಗಿ ಮೂಡಿಬಂದಿದೆ. ಉದ್ದವಾದ ಹಿಡಿಕೆಯುಳ್ಳ ಗದೆಯ ಕೆಳಭಾಗವು ದಪ್ಪವಾಗಿದ್ದು, ಅದರ ತುದಿಯ ಭಾಗವನ್ನು ಚೂಪಾಗಿ ಚಿತ್ರಿಸಲಾಗಿದೆ. ಗದೆಗೂ ಹಿಡಿಕೆ ಇದೆ. ಅದರೆ ಶಿಲ್ಪಿಯು ಪದ್ಮವನ್ನು ಬಿಡಿಸುವಾಗ ಕಮಲದ ಒಂದೊಂದು ದಳವನ್ನೂ ಬಿಡಿಬಿಡಿಯಾಗಿ ಮೂಡಿಸಲು ಯತ್ನಿಸಿರುವನು. ಪದ್ಮದ ಉದ್ದವಾದ ದಂಟಿನ ಭಾಗವನ್ನು ಮಣಿ

ಯುಕ್ತವಾಗಿ ಬಿಡಿಸಲಾಗಿದೆ. ಇದರಿಂದ ದೂರದಿಂದ ಇದು ಒಂದು ಹೂಬಳ್ಳಿಯಂತೆ ಕಾಣಿಸುತ್ತದೆ.

ಕೇಶವನ ಕೊರಳಿನಲ್ಲಿ ಒಂದು ಕಂಠಿಕೆ, ಪದಕದ ಹಾರ, ತುಳಸಿಮಣಿಯ ಉರಮಾಲೆ, ಯಜ್ಞೋಪವೀತ ಹಾಗೂ ವೈಜಯಂತಿಮಾಲೆಗಳಿದ್ದು, ವಿವಿಧ ವಿನ್ಯಾಸ ಗಳಿಂದ ಕೂಡಿವೆ. ಮುತ್ತಿನ ಮತ್ತೊಂದು ಯಜ್ಞೋಪ ವೀತವನ್ನು ಅಂದಕ್ಕಾಗಿ ಬಿಡಿಸಲಾಗಿದೆ. ಅನೇಕ ಹಾರ ಗಳ ಮಧ್ಯೆ ಸೇರಿಹೋಗಿರುವ ಕೇಶವನ ಉದರಬಂಧದ ವಿನ್ಯಾಸವು ಮರೆಯಾಗಿದೆ. ಈ ಬಿಂಬದಲ್ಲಿ ಕಾಣುವ ಉರಧಾಮವನ್ನು ಕರ್ಣಪುಷ್ಪಗಳಿಂದಲೂ ಸಿಂಹವಕ್ತ್ರ ದಿಂದಲೂ ಮುಕ್ತಾವಳಿಗಳಿಂದಲೂ ಚಿತ್ರಿಸಲಾಗಿದ್ದು, ಬಿಡಿಬಿಡಿಯಾಗಿ ಚಿತ್ತಾರವುಳ್ಳದ್ದಾಗಿಯೂ ಸುಂದರ ವಾದುದಾಗಿಯೂ ಇದೆ. ಕೇಶವನ ಊರುಗಳನ್ನು ನೀಳವಾಗಿ ಬಿಡಿಸಿದೆ. ಮೊಣಕಾಲಿನಲ್ಲಿ ದಪ್ಪದಾದ ರತ್ನದ ಕಾಲ್ಕಡಗಗಳೂ ವಂಕಿಯೂ ಪಾದಗಳ ಮೇಲೆ ಪಾದಜಾಲಕವೂ ಇವೆ. ವಿರಾಮವಾಗಿ ನಿಂತಂತಿರುವ ಕಾಲುಗಳ ಎಲ್ಲ ಬೆರಳುಗಳಲ್ಲಿಯೂ ಉಂಗುರಗಳಿವೆ. ಅಡಿಯಿಂದ ಮುಡಿಯವರೆಗೆ ಈ ಬಿಂಬವು ಸುಮಾರು ೫ ಅಡಿ ೬ ಅಂಗುಲ ಎತ್ತರವಿದ್ದು, ಅಷ್ಟತಾಳ ಪ್ರಮಾಣ ದಲ್ಲಿ ಬಿಡಿಸಲಾಗಿದೆ. ಧೀರ ನಿಲುವಿನ ಈ ಬಿಂಬವನ್ನು ರೂಪಮಂಡಣದ ಲಕ್ಷಣಗಳ ಮೇರೆಗೆ ನಿರ್ಮಿಸಲಾಗಿದೆ.

ಕೇಶವನ ಬಲಭಾಗದಲ್ಲಿ ಪಾದದ ಬಳಿ ಸುಮಾರು ಎರಡೂವರೆ ಅಡಿ ಎತ್ತರದ ಶ್ರೀದೇವಿಯ ಬಿಂಬವಿದೆ. ದೇವಿಯು ದ್ವಿಭಂಗಿಯಲ್ಲಿ ಸ್ಥಾನೀಕಳಾಗಿದ್ದಾಳೆ ; ಕರಂಡ ಮಕುಟ, ಮಕರಕುಂಡಲ, ಕಂಠಿಕೆ, ಉರಹಾರ, ವೈಜಯಂತಿಮಾಲೆ ಮೇಖಲೆಗಳನ್ನು ಧರಿಸಿದ್ದಾಳೆ. ದ್ವಿಭುಜೆಯಾದ ದೇವಿಯು ತನ್ನ ಬಲಗೈಯಲ್ಲಿ ಕಮಲ ವನ್ನೂ ಎಡಗೈಯಲ್ಲಿ ಕಳಶವನ್ನೂ ಹಿಡಿದಿದ್ದಾಳೆ. ಇವಳ ಪ್ರತಿರೂಪದಂತಿರುವ ಭೂದೇವಿಯ ಬಿಂಬವು ದೇವನ ಎಡಭಾಗದಲ್ಲಿದೆ. ಯಥೋಚಿತವಾದ ಎಲ್ಲ ಆಭರಣ ಗಳನ್ನೂ ಧರಿಸಿರುವ ದೇವಿಯ ಕೈಗಳಲ್ಲಿ ಫಲ, ಪಾಶ ಗಳಿವೆ. ಒಟ್ಟಿನಲ್ಲಿ, ಕೇಶವನ ಬಿಂಬವು ಸುಂದರ ವಾಗಿದ್ದು, ಚೆನ್ನಕೇಶವ ಎನ್ನಿಸಿದೆ.

ಕೈದಾಳದ ಈ ಕೇಶವಬಿಂಬವು ಬೇಲೂರಿನ, ಚೆನ್ನಕೇಶವ ದೇವಾಲಯದ ಮೂಲಬಿಂಬಕ್ಕಿಂತಲೂ[7] ಕಪ್ಪೆಚೆನ್ನಿಗರಾಯನ ಗುಡಿಯಲ್ಲಿರುವ ಅದೇ ಹೆಸರಿನ ಬಿಂಬವನ್ನು ಹೋಲುತ್ತದೆ. ಈ ಚೆನ್ನಿಗರಾಯನ ಬಿಂಬವು ಮೂಲಬಿಂಬಕ್ಕಿಂತ ಹೆಚ್ಚು ಸುಂದರ ವಾಗಿದೆ. ಕಪ್ಪೆಚೆನ್ನಿಗರಾಯನ ಬಿಂಬದ ಮಾದರಿ ಯಲ್ಲಿಯೇ ನಂತರದಲ್ಲಿ ವಿಜಯನಾರಾಯಣನ ಬಿಂಬ ವನ್ನು ಕೆತ್ತಿರುವರೆಂಬ ಐತಿಹ್ಯವಿದ್ದು, ಶಿಲ್ಪವನ್ನು ಗಮನಿಸಿದರೆ ಇದು ಸತ್ಯವೆಂದು ತಿಳಿದುಬರುತ್ತದೆ.

ಕಪ್ಪೆಚೆನ್ನಿಗರಾಯನ ಬಿಂಬವು ಅರೆಗಂಬಗಳನ್ನು ಧರಿಸಿರುವ ಮಕರತೋರಣದ ಅಡಿಯಲ್ಲಿ ಸಮಭಂಗಿಯಲ್ಲಿ ಸ್ಥಾನೀಕವಾಗಿರುವ ಬಿಂಬವಾಗಿದೆ. ಮಕರತೋರಣದಲ್ಲಿ ಎರಡು ಪಟ್ಟಿಕೆಗಳಿದ್ದು, ಮೊದಲನೇ ಸಾಲಿನಲ್ಲಿ ವಾಹನ ಗಳನ್ನೇರಿರುವ ಅಷ್ಟದಿಕ್ಪಾಲಕರ ಉಬ್ಬುಶಿಲ್ಪಗಳಿವೆ. ಎರಡನೇ ಪಟ್ಟಿಕೆಯಲ್ಲಿ ಬಳ್ಳಿಯ ಸುರಳಿಗಳ ಮಧ್ಯೆ ವಿಷ್ಣು ವಿನ ದಶಾವತಾರದ ಚಿಕಣಿಬಿಂಬಗಳನ್ನು ಬಿಡಿಸಲಾಗಿದೆ. ಮತ್ಸ್ಯ, ಕೂರ್ಮ, ವರಾಹ–ಈ ಬಿಂಬಗಳು ಪ್ರಾಣಿಯ ಆಕಾರದಲ್ಲಿವೆ. ನರಸಿಂಹನಿಗೆ ಸಿಂಹಮುಖ ವಿದೆ. ವಾಮನನನ್ನು ಧ್ಯಾನಾಸಕ್ತ ಯೋಗಿಯಂತೆ ಬಿಡಿಸ ಲಾಗಿದೆ. ಮುಂದೆ ರಾಮನು ಧನುರ್ಧಾರಿಯಾಗಿ ದ್ದಾನೆ. ಪರಶುರಾಮ ಮತ್ತು ಕೃಷ್ಣರ ನಂತರ ಬುದ್ಧ ನನ್ನು ಯೋಗಿಯಂತೆ ಬಿಡಿಸಿದ್ದು, ಕಲ್ಕಿಯು ಕುದುರೆಯ ಮೇಲೆ ಕುಳಿತಿರುವಂತೆ ಬಿಡಿಸಿದೆ. ಮಕರತೋರಣದ ವ್ಯಾಳಿಯ ಮೇಲೆ ಎರಡೂ ಕಡೆ ಯಕ್ಷರಿದ್ದಾರೆ.

ಕಪ್ಪೆಚೆನ್ನಿಗರಾಯನೆಂದು[8] ಕರೆಯಲಾಗುವ ಈ ಬಿಂಬದ ಮುಖವು ಕೇಶವ ದೇವಾಲಯದ ಚೆನ್ನ ಕೇಶವನ ಮುಖದಂತಿರದೆ, ಇದು ಏಕತಾಳ ಪ್ರಮಾಣ

7. ಬೇಲೂರಿನ ಕೇಶವ ದೇವಾಲಯದ ಮೂಲಬಿಂಬವನ್ನು ಚೆನ್ನಕೇಶವ ಅಥವಾ ವಿಜಯನಾರಾಯಣ ಎಂದು ಕರೆಯುವರು.

8. ಈ ಶಿಲ್ಪವು ದೋಷಯುಕ್ತವಾಗಿದ್ದಿತೆಂದೂ ಉದರಭಾಗದಲ್ಲಿ ಕಪ್ಪೆ ಇದ್ದಿತೆಂದೂ ಕಲ್ಪಿಸಲಾಗಿರುವ ಕಥೆಯು ಕೇವಲ ಕಾಲ್ಪನಿಕವಾದುದು. ಶಿಲ್ಪದ ಉದರಭಾಗವು ಸ್ವಲ್ಪವೂ ಹುಳುಕಾಗದೇ ಇರುವುದನ್ನು ಈಗಲೂ ಕಾಣಬಹುದಾಗಿದೆ.

ದಲ್ಲಿ ಬಿಡಿಸಲಾಗಿರುವ ಗಂಭೀರವಾದ ಪುರುಷವದನವಾಗಿದೆ. ಶಿರದಲ್ಲಿ ಮಣಿಯುಕ್ತವಾದ ಕಿರೀಟ–ಮಕುಟವಿದೆ. ಕಿವಿಗಳಲ್ಲಿ ಉದ್ದವಾದ ಮಕರಕುಂಡಲಗಳನ್ನೂ ತೋಳಿನಲ್ಲಿ ಮಣಿಮಾಲೆಯ ಬಾಹುಪೂರವನ್ನೂ ಅಂದವಾದ ಕೇಯೂರಗಳನ್ನೂ ಕಾಣಬಹುದು. ಕೈಗಳಲ್ಲಿ ರತ್ನಖಚಿತ ಕಡಗಗಳೂ ಬೆರಳುಗಳಲ್ಲಿ ಅಂಗುಲೀಯಕವೂ ಇದ್ದು, ಶಿಲ್ಪಿಯು ಬಿಂಬಕ್ಕೆ ಸುಂದರವಾದ ಮುಂಗೈ ಆಭರಣವನ್ನು ತೊಡಿಸಿದ್ದಾನೆ. ಹಾಗೆಯೇ, ಕೊರಳಿನಲ್ಲಿ ಕಂಠಿಕೆ, ಉರಹಾರ, ಪದಕದ ಹಾರ ಮತ್ತು ತುಳಸಿ ಮಾಲೆಗಳಿವೆ. ಯಜ್ಞೋಪವೀತ, ವೈಜಯಂತಿಮಾಲೆಗಳನ್ನೂ ಕಾಣುತ್ತೇವೆ. ಈ ಬಿಂಬದ ಉರಧಾಮವು ಸುಂದರವಾದ ಪುಷ್ಪಾಲಂಕೃತವಾದುದಾಗಿದೆ. ಕಾಲಿನಲ್ಲಿ ಕಾಲ್ಕಡಗ, ವಂಕಿ, ಪಾದಜಾಲಕಗಳಲ್ಲದೆ, ಕಾಲಿನ ಬೆರಳುಗಳಲ್ಲೂ ಉಂಗುರಗಳಿವೆ.

ಈ ಕೇಶವನ ಎಡಭಾಗದಲ್ಲಿ ಭೂದೇವಿಯು ದ್ವಿಭಂಗಿಯಲ್ಲಿ ನಿಂತಿದ್ದು, ಕರಂಡ ಮಕುಟವನ್ನು ಧರಿಸಿದ್ದಾಳೆ. ದೇವಿಯ ಬಿಂಬವು ಸುಮಾರು ಎರಡೂವರೆ ಅಡಿ ಎತ್ತರವಾಗಿದೆ. ಚಿಕ್ಕ ಬಿಂಬವಾದರೂ ಶಿಲ್ಪಿಯು ದೇವಿಗೆ ಯಥೋಚಿತವಾದ ಎಲ್ಲ ಆಭರಣಗಳನ್ನಿಟ್ಟು ಅಂದಗೊಳಿಸಿದ್ದಾನೆ. ದೇವಿಯು ತನ್ನ ಕೈಗಳಲ್ಲಿ ಕಳಶ ಮತ್ತು ಪಾಶಗಳನ್ನು ಹಿಡಿದಿದ್ದಾಳೆ. ದೇವನ ಬಲಭಾಗದಲ್ಲಿ ನಿಂತಿರುವ ದೇವಿಯೇ ಶ್ರೀದೇವಿ. ಈಕೆಯೂ ದ್ವಿಭಂಗಿಯಲ್ಲೇ ನಿಂತಿದ್ದಾಳೆ. ಯಥೋಚಿತವಾದ ಆಭರಣಗಳನ್ನೂ ಕರಂಡ ಮಕುಟವನ್ನೂ ಧರಿಸಿದ್ದಾಳೆ. ಈಕೆಯ ಬಲಗೈಯಲ್ಲಿ ಕಳಶವೂ ಎಡಗೈಯಲ್ಲಿ ಕಮಲವೂ ಇವೆ. ಈ ದೇವಿಯರಿಬ್ಬರ ಬಳಿಯೂ ಚಾಮರಧಾರಿಣಿಯರ ಶಿಲ್ಪಗಳನ್ನು ಬಿಡಿಸಿದೆ. ಹೀಗೆ ಶ್ರೀದೇವಿ–ಭೂದೇವಿಯರ ಸಹಿತ ಚಾಮರಧಾರಿಣಿಯರಿಂದ ಸೇವಿಸಲ್ಪಡುತ್ತಿರುವ ಕೇಶವನ ಬಿಂಬವು ಗರುಡಪೀಠದ ಮೇಲಿದ್ದು, ಅತ್ಯಂತ ಸುಂದರವಾದುದಾಗಿದೆ. ಈ ಎಲ್ಲ ಲಕ್ಷಣಗಳನ್ನೂ ಕೈದಾಳದ ಕೇಶವನ ಶಿಲ್ಪದಲ್ಲಿ ಕಾಣಬಹುದು.

ಕೈದಾಳದ ಕೇಶವನ ಬಿಂಬವನ್ನು ಬೇಲೂರಿನ ಕೇಶವ ದೇವಾಲಯದ ಮೂಲಬಿಂಬವಾದ ಚೆನ್ನಕೇಶವ ಶಿಲ್ಪದೊಂದಿಗೆ ಹೋಲಿಸಿದಾಗ ಕಂಡುಬರುವ ಕೆಲವು ವ್ಯತ್ಯಾಸಗಳು ಈ ಮುಂದಿನಂತಿವೆ :

೧. ಬೇಲೂರಿನ ಕೇಶವನ ಶಿಲ್ಪದ ಮುಖಭಾವವು ದುಂಡಗಿರುವ ಸ್ತ್ರೀವದನದಂತೆ ಲಾವಣ್ಯ ಮತ್ತು ಮಾಧುರ್ಯವನ್ನು ಸೂಸುತ್ತಿದ್ದರೆ, ಕೈದಾಳದ ಕೇಶವಶಿಲ್ಪದ ಮುಖವು ನೀಳವಾಗಿದ್ದು, ಗಾಂಭೀರ್ಯದಿಂದ ಕೂಡಿದೆ.

೨. ಬೇಲೂರಿನ ಕೇಶವನ ದೇಹಪ್ರಮಾಣವು ಸಪ್ತತಾಳದ ಬಿಂಬವಾಗಿದ್ದರೆ, ಕೈದಾಳದ ಬಿಂಬವು ಅಷ್ಟಮ ತಾಳದ ಬಿಂಬವಾಗಿದೆ.

೩. ಬೇಲೂರಿನ ಕೇಶವಶಿಲ್ಪವು ಪೂರ್ವಾಭಿಮುಖವಾಗಿದ್ದರೆ, ಕೈದಾಳದ ಶಿಲ್ಪವು ಪಶ್ಚಿಮಾಭಿಮುಖವಾಗಿದೆ.

೪. ಬೇಲೂರಿನ ಕೇಶವನ ಶಿಲ್ಪದಲ್ಲಿ ದೇವಿಯರ ಬಿಂಬಗಳ ಬಳಿ ಚಾಮರಧಾರಿಣಿಯರ ಬಿಂಬಗಳೂ ಇವೆ. ಕೈದಾಳದ ಶಿಲ್ಪದಲ್ಲಿ ಚಾಮರಧಾರಿಣಿಯರ ಬಿಂಬಗಳಿಲ್ಲ.

೫. ಕೈದಾಳದ ಕೇಶವನು ಧರಿಸಿರುವ ಆಯುಧಗಳಲ್ಲಿ ಚಕ್ರದ ವಿನ್ಯಾಸವು ಬೇಲೂರಿನ ಕೇಶವನ ಬಿಂಬದಲ್ಲಿರುವುದಕ್ಕಿಂತಲೂ ಸ್ಪಷ್ಟವಾಗಿಯೂ ಅಂದವಾಗಿಯೂ ಮೂಡಿಬಂದಿದೆ.

೬. ಬೇಲೂರಿನ ಕೇಶವನ ಬಿಂಬದ ಪ್ರಭಾವಳಿ(ಮಕರತೋರಣ)ಯಲ್ಲಿ ನಾಲ್ಕು ಹಂತಗಳಿವೆ. ಕೈದಾಳದ ಬಿಂಬದ ಪ್ರಭಾವಳಿಯು ಕೇವಲ ಎರಡು ಹಂತದ್ದಾಗಿದೆ.

೭. ಬೇಲೂರಿನ ಬಿಂಬದ ಆಭರಣಗಳ ವಿನ್ಯಾಸಕ್ಕಿಂತಲೂ ಕೈದಾಳದ ಶಿಲ್ಪವು ವಿಶೇಷವಾದ ಕುಸುರಿ ಕೆಲಸದಿಂದ ಕೂಡಿದ್ದು, ಹೊಯ್ಸಳರ ಅತಿಯಾದ ಅಲಂಕಾರದ ಸೌಂದರ್ಯವನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ.

೮. ಬೇಲೂರಿನ ಪೀಠವು ಅತಿ ಎತ್ತರವಾಗಿದ್ದು, ಮೂರ್ತಿಯ ಅಂಗಾಂಗ ವಿನ್ಯಾಸದ ಬಗೆಗೆ ಸ್ಪಷ್ಟವಾದ ಕಲ್ಪನೆ ಬರುವಂತಿಲ್ಲ. ಆದರೆ ಕೈದಾಳದ

ಶಿಲ್ಪದ ಅಂಗವಿನ್ಯಾಸವು ಹೆಚ್ಚು ಸಮಂಜಸವಾಗಿದೆ.

ಹೀಗೆ ಕೈದಾಳದ ಶಿಲ್ಪವನ್ನು ಹಲವು ನಿಟ್ಟಿನಿಂದ ಗಮನಿಸಿದರೆ, ಬೇಲೂರಿನ ಚೆನ್ನಕೇಶವನ ಶಿಲ್ಪಕ್ಕಿಂತಲೂ ಅದು ಸಾಕಷ್ಟು ಸುಂದರವಾದುದೆಂದು ಮನದಟ್ಟಾಗುತ್ತದೆ. ತುಮಕೂರು ಜಿಲ್ಲೆ ಮಾತ್ರವಲ್ಲದೆ, ಇಡೀ ಕರ್ನಾಟಕವೇ ಇಂತಹ ಅನುಪಮ ಶಿಲ್ಪದ ಬಗೆಗೆ ಹೆಮ್ಮೆ ಪಡಬೇಕಾಗುತ್ತದೆ. ಕಡೆಯ ಮಾತೆಂದರೆ, ಹೊಯ್ಸಳರ ಮೂರ್ತಿಶಿಲ್ಪದ ಅಧ್ಯಯನ ಮಾಡುವಾಗ ಮೇಲೆ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೈದಾಳದ ಕೇಶವಶಿಲ್ಪವನ್ನು ಕುರಿತು ಇನ್ನಷ್ಟು ವಿವರವಾಗಿ ಪರಿಶೀಲಿಸಬಹುದಾಗಿದೆ.

ಹೆಚ್. ಕೆ. ಟಿ. ಕುಮಾರ್

# ಕೈದಾಳದ ಚೆನ್ನಕೇಶವ ದೇವಾಲಯ : ಒಂದು ವೈಜ್ಞಾನಿಕ ನೋಟ

ತುಮಕೂರು ತಾಲ್ಲೂಕು, ಗೂಳೂರು ಹೋಬಳಿ ಕೈದಾಳದ ಚೆನ್ನಕೇಶವ ದೇವಾಸ್ಥಾನವು ಪ್ರಸಿದ್ಧ ವಾಸ್ತು ತಜ್ಞ ಹಾಗೂ ಶಿಲ್ಪಿ ಜಕಣಾಚಾರಿಯಿಂದ ಕ್ರಿ.ಶ. ೧೧೫೦ ರಲ್ಲಿ ಕಟ್ಟಲ್ಪಟ್ಟಿತೆಂಬ ಮತ್ತು ಚೆನ್ನಕೇಶವನ ವಿಗ್ರಹದ ಕೆತ್ತನೆಯನ್ನು ಪೂರ್ಣಗೊಳಿಸಿದ ಮೇಲೆ ಜಕಣಾಚಾರಿಗೆ ಕೈ ಮೂಡಿತೆಂಬ ಕತೆಗೆ ಅನುಗುಣವಾಗಿ 'ಕೈದಾಳ' ಎಂಬ ಹೆಸರು ಗ್ರಾಮಕ್ಕೆ ಒದಗಿತೆನ್ನಲಾಗುತ್ತದೆ. ಹಾಗೆಯೇ, ಈ ದೇಗುಲದ ತಾಂತ್ರಿಕ ವಾಸ್ತುವಿನ್ಯಾಸವೂ ಐತಿಹಾಸಿಕ ಮಹತ್ವ ಪಡೆದಿದೆ.

ಬೆಳಕಿನ ಅಲೆಗಳ ಅಡ್ಡೈಸುವಿಕೆ (Interference) ಹಾಗೂ ವಕ್ರ ವಿಯೋಜನ (Diffraction) ಘಟನಾವಳಿಯ ಆವಿಷ್ಕಾರವು ಹದಿನೆಂಟನೆಯ ಶತಮಾನದಲ್ಲಿ ಆಯಿತು. ಈ ಆವಿಷ್ಕಾರದ ಮುನ್ನವೇ ಕೈದಾಳದ ಚೆನ್ನ ಕೇಶವ ದೇವಾಲಯದಲ್ಲಿ ಈ ವೈಜ್ಞಾನಿಕ ಅಂಶದ ಅನ್ವಯವಿದ್ದಿತೆಂಬುದು ಗಮನಾರ್ಹ. ಅಂದರೆ ಈ ಕುರಿತ ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರೌಢಿಮೆಯು ಹನ್ನೆರಡನೆಯ ಶತಮಾನದ ನಡುವಣ ಅವಧಿಯಲ್ಲಿ ಇಲ್ಲಿದ್ದಿತೆಂಬ ಐತಿಹಾಸಿಕ ಸಂಗತಿಯು ಇದರಿಂದ ವ್ಯಕ್ತಪಡುತ್ತದೆ.

೧೯೮೮ರ ಜೂನ್ ತಿಂಗಳಿನಲ್ಲಿ ಈ ಲೇಖಕನು ಪ್ರಸ್ತುತ ದೇಗುಲಕ್ಕೆ ಹೋಗಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಮೇಲಿನ ವೈಜ್ಞಾನಿಕ ಅಂಶದ ಅನ್ವಯವು ಬಹಿರಂಗಗೊಂಡಿತು. ಆದರೆ ಮೈಸೂರು ಗ್ಯಾಸೆಟಿಯರ್‌ನಲ್ಲಿಯಾಗಲೀ ಪ್ರಕಟಿತ ಲೇಖನಗಳಲ್ಲಿಯಾಗಲೀ ಮೇಲಿನ ತಾಂತ್ರಿಕ, ವೈಜ್ಞಾನಿಕ ಕೌಶಲ್ಯವು ದೇಗುಲವಾಸ್ತುವಿನಲ್ಲಿ ಅಡಕವಾಗಿರುವ ಬಗ್ಗೆ ಯಾವುದೇ ವಿವರವು ಕಂಡುಬರಲಿಲ್ಲ. ಅಲ್ಲದೆ, ದೇಗುಲದಲ್ಲಿ ಈ ತಾಂತ್ರಿಕ ಕೌಶಲ್ಯದ ಅನ್ವಯ ಕುರಿತಾಗಿ ಯಾವುದೇ ಶಾಸ್ತ್ರೀಯ ದಾಖಲೆಯೂ ಲಭ್ಯವಾಗಲಿಲ್ಲ. ಈಗಿನ ಶೋಧನೆಯಿಂದ, ಹನ್ನೆರಡನೆಯ ಶತಮಾನದ ನಡುವಣ ಕಾಲದ ಈ ನಾಡಿನ ವೈಜ್ಞಾನಿಕ ಹಾಗೂ ತಾಂತ್ರಿಕ ಪರಿಣತಿಗೆ ಈ ದೇಗುಲ ಜೀವಂತ ಸ್ಮಾರಕವಾದೆಂಬುದು ಸ್ಪಷ್ಟಪಟ್ಟಿದೆ.

ಬೆಳಕಿನ ಅಲೆಗಳ ಅಡ್ಡೈಸುವಿಕೆಯ ಹಾಗೂ ವಕ್ರ ವಿಯೋಜನ ಗುಣಗಳ ಅರಿವು ಈ ದೇಗುಲದ ವಾಸ್ತು ಶಿಲ್ಪಿಗೆ (ಜಕಣಾಚಾರಿಗೆ ?) ಗೊತ್ತಿದ್ದ ಕಾರಣದಿಂದಲೇ ದೇಗುಲವಾಸ್ತುವಿನಲ್ಲಿ ಆತ ಅದನ್ನು ಅನ್ವಯಿಸಿದ್ದಾನೆ ಹಾಗೂ ವಾರ್ಷಿಕವಾಗಿ ಮಕರ ಸಂಕ್ರಾಂತಿಯಂದು (ಜನವರಿ ೧೪) ಸಂಜೆ ಐದರ ಸಮಯದಲ್ಲಿ ಬೆಳಕಿನ ಕಿರಣಗಳು ಚೆನ್ನಕೇಶವದೇವರ ಪಾದದ ಮೇಲೆ ಬೀಳುವಂತಹ ವೈಜ್ಞಾನಿಕ ವಿನ್ಯಾಸವನ್ನು ಅಳವಡಿಸಿದ್ದಾನೆ.

೧೮೦೨ರಲ್ಲಿ ಪ್ರಸಿದ್ಧ ವಿಜ್ಞಾನಿ ಥಾಮಸ್ ಯಂಗ್ ಬೆಳಕಿನ ಅಲೆಗಳ ಅಡ್ಡೈಸುವಿಕೆಯ ಗುಣವನ್ನು ಕಂಡುಹಿಡಿದು ದ್ವಯಸೀಳು ರಂಧ್ರ (double slit) ಪ್ರಯೋಗದ ಮೂಲಕ ಪ್ರದರ್ಶಿಸಿದನು. ಅಂತಾಗಿ, ಇದು ಯಂಗನ ಪ್ರಯೋಗವೆಂದೇ ಕರೆಯಲ್ಪಡುತ್ತದೆ. ಇವನ ಪ್ರಯೋಗದ ವಿವರವನ್ನು ರೇಖಾಚಿತ್ರ ೧ರಲ್ಲಿಯೂ ಚೆನ್ನಕೇಶವ ದೇಗುಲದಲ್ಲಿ ಅನ್ವಯವಾಗಿರುವ ಬೆಳಕಿನ ಮೇಲಿನ ಸ್ವರೂಪವನ್ನು ರೇಖಾಚಿತ್ರ ೨ರಲ್ಲಿಯೂ ಈ ಮುಂದಿನಂತೆ ನಿರ್ದೇಶಿಸಿದೆ :







ದೇಗುಲಾನ್ವಯ ತಂತ್ರ :

೧. ಕಾಂಪೌಂಡ್–ಗೋಡೆಯಲ್ಲಿ ಆಯತಾಕಾರದ ರಂಧ್ರ (ಸೀಳುರಂಧ್ರ)

೨. ಗರುಡ ದೇಗುಲದ ಗೋಡೆಯಲ್ಲಿ ಆಯತಾಕಾರದ ರಂಧ್ರ

೩. ಗರುಡ ವಿಗ್ರಹದ ಕತ್ತಿನ ಎರಡೂ ಬದಿಯ ರಂಧ್ರಗಳು

೪. ಚೆನ್ನಕೇಶವ ದೇಗುಲದ ಪಾರ್ಶ್ವಭಿತ್ತಿಯ ಕೇಂದ್ರದಲ್ಲಿ ಸಮಾನ ದೂರದಲ್ಲಿರುವ ಆಯತ ಸೀಳು ರಂಧ್ರಗಳ ಮೂಲಕ ನಡೆಯುವ ಬೆಳಕಿನ ಕಿರಣಗಳ ವಕ್ರ ವಿಯೋಜನ

೫. ಚೆನ್ನಕೇಶವನ ಪಾದದಲ್ಲಿ ವರ್ಣವಿಭಜನಾ ರೇಖೆಗಳ ಸಂಗಮ

ಒಟ್ಟಿನಲ್ಲಿ, ೧೨ನೆಯ ಶತಮಾನದ ಮಧ್ಯಾವಧಿಯಲ್ಲಿಯೇ ಬೆಳಕಿನ ಅಲೆಗಳ ಅಡ್ಡೈಸುವಿಕೆ ಹಾಗೂ ವಕ್ರ ವಿಯೋಜನ ಗುಣಸ್ವರೂಪವು ಈ ದೇಗುಲದ ಶಿಲ್ಪಿಗೆ ತಿಳಿದಿತ್ತೆಂಬುದು ಮೇಲಿನ ಚಿತ್ರವಿನ್ಯಾಸದ ಮೂಲಕ ಸಾಬೀತಾಗುತ್ತದೆ.

(ಕನ್ನಡಾನುವಾದ/ಎಂ. ಜಿ. ನಾಗರಾಜ್)

ಡಾ॥ ಎಸ್. ರಾಜಶೇಖರ

# ಹಂಪೆಯ ವಿರೂಪಾಕ್ಷ ದೇವಾಲಯ ಸಮೂಹ : ಕಾಲಾನುಕ್ರಮದ ಅಧ್ಯಯನ

ಸುಮಾರು ೭ನೇ ಶತಮಾನದಿಂದ ಇಂದಿನವರೆಗಿನ ಹಂಪೆಯ ಚರಿತ್ರೆಯನ್ನು ಎತ್ತಿಹಿಡಿಯುವಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯವೂ ಒಂದು ಪ್ರಮುಖ ರಚನೆಯಾಗಿದೆ. ವಿಠ್ಠಲ, ಹಜಾರರಾಮ ಮತ್ತು ಅಚ್ಯುತರಾಯ ದೇವಾಲಯಗಳು ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಸಿದ್ಧವಾಗಿದ್ದರೂ ಈಗ ಅವು ಹಾಳಾಗಿವೆ. ವಿರೂಪಾಕ್ಷ ದೇವಾಲಯ ಸಮೂಹವು ಮೊದಲಿಗೆ ಒಂದು ಸಣ್ಣ ದೇವಾಲಯವಾಗಿದ್ದು, ಕಾಲಕ್ರಮೇಣ ಪುನರ್ನಿರ್ಮಾಣ, ಬದಲಾವಣೆ, ಜೀರ್ಣೋದ್ಧಾರ ಮತ್ತು ಹೊಸ ಭಾಗಗಳ ಸೇರ್ಪಡೆಯಿಂದಾಗಿ, ಒಂದು ದೊಡ್ಡ ಸಮೂಹವಾಗಿ ಸೃಷ್ಟಿಗೊಂಡಿತು. ವಿರೂಪಾಕ್ಷ ದೇವಾಲಯ ಮತ್ತು ಅದರ ಸಮೂಹದ ಸುತ್ತಮುತ್ತಲಿನ ಪ್ರದೇಶವು ಒಂದು ಸಾಮಾಜಿಕ ಕೇಂದ್ರವಾಯಿತಲ್ಲದೆ, ಶಾಸನಗಳಲ್ಲಿ ಹಂಪೆಯನ್ನು ವಿಜಯವಿರೂಪಾಕ್ಷಪುರ ಎಂದೇ ಕರೆಯಲಾಯಿತು.

ಸಂಗಮ ಸಹೋದರರಿಂದ ವಿಜಯನಗರ ಸಾಮ್ರಾಜ್ಯವು ಪ್ರಾರಂಭವಾದಾಗ, ವಿರೂಪಾಕ್ಷ ದೇವಾಲಯವು ಅದರ ರಾಜಕೀಯ ಶಕ್ತಿಯ ಪ್ರಧಾನ ಕೇಂದ್ರವಾಯಿತು. ಅವರು ಶೈವರಾಗಿದ್ದುದರಿಂದ, ವಿರೂಪಾಕ್ಷ ದೇವರನ್ನು ತಮ್ಮ ಮನೆತನದ ದೇವತೆಯೆಂದು ಪರಿಗಣಿಸಿ, ತಮ್ಮ 'ಒಪ್ಪ'ವನ್ನು ಹಾಕುವಾಗ 'ಶ್ರೀ ವಿರೂಪಾಕ್ಷ'ನೆಂಬ ಹೆಸರನ್ನೇ ಅನುಸರಿಸಿದರು. ವಿಠ್ಠಲ ದೇವಾಲಯವು ವಾಸ್ತುಶಿಲ್ಪ ದೃಷ್ಟಿಯಿಂದ ಒಂದು ಅತ್ಯುತ್ಕೃಷ್ಟ ರಚನಾಕೃತಿ ಎನಿಸಿದರೂ ಸಾಳುವ ಮತ್ತು ತುಳುವರ ಕಾಲದಲ್ಲೂ ಜನಸಮುದಾಯದಲ್ಲಿ ಈ ದೇವಾಲಯದ ಬಗ್ಗೆ ಪವಿತ್ರ ಭಾವನೆ ಮುಂದುವರಿದಿತ್ತು. ಕ್ರಿ.ಶ. ೧೫೬೫ರ ಯುದ್ಧಾನಂತರ ರಾಜಧಾನಿಯು ವಿನಾಶಗೊಳಿಸಲ್ಪಟ್ಟಾಗ, ವಿರೂಪಾಕ್ಷ ದೇವಾಲಯವು ಇತರ ಶೈವ ದೇವಾಲಯಗಳೊಂದಿಗೆ ಉಳಿದುಕೊಂಡು ಬಂದು, ಬಹುಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸಿತು.

ಮೊದಲೇ ಹೇಳಿರುವಂತೆ, ವಿರೂಪಾಕ್ಷ ದೇವಾಲಯ ಸಮೂಹವು ಅನೇಕ ಶತಮಾನಗಳಲ್ಲಿ ಹೊಸ ಹೊಸ ಭಾಗಗಳ ಸೇರ್ಪಡೆಯೊಂದಿಗೆ ಹೆಚ್ಚು ವಿಸ್ತರಿಸಲ್ಪಟ್ಟಿತು. ಆದ್ದರಿಂದ ಈ ಸಮೂಹದ ಬೇರೆ ಬೇರೆ ಭಾಗಗಳು ಚರಿತ್ರೆಯ ಬೇರೆ ಬೇರೆ ಕಾಲಾವಧಿಗಳಿಗೆ ಸೇರುತ್ತವೆ. ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳಿವೆ. ಪ್ರಧಾನ ದೇವಾಲಯದ ಸುತ್ತಲೂ ಕಂಬದಿಂದ ಕೂಡಿದ ಸುತ್ತುಮಂಟಪ, ಭುವನೇಶ್ವರಿ ಮುಂತಾದ ಸಣ್ಣ ಸಣ್ಣ ದೇವಾಲಯಗಳೂ ಕಂಬಸಾಲುಗಳಿರುವ ತೆರೆದ ಮಂಟಪ, ಮಹಾದ್ವಾರ–ಗೋಪುರಗಳಿರುವ ಪ್ರಾಕಾರಗಳೂ ಇವೆ. ಉತ್ತರದಕಡೆ ಕನಿಗಿರಿ ಗೋಪುರದಿಂದ ಹೊರಗೆ ಮನ್ಮಥ ಕುಂಡದ ದಡದಲ್ಲಿ ಕೆಲವು ಗುಡಿಗಳಿವೆ. ಇವು ಮೊದಲಿಗೆ ಈ ಮುಖ್ಯ ದೇವಾಲಯ ಸಮೂಹಕ್ಕೇ ಸೇರಿದುವು.

ಈ ಲೇಖನದಲ್ಲಿ, ಈ ಸಮೂಹದ ವಿವಿಧ ಭಾಗಗಳನ್ನು ರಚಿಸಿರಬಹುದಾದ ಕಾಲವನ್ನು ನಿರ್ಣಯಿಸುವ

ಯತ್ನವನ್ನು ಮಾಡಲಾಗಿದೆ. ವಿರೂಪಾಕ್ಷ ದೇವಾಲಯ ಸಮೂಹದ ವಾಸ್ತುಶಿಲ್ಪ ಲಕ್ಷಣಗಳನ್ನು ಗಮನಿಸಿದರೆ, ಮೇಲಿಂದ ಮೇಲೆ ಜೀರ್ಣೋದ್ಧಾರವಾಗಿರುವುದನ್ನೂ ಹೊಸದಾಗಿ ಸೇರಿಸಲ್ಪಡುವ ಭಾಗಗಳಿಗೆ ಸ್ಥಳಾವಕಾಶವಾಗಲಿಲ್ಲವೆಂದು ಮೂಲರಚನೆಯನ್ನು ಕೆಲವೊಮ್ಮೆ ನಾಶಮಾಡಿರುವುದನ್ನೂ ಕಾಣಬಹುದಾಗಿದೆ. ಈ ಸಮೂಹದ ರಚನೆಯಲ್ಲಿ ಕನಿಷ್ಠ ಮೂರು ಹಂತಗಳನ್ನಾದರೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

೧. ಮೊದಲಿಗೆ, ಚಿಕ್ಕದಾಗಿ ರಚಿಸಲ್ಪಟ್ಟಿದ್ದ ಪ್ರಧಾನ ದೇವಾಲಯ ಮತ್ತು ಮನ್ಮಥಕುಂಡದ ದಡದಲ್ಲಿರುವ ಕೆಂಪುಮರಳುಗಲ್ಲಿನ ಎರಡು ದೇವಾಲಯಗಳು ಇದ್ದವು. ಈ ಮೂರು ರಚನೆಗಳೂ ೭ನೇ ಶತಮಾನದ ಕೊನೆಯಲ್ಲಿ ಇದ್ದವೆಂದು ಸ್ಪಷ್ಟವಾಗಿ ಹೇಳಬಹುದು. ಚಾಲುಕ್ಯ ದೊರೆ ವಿನಯಾದಿತ್ಯನು ಪಂಪಾತೀರ್ಥಕ್ಕೆ ಭೇಟಿಕೊಟ್ಟಿದ್ದನೆಂಬುದನ್ನು ಇಲ್ಲಿ ನೆನೆಯಬಹುದು. ಇದರಿಂದ 'ಪಂಪಾಪತಿ ದೇವಾಲಯ'ವೆಂದು ಸ್ಥಳೀಯವಾಗಿ ಕರೆಯಲ್ಪಟ್ಟಿರುವ ವಿರೂಪಾಕ್ಷ ದೇವಾಲಯವು ಆ ಕಾಲಕ್ಕೆ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದಾಗಿದೆ.

೨. ಮನ್ಮಥಕುಂಡದ ತೀರದಲ್ಲಿರುವ ಕೆಂಪು ಮರಳುಗಲ್ಲಿನ ದೇವಾಲಯಗಳ ಅಕ್ಕಪಕ್ಕಗಳಲ್ಲಿ ರಚಿಸಲ್ಪಟ್ಟಿರುವ ಚಿಕ್ಕ ಚಿಕ್ಕ ಗುಡಿಗಳ ಸಾಲು ಎರಡನೇ ಹಂತಕ್ಕೆ ಸೇರುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲದ ಲಕ್ಷಣಗಳನ್ನು ಸ್ಪಷ್ಟವಾಗಿ ಹೊಂದಿರುವ ಈ ದೇವಾಲಯಗಳನ್ನು ೧೨, ೧೩ ಮತ್ತು ೧೪ನೇ ಶತಮಾನಗಳ ಆರಂಭದಲ್ಲಿ ಕಟ್ಟಲಾಗಿದೆ. ೧೩ ಮತ್ತು ೧೪ನೇ ಶತಮಾನಗಳಲ್ಲಿ ವಿರೂಪಾಕ್ಷ ದೇವಾಲಯವು ಹಂಪೆಯ ಜನಜೀವನದ ಎಲ್ಲ ಚಟುವಟಿಕೆಗಳ ಕೇಂದ್ರವಾಯಿತು. ಇಲ್ಲಿಯೇ ಒಂದು ಮಾತನ್ನು ಹೇಳುವುದು ಅಪ್ರಸ್ತುತವಾಗಲಾರದು. ಏನೆಂದರೆ, ಮೂರನೇ ಬಲ್ಲಾಳನು ವಿರೂಪಾಕ್ಷ ಬಲ್ಲಾಳನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿದ್ದು ಹಂಪೆಯಲ್ಲೇ. ಈ ಪಟ್ಟಾಭಿಷೇಕ ಮಹೋತ್ಸವವು ವಿರೂಪಾಕ್ಷ ದೇವಾಲಯದಲ್ಲಿ ನಡೆದಿರುವ ಸಾಧ್ಯತೆ ಇದೆ.

೩. ಮೂರನೇ ಹಂತದಲ್ಲಿ ಪ್ರಧಾನ ದೇವಾಲಯದ ಪುನರ್ರಚನೆ, ಸುತ್ತುಮಂಟಪ, ತೆರೆದ ಕಂಬಸಾಲು ಮಂಟಪಗಳು, ಗೋಪುರ ಮತ್ತಿತರ ವಾಸ್ತುಭಾಗಗಳ ರಚನೆಯಾಗಿದೆ. ಈಗಿರುವ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳನ್ನು ಸಂಗಮ ವಂಶಜರ ಆರಂಭದ ಕಾಲದಲ್ಲಿ ಪುನರ್ರಚಿಸಲಾಗಿದೆ. ಹೊರಗೋಡೆಯಲ್ಲಿರುವ ಕುಡ್ಯಸ್ತಂಭ ಮತ್ತು ಕುಂಭಪಂಜರಗಳು ಇದನ್ನು ಸೂಚಿಸುತ್ತವೆ. ಕ್ರಿ.ಶ. ೧೫೧೦ರಲ್ಲಿ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ನೆನಪಿಗಾಗಿ ಈ ದೇವಾಲಯದ ಮುಖಮಂಟಪವನ್ನು (ಶಾಸನದಲ್ಲಿ ಇದನ್ನು 'ರಂಗಮಂಟಪ' ಎನ್ನಲಾಗಿದೆ) ಕಟ್ಟಿಸಿದನು. ಅಲ್ಲದೆ, ಸಂಗಮರಿಂದ ರಚಿಸಲ್ಪಟ್ಟ ಗೋಪುರವನ್ನು ಜೀರ್ಣೋದ್ಧಾರ ಮಾಡಿದನು. ಇದೇ ಕಾಲದಲ್ಲಿ ವಿಶಾಲ ಪ್ರಾಕಾರದೊಳಗಿದ್ದ ರಂಗಮಂಟಪದ ಮುಂಭಾಗದಲ್ಲಿ ಚಿಕ್ಕ ಗೋಪುರವನ್ನೂ ಕಟ್ಟಿಸಿದನು. ಇದನ್ನು ಕೆಲವೊಮ್ಮೆ 'ರಾಯಗೋಪುರ'ವೆಂದು ಕರೆಯುವುದುಂಟು. ಪ್ರಧಾನ ಗೋಪುರವನ್ನು ಎರಡನೇ ದೇವರಾಯನ ಅಧಿಕಾರಿಯಾದ ಪ್ರೋಲುಗಂಟಿ ತಿಪ್ಪನು ಕಟ್ಟಿಸಿದನು. ರಂಗಮಂಟಪದ ಒಳಛಾವಣಿಯ ಕೆಳಗೆ ನಾಲ್ಕೂ ದಿಕ್ಕಿನಲ್ಲಿರುವ ಗಾರೆಯ ವಿಗ್ರಹಗಳು ಕೃಷ್ಣದೇವರಾಯನ ನಂತರದ ಕಾಲಕ್ಕೆ ಸೇರುತ್ತವೆ. ಅನಂತಶಯನ, ಶಿವಪಾರ್ವತಿಯರ ಕಲ್ಯಾಣ, ವಿಷ್ಣುವಿನ ದಶಾವತಾರ ಮುಂತಾದ ಗಾರೆಯ ಕೃತಿಗಳು ಒಳಛಾವಣಿಯ ಕೆಳಗಿರುವ ಮೂಲ ಶಿಲಾಮೂರ್ತಿಗಳ ಮೇಲೆ ಮಾಡಿದ ಗಾರೆಯ ಲೇಪನವಾಗಿದೆ. ಇವುಗಳನ್ನು ಅಚ್ಯುತರಾಯನು ಸುತ್ತುಮಂಟಪವನ್ನು ಕಟ್ಟಿಸಿದ ಕಾಲದಲ್ಲೇ ಮಾಡಿಸಿರಬೇಕು. ರಂಗಮಂಟಪದ ಕೈಪಿಡಿಯಲ್ಲಿರುವ ಗಾರೆಯ ಆಕೃತಿಗಳು ಕೂಡಾ ಇದೇ ಕಾಲದವು.

ಪ್ರಧಾನ ದೇವಾಲಯವು ಪ್ರಾಕಾರಭಿತ್ತಿ ಮತ್ತು ಸುತ್ತುಮಂಟಪದಿಂದ ಸುತ್ತುವರಿಯಲ್ಪಟ್ಟಿದೆ. ಈ ಸುತ್ತುಮಂಟಪವು ಬಹುಶಃ ಅಚ್ಯುತರಾಯನ ಕಾಲದಲ್ಲಿ ಕಟ್ಟಲ್ಪಟ್ಟಿದೆ. ಎಡಗಡೆಗೆ ಇರುವ ಸುತ್ತುಮಂಟಪವು ನಂತರದ ಸೇರ್ಪಡೆಯಾಗಿದೆ. ಎಡಭಾಗದ ಪ್ರವೇಶದಲ್ಲಿರುವ ಗೋಪುರದಲ್ಲಿಯ ಕುಡ್ಯಸ್ತಂಭ ಮತ್ತು ಕುಂಭಗಳು ಪ್ರಧಾನ ದೇವಾಲಯದ ಹೊರಭಿತ್ತಿಯಲ್ಲಿಯ ಕುಡ್ಯಸ್ತಂಭ ಮತ್ತು ಕುಂಭಗಳನ್ನು ಹೋಲುತ್ತಿರುವುದು ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಸುತ್ತುಮಂಟಪವು ಪ್ರವೇಶದ್ವಾರದಲ್ಲಿ ಸ್ವಲ್ಪಭಾಗವನ್ನು ಆವರಿಸಿದೆ.

ಈ ಸುತ್ತುಮಂಟಪವನ್ನು ಕಟ್ಟುವ ಸಮಯದಲ್ಲೇ ಭುವನೇಶ್ವರಿ ಮತ್ತು ಪಂಪಾದೇವಿ ದೇವಾಲಯಗಳನ್ನು ಪುನಃ ಕಟ್ಟಿರಬೇಕು. ಆಗ ಆ ದೇವಾಲಯಗಳು ಹಾಳಾಗಿದ್ದುವೆಂದೋ ಯಾವುದೋ ಕಾರಣಕ್ಕಾಗಿ ಪೂಜೆಯು ನಿಂತುಹೋಗಿದ್ದಿತೆಂದೋ ಅಚ್ಯುತರಾಯನ ಕಾಲದಲ್ಲಿ ಸುತ್ತಮಂಟಪದೊಳಗೆ ಈ ದೇವಾಲಯಗಳನ್ನು ಪುನರ್ರಚಿಸಿರಬೇಕು. ವಾಸ್ತವವಾಗಿ, ಈ ಎರಡೂ ದೇವಾಲಯಗಳ ಅಂಗಗಳಾದ ದ್ವಾರಬಂಧ, ಒಳಛಾವಣಿ ಮತ್ತು ಸ್ತಂಭಗಳು ಹನ್ನೆರಡನೇ ಶತಮಾನದ ಕಲ್ಯಾಣಿ ಚಾಲುಕ್ಯರ ನಿರ್ಮಾಣಗಳು.

ಭುವನೇಶ್ವರಿ ದೇವಾಲಯದ ಬಗ್ಗೆ ಹೇಳುವುದಾದಲ್ಲಿ, ಕುಡ್ಯಸ್ತಂಭಗಳನ್ನೇ ಛಾವಣಿಗೆ ತೊಲೆಗಳಂತೆ ಬಳಸಲಾಗಿದೆ. ಮೂಲ ದೇವಾಲಯದ ರಚನೆ ಮತ್ತು ಲಕ್ಷಣಗಳಿಗೆ ಹೆಚ್ಚು ಬದಲಾವಣೆಯನ್ನು ತಾರದೆ ಮಾಡಿದ ಜೀರ್ಣೋದ್ಧಾರವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಈಗ ಸುತ್ತು ಆವರಣದಲ್ಲಿ ಎರಡು ದೇವಾಲಯಗಳು ಇರುವುವಾದರೂ ಮೂಲತಃ ಕೆಳಮಟ್ಟದಲ್ಲಿ ಒಂದೇ ಒಂದು ದೇವಾಲಯವಿದ್ದಿತು. ಈ ದೇವಾಲಯವು ಮನ್ಮಥಕುಂಡದ ದಡದ ಮೇಲಿರುವ ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಸಮಮಟ್ಟದಲ್ಲಿದ್ದಿತು. ಹನ್ನೆರಡನೇ ಶತಮಾನದ ಶಾಸನದಲ್ಲಿ ಮೂಲ ದೇವಾಲಯವನ್ನು ಪಂಪಾದೇವಿ ದೇವಾಲಯವೆಂದು ಹೇಳಲಾಗಿದೆ. ಈಗ ಇದು ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಗುಂಪಿನಲ್ಲೊಂದಾಗಿದೆ. ಒಳಪ್ರಾಕಾರದಲ್ಲಿ ವಿರೂಪಾಕ್ಷ ದೇವಾಲಯದ ಎದುರಿಗಿರುವ ನಾಲ್ಕು ಕಂಬಗಳ ಮಂಟಪದಲ್ಲಿಯ ಗಂಟೆಯಾಕಾರದ ಎರಡು ಕಂಬಗಳು ಮೇಲೆ ಹೇಳಿದ ಪಂಪಾದೇವಿ ದೇವಾಲಯಕ್ಕೆ ಸೇರಿದುವಾಗಿದ್ದುವು. ಈ ಮಂಟಪವು ತುಳುವರ ನಿರ್ಮಾಣವಾಗಿದೆ.

೪. ವರ್ಣಚಿತ್ರ ಕಲೆ : ರಂಗಮಂಟಪದಲ್ಲಿಯ ವರ್ಣಚಿತ್ರವನ್ನು, ವಿದ್ವಾಂಸರಾದ ಸಿ. ಶಿವರಾಮಮೂರ್ತಿ, ಆರ್. ಎನ್. ಸಾಲೆತೊರೆ, ಸಿ. ಟಿ. ಎಂ. ಕೊಟ್ರಯ್ಯ ಮುಂತಾದವರು ವಿಜಯನಗರದ ಪ್ರಾರಂಭಿಕ ಹಂತದ ವರ್ಣಚಿತ್ರವೆಂದೂ ತುಳುವರ ಕಾಲದ್ದಲ್ಲವೆಂದೂ ಅಭಿಪ್ರಾಯಪಡುತ್ತಾರೆ. ಆದರೆ ಶೈಲಿ, ಸಂಯೋಜನೆ, ಅಲಂಕಾರ ವಿವರಣೆ, ಆಶಯಗಳಲ್ಲಿ ಹಂಪೆ ಮತ್ತು ಲೇಪಾಕ್ಷಿಗಳ ವರ್ಣಚಿತ್ರ ಫಲಕಗಳಲ್ಲಿ ಬಹಳ ವ್ಯತ್ಯಾಸಗಳಿವೆ. ಲೇಪಾಕ್ಷಿಯಲ್ಲಿಲ್ಲದ ಮತ್ತು ಹಂಪೆಯಲ್ಲಿರುವ ಅನೇಕ ವರ್ಣಚಿತ್ರಕಲೆಯ ಲಕ್ಷಣಗಳು ಹದಿನೇಳನೇ ಶತಮಾನ ಮತ್ತು ನಂತರದಲ್ಲೂ ಮುಂದುವರಿದಿವೆ. ಇದರಿಂದ ಈ ವರ್ಣಚಿತ್ರವು ಕ್ರಿ.ಶ. ೧೫೬೫ರ ನಂತರ ಬಹುಶಃ ಅರವೀಡು ಮನೆತನದ ಆಶ್ರಯದಲ್ಲಿ ಅಂದರೆ, ೧೭ನೇ ಶತಮಾನದಲ್ಲಿ ಚಿತ್ರಿತವಾಗಿರುವುದು ದೃಢಪಡುತ್ತದೆ.

(ಕನ್ನಡಾನುವಾದ/ಕೂ. ಸ. ಅಪರ್ಣ)

ಡಾ॥ ಶ್ರೀನಿವಾಸ ವೆಂ. ಪಾಡಿಗಾರ

# ಸೂರ್ಯ ಮತ್ತು ಬ್ರಹ್ಮ-ಸೂಳೆಭಾವಿಯ ಬಾದಾಮಿ ಚಾಲುಕ್ಯರ ಇಮಾರತಿನ ಬೆಳಕಿನಲ್ಲಿ

೧೯೮೮ರ ಬೇಸಿಗೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನಭಾರತದ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗದ ಪರವಾಗಿ ವಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ಗ್ರಾಮಗಳ ಪುರಾತತ್ವ ಅನ್ವೇಷಣೆ ಕೈಗೊಳ್ಳುವ ಸುಯೋಗ ನನಗೊದಗಿತ್ತು. ಆ ಸಂದರ್ಭದಲ್ಲಿ ಅಮಿನಗಡದಿಂದ ಐಹೊಳೆಗೆ ಹೋಗುವ ಮಾರ್ಗದಲ್ಲಿ ಸುಮಾರು ಎರಡು ಕಿ.ಮೀ. ಅಂತರದಲ್ಲಿರುವ ಸೂಳಿಭಾವಿ ಗ್ರಾಮದ ಅನ್ವೇಷಣೆ ಮಾಡಿದ್ದೆ. ಈ ಗ್ರಾಮದ ದಕ್ಷಿಣಭಾಗದಲ್ಲಿ 'ಸೂಳಿಗುಡಿ' ಎಂದು ಕರೆಯಲ್ಪಡುವ ಇಮಾರತು ಇದೆ. ನಿಜವಾಗಿ ಇದೊಂದು ಮೆಟ್ಟಿಲುಗಳುಳ್ಳ ಬಾವಿಯ ಎದುರು ನಿಂತಿರುವ ಪ್ರತೋಳಿ. ವೇಶ್ಯೆಯೊಬ್ಬಳು ಕಟ್ಟಿಸಿದ್ದರಿಂದ 'ಸೂಳಗುಡಿ' ಹೆಸರು ಬಂದಿತೆಂದು ಪ್ರತೀತಿ. ೧೯೫೦ರಲ್ಲಿ ಇದರಲ್ಲಿ 'ಸೂಲೇಶ್ವರ' (ಶೂಲೇಶ್ವರ) ಎಂಬ ಹೆಸರಿನ ಲಿಂಗ ಪ್ರತಿಷ್ಠಾಪನೆಯಾದ ವಿಷಯ ಕಂಬದ ಮೇಲಿನ ಶಾಸನದಿಂದ ತಿಳಿಯುತ್ತದೆ.

ಕ್ಯಾರೊಲ್ ಬೊಲಾನ್ ಅವರು ಈಗಾಗಲೇ ಈ ಪ್ರತೋಳಿಯ ವಿವರಗಳನ್ನು ಪ್ರಸಿದ್ಧಿಸಿದ್ದಾರೆ.[1] ಆದ್ದರಿಂದ ನಮ್ಮ ಸದ್ಯದ ಅಧ್ಯಯನಕ್ಕೆ ಸಮಂಜಸವೆನಿಸುವ ವಿಷಯಗಳನ್ನಷ್ಟೇ ಇಲ್ಲಿ ಗಮನಿಸಿದರೆ ಸಾಕು. ಇಂಗ್ಲಿಷ್ 'T' ಆಕಾರದ ವಿನ್ಯಾಸವುಳ್ಳ, ಮೆಟ್ಟಿಲುಗಳುಳ್ಳ ಬಾವಿಯ ಮುಂದೆ ದಕ್ಷಿಣಾಭಿಮುಖವಾಗಿ ಪ್ರತೋಳಿ ನಿಂತಿದೆ. (ಛಾಯಾಚಿತ್ರ ೧). ಇದಕ್ಕೆ ಎರಡು ಭಾಗಗಳು: ಮುಂದೆ ತೆರೆದ ಮುಖಮಂಟಪ ಮತ್ತು ಅದಕ್ಕೆ ಹೊಂದಿಕೊಂಡ ಮುಚ್ಚಿರುವ (ಗೋಡೆಗಳಿರುವ) ಮಂಟಪ. ರುಚಕ ಮಾದರಿಯ (ಚೌಕ ವಿನ್ಯಾಸದ) ಕಂಬಗಳು, ಅವುಗಳ ಮೇಲಿನ ಕೆತ್ತನೆಗಳು, ಮಂಟಪದ ದ್ವಾರಬಂಧದ ರಚನೆ ಮತ್ತು ಕೆತ್ತನೆ (ಉದಾ : ಗರುಡ-ನಾಗಶಾಖೆಯ ಬಳಕೆ) (ಛಾಯಾಚಿತ್ರ ೨). ಮಂಟಪದ ಗೋಡೆ-ಕಂಬಗಳ ಮೇಲಿನ ಶಾಸನಗಳ ಲಿಪಿಲಕ್ಷಣ-ಇವುಗಳನ್ನು ಸೂಕ್ಷ್ಮವಾಗಿಪರೀಕ್ಷಿಸಿದರೆ, ಇದು ನಿಸ್ಸಂಶಯವಾಗಿ ಬಾದಾಮಿಯ ಚಾಲುಕ್ಯರ ಆಡಳಿತದ ಉತ್ತರಾರ್ಧದಲ್ಲಿ ನಿರ್ಮಿತವಾದ ಕಟ್ಟಡವೆಂಬುದು ಸ್ಪಷ್ಟವಾಗುತ್ತದೆ.

ಸದ್ಯ ನಾವು ವಿಶೇಷವಾಗಿ ಗಮನಿಸಬೇಕಾದ ಸಂಗತಿಗಳಿವು :

೧. ಮಂಟಪದ ದಕ್ಷಿಣ ದ್ವಾರಬಂಧದ ಮೇಲ್ಗಡೆ ಕೂಟ-ಪಂಜರ-ಶಾಲಗಳಲ್ಲಿ ಚಿಕಣಿ ಪ್ರತಿಮೆಗಳಿವೆ: ಇವುಗಳಲ್ಲಿ ಮುಖ್ಯ (ಮಧ್ಯದ) ಚೈತ್ಯಕೂಡಿನಲ್ಲಿ ಸಮಪಾದದಲ್ಲಿರುವ ಸೂರ್ಯ ತನ್ನೆರಡೂ ಕೈಗಳಲ್ಲಿ ಪದ್ಮಧಾರಿಯಾಗಿ ನಿಂತಿದ್ದಾನೆ. (ಛಾಯಾಚಿತ್ರ ೩).

೨. ಮಂಟಪದ ಮೇಲ್ಛಾವಣಿಯಲ್ಲಿ ವರಾಹರೂಪಿ ವಿಷ್ಣು (ದಕ್ಷಿಣ), ಹಂಸಾರೂಢ ಬ್ರಹ್ಮ (ಮಧ್ಯೆ) ಮತ್ತು ಕಾಲಾರಿ ಶಿವ (ಉತ್ತರ) ಇವರ ಕೆತ್ತನೆಗಳಿವೆ.

1. M. A. Dhaky *et. al* : *Encyclopaedia of Indian Architecture : Upper Dravidadesa*

೩. ಮಂಟಪದ ಉತ್ತರ ದ್ವಾರಬಂಧದಲ್ಲಿ ಮೇಲ್ಗಡೆ ವೃಷಭಾರೂಢ ಶಿವ, ಹಂಸಾರೂಢ ಬ್ರಹ್ಮ (ಮಧ್ಯೆ) ಮತ್ತು ಗರುಡಾರೂಢ ವಿಷ್ಣು ಇವರ ಶಿಲ್ಪ ಪಟ್ಟಿಕೆ ಇದೆ. (ಛಾಯಾಚಿತ್ರ ೪).

ಒಟ್ಟಿನಲ್ಲಿ ಆದಿತ್ಯ, ಬ್ರಹ್ಮರಿಗೆ ಈ ಇಮಾರತಿನಲ್ಲಿ ಪ್ರಮುಖ ಸ್ಥಾನ ಕಲ್ಪಿಸಲಾಗಿದೆ.

ಬಾದಾಮಿಯ ಚಾಲುಕ್ಯರ ಇಮಾರತುಗಳಲ್ಲಿ ತ್ರಿಮೂರ್ತಿಗಳಲ್ಲಿ ಬ್ರಹ್ಮನಿಗೆ ಮಧ್ಯದ, ಅಂದರೆ ಮುಖ್ಯ ಸ್ಥಾನವನ್ನು ಕಲ್ಪಿಸಿರುವುದು ತೀರ ಅಪರೂಪ. ದಕ್ಷಿಣಾಭಿಮುಖವಾಗಿರುವ ದ್ವಾರಬಂಧದಲ್ಲಿ ಆದಿತ್ಯನಿಗೆ ಪ್ರಮುಖ ಸ್ಥಾನವನ್ನು ಕೊಟ್ಟಿರುವದೂ ಗಮನಿಸಬೇಕಾದ ವಿಷಯ. ದ್ವಾರಬಂಧದ ಮೇಲ್ಗಡೆಯ ಆದಿತ್ಯನಿಗೂ ಮಂಟಪದ ಛತ್ತಿನ ಮಧ್ಯ ಹಾಗೂ ಉತ್ತರ ದ್ವಾರಬಂಧದ ಮೇಲ್ಗಡೆಯ ಶಿಲ್ಪಪಟ್ಟಿಕೆಯ ನಡುವಣ ಬ್ರಹ್ಮಶಿಲ್ಪಗಳಿಗೂ ಯಾವದೋ ರೀತಿಯ ಪರಸ್ಪರ ಸಂಬಂಧವಿದೆಯೆಂದು ಅನಿಸುತ್ತದೆ. ಆದಿತ್ಯ-ಸೂರ್ಯನನ್ನೂ 'ಹಿರಣ್ಯಗರ್ಭ' ಬ್ರಹ್ಮನನ್ನೂ ಒಂದೇ ದೇವತೆಯೆಂದು ಪರಿಗಣಿಸಲಾಗಿದೆಯೋ ಹೇಗೆ ?

ಒಂದು ದಶಕಕ್ಕಿಂತಲೂ ಹಿಂದೆ ಐಹೊಳೆಯ ದುರ್ಗದ ಗುಡಿಯ ಮೂಲದೈವದ ಕುರಿತಾಗಿ ಬರೆದ ಲೇಖನವೊಂದರಲ್ಲಿ, ಆ ದೇವಾಲಯದ ಶಿಲ್ಪ-ಶಾಸನಗಳನ್ನಾಧರಿಸಿ ಅದು ಮೂಲತಃ ಆದಿತ್ಯ ದೇವಾಲಯವಾಗಿತ್ತೆಂದು ನಾನು ವಾದಿಸಿದ್ದೆ.[2] ಆ ಸಂದರ್ಭದಲ್ಲಿ ಅ. ಸುಂದರ ಅವರು ಆಗಲೇ ಈ ದೇವಾಲಯದ ಮೂಲ ದೈವದ ಕುರಿತಾಗಿ ಮಂಡಿಸಿದ್ದ 'ಬ್ರಹ್ಮದೈವ' ವಾದವನ್ನು ಅಲ್ಲಗಳೆದಿದ್ದೆ. ದುರ್ಗದ ಗುಡಿಯ ಸಭಾಮಂಟಪದ ದ್ವಾರಬಂಧದ ಮೇಲ್ಗಡೆ ಪ್ರಮುಖವಾಗಿ ಬ್ರಹ್ಮನ ಚಿಕಣಿಶಿಲ್ಪವಿದ್ದುದು ಅವರ ವಾದಕ್ಕೆ ಮುಖ್ಯ ಆಧಾರವಾಗಿತ್ತು. ಅವರ ಪ್ರಕಾರ, ದುರ್ಗದ ಗುಡಿ ಬ್ರಹ್ಮದೇವಾಲಯ. ಬ್ರಹ್ಮನ ಚಿಕಣಿಶಿಲ್ಪದ ಮೇಲೆ ಆದಿತ್ಯನ ಚಿಕಣಿಶಿಲ್ಪವಿದ್ದುದನ್ನು ನಾನು ನನ್ನ ಲೇಖನದಲ್ಲಾಗಲೇ ಗಮನಕ್ಕೆ ತಂದಿದ್ದೇನೆ. ಸೂಳೆಭಾವಿಯ ಪ್ರಸ್ತುತ ಇಮಾರತಿನ ಬೆಳಕಿನಲ್ಲಿ ಅ. ಸುಂದರ ಅವರ ವಾದವನ್ನು ಪುನರ್‌ಪರಿಶೀಲಿಸಬೇಕಾಗುತ್ತದೆ. ದುರ್ಗದ ಗುಡಿಯ ಸಭಾಮಂಟಪದ ದ್ವಾರಬಂಧದ ಮೇಲ್ಗಡೆಯ ಶಾಲ-ದೇಗುಲ ಮಾದರಿಯಲ್ಲಿ ಕೆತ್ತಿರುವ ಆದಿತ್ಯ ಮತ್ತು ಆದರ ಕೆಳಗಿನ ಬ್ರಹ್ಮ ಇವರ ಚಿಕಣಿಶಿಲ್ಪಗಳು ಪರಸ್ಪರ ಸಂಬಂಧ ಹೊಂದಿವೆ. (ಛಾಯಾಚಿತ್ರ ೫). ಆದಿತ್ಯ-ಸೂರ್ಯ ಹಾಗೂ 'ಹಿರಣ್ಯಗರ್ಭ' ಬ್ರಹ್ಮ ಇವರಿಬ್ಬರನ್ನೂ ಇಲ್ಲಿ ಒಂದೇ ದೈವವೆಂದು ಪರಿಗಣಿಸಲಾಗಿದೆ. ಆದರೆ ಗರ್ಭಗೃಹದಲ್ಲಿ ಆದಿತ್ಯಬಿಂಬವಿತ್ತೆಂಬುದರ ಬಗ್ಗೆ ಎರಡು ಮಾತಿಲ್ಲ.

ಬಾದಾಮಿಯ ಚಾಲುಕ್ಯರ ಕಾಲದಲ್ಲಾಗಲೇ ಆದಿತ್ಯ ಹಾಗೂ ಬ್ರಹ್ಮ ಇವರಿಬ್ಬರೂ ಒಂದೇ ದೈವದ ರೂಪಗಳೆಂದು ಪರಿಗಣಿಸಲಾಗಿತ್ತೆಂಬುದು ಮೇಲಿನ ಪುರಾವೆಗಳಿಂದ ಸ್ಪಷ್ಟಪಡುತ್ತದೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ತ್ರೈಪುರುಷ ದೇವಾಲಯಗಳಲ್ಲಿ ಬ್ರಹ್ಮನ ಸ್ಥಾನವನ್ನು ಸೂರ್ಯನು ಆಕ್ರಮಿಸಿರುವುದು ಗೊತ್ತಿರುವ ವಿಷಯ. ಬಾದಾಮಿಯ ಚಾಲುಕ್ಯರ ಕಾಲದಿಂದಾಗಲೇ ಆದಿತ್ಯ-ಬ್ರಹ್ಮ ಒಂದೇ ದೈವವೆಂಬ ಕಲ್ಪನೆ ಬೇರೂರಿದ್ದರಿಂದಲೇ ನಂತರದ ತ್ರೈಪುರುಷ ದೇವಾಲಯಗಳಲ್ಲಿ ಹೆಚ್ಚಾಗಿ ಬ್ರಹ್ಮನ ಬದಲು ಆದಿತ್ಯನನ್ನು ಪ್ರತಿಷ್ಠಾಪಿಸುವ ಪರಂಪರೆ ಬೆಳೆದು ಬಂದಿರಬೇಕು. (ಈ ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕೃಪೆಯಿಟ್ಟು ಒದಗಿಸಿದವರು : ಮುಖ್ಯಸ್ಥರು, ಪ್ರಾಚೀನಭಾರತದ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಅವರಿಗೆ ನನ್ನ ಕೃತಜ್ಞತೆಗಳು).

---

2. S. V. Padigar : 'The Durga Temple Aihole : An Aditya Temple', *Archaeological Studies*. Vol. 2, Mysore, 1977, pp. 59-64

ಡಾ॥ ರು. ಮ. ಷಡಕ್ಷರಯ್ಯ

# ಸರೂರಿನ ಶಿಲ್ಪಗಳಲ್ಲಿ ಮುನಿ-ಭಕ್ತರು

ಪ್ರಾಚೀನ ಶಿಲ್ಪಗಳಲ್ಲಿ ಧಾರ್ಮಿಕಶಿಲ್ಪಗಳ ಅಧ್ಯಯನಕ್ಕೆ ಹೆಚ್ಚು ಮಹತ್ವತೆಯನ್ನು ನೀಡಲಾಗಿದೆ. ಅವುಗಳಲ್ಲಿ ಯತಿ, ಆಚಾರ್ಯ ಮತ್ತು ಭಕ್ತ/ಭಕ್ತಳ, ಉಪಾಸಕ/ಉಪಾಸಕಿಯರ ಶಿಲ್ಪಗಳ ಅಧ್ಯಯನಕ್ಕೆ ಒಲವು ತೋರಬೇಕಾಗಿದೆ. ಅವರ ಚರಿತ್ರೆಯು ಕಾವ್ಯಗಳಲ್ಲಿ ಮತ್ತು ಶಾಸನಸಾಹಿತ್ಯದಲ್ಲಿ ಕಂಡಬರುತ್ತಿದ್ದು, ಶೈವಧರ್ಮಕ್ಕೆ ಸಂಬಂಧಿಸಿದ್ದುದಾಗಿದೆ. ವಿಜಯನಗರ ಕಾಲದ ಪೂರ್ವದಲ್ಲಿ ಇವರ ಶಿಲ್ಪಗಳು ವಿರಳವಾಗಿ ಕಂಡಿವೆ. ಆ ಕಾಲದಲ್ಲಿ ಈ ಶಿಲ್ಪಗಳು/ಚಿತ್ರಗಳು ದೇವಾಲಯದ ಹೊರಗೋಡೆ, ಕಂಬ ಇನ್ನಿತರವುಗಳಲ್ಲಿ ಗಣನೀಯ ಪ್ರಮಾಣದಲ್ಲಿ ಕಾಣುವವು. ಆದರೆ ಅವುಗಳ ಸ್ಥಾಪನೆಯ ಉದ್ದೇಶವೇನು ? ಈ ಶಿಲ್ಪಗಳು ಪೂಜಿಸುವದಕ್ಕಾಗಿಯೇ ಅಥವಾ ಕೇವಲ ಅವರ ನೆನಪಿಗಾಗಿಯೇ ? ದೇವಾಲಯಗಳಲ್ಲಿ ದೇವ–ದೇವತೆಯರ ಮೂರ್ತಿಗಳನ್ನು ಕೂಡಿಸಲು ಮೀಸಲಾಗಿರಿಸಿದ್ದಂತೆ ಪ್ರತ್ಯೇಕ ದೇವಕೋಷ್ಠಕಗಳನ್ನು ಆ ಮೂರ್ತಿಗಳಿಗೂ ಕಲ್ಪಿಸಲಾಗಿತ್ತೇ ಅಥವಾ ಪ್ರತ್ಯೇಕ ದೇವಾಲಯಗಳನ್ನು ಕಲ್ಪಿಸಲಾಗಿತ್ತೇ ? ಆ ಗುಂಪಿಗೆ ಸೇರಿದ ಶಿಲ್ಪಗಳ ಲಕ್ಷಣಗಳೇನು ? ಪೌರಾಣಿಕ ಹಿನ್ನೆಲೆಯೇನು ?–ಹೀಗೆ ಮುಂತಾದ ಪ್ರಶ್ನೆಗಳು ಉದ್ಭವಿಸುತ್ತವೆ. ಆದುದರಿಂದ ಅವುಗಳ ಬಗ್ಗೆ ಸಾಹಿತ್ಯ ಮತ್ತು ದಂತಕತೆಗಳ ಸಹಾಯದಿಂದಲೂ ಅಭ್ಯಾಸ ಕೈಕೊಳ್ಳಬೇಕಾಗಿದೆ. ಇದರಿಂದ ಐತಿಹಾಸಿಕ ಮಾಹಿತಿಯನ್ನು ತಿಳಿಯಲು ಅನುಕೂಲವಾಗುವುದು. ಈ ನಮೂನೆಯ ಶಿಲ್ಪಗಳು ಕರ್ನಾಟಕದಲ್ಲಿ ಹೇರಳವಾಗಿವೆ.

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಸಿಂದಗಿಯ ಶಿಲ್ಪಗಳನ್ನು ಪ್ರಥಮಬಾರಿಗೆ ಡಾ॥ ಅ. ಸುಂದರ ಅವರು ಅಂಗವಿನ್ಯಾಸ, ಭಂಗಿ, ವಸ್ತ್ರಾಭರಣಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, ಅವುಗಳನ್ನು ಯತಿ, ಉಪಾಸಕ, ಉಪಾಸಕಿಯರೆಂದು ಪ್ರತ್ಯೇಕಿಸಿರುವರು. ಅವುಗಳ ಮೂಲ ನಾಮಾಂಕಿತ ತಿಳಿದಿಲ್ಲ. ಇಂತಹ ಶಿಲ್ಪಗಳು ಹಲವಾರು ದೇವಾಲಯಗಳಲ್ಲಿ ಕಂಡಿವೆ. ಕೈಯಲ್ಲಿ ದಂಡವಿಡಿದ ಯತಿಯ ಘಹಾಕೂಟದ ಶಿಲ್ಪವು (ಕ್ರಿ. ಶ. ೮ನೇ ಶತಮಾನ) ಕಾಳಾಮುಖ ಶೈವಗುರು ಲಕುಳೀಶನದು. ಭುಜದ ಮೇಲೆ ಲಿಂಗವನ್ನು ಹೊತ್ತು ನಿಂತ ಶಿವನ ಎಲಿಫಂಟಾದ ಚಿತ್ರವು (ಕ್ರಿ. ಶ. ೮ನೇ ಶತಮಾನ) ಮಹೇಶ್ವರ ಗುಂಪಿಗೆ ಸೇರಿದ್ದೆಂದು ತಿಳಿಯಲಾಗಿದೆ. ಡಾ॥ ಎಂ. ಎಂ. ಕಲ್ಬುರ್ಗಿಯವರ 'ಶಾಸನದಲ್ಲಿ ಶಿವಶರಣರು' ಎಂಬ ಕೃತಿಯಲ್ಲಿ, ಯತಿ/ಮುನಿ/ಆಚಾರ್ಯ ಮುಂತಾದವರ ಒಂದು ಗುಂಪನ್ನೂ ಭಕ್ತ/ಉಪಾಸಕ/ಉಪಾಸಕಿಯರ (ಶಿವ–ಶರಣರ) ಮತ್ತೊಂದು ಪಂಗಡವನ್ನೂ ಅವರ ಸ್ಥೂಲ ಚರಿತ್ರೆಯನ್ನೂ ಕಾಣಬಹುದು. ಅವರ 'ಶಿಲ್ಪದಲ್ಲಿ ಶಿವಶರಣರು' ಎಂಬ ಲೇಖನದಿಂದಲೂ ಇಲ್ಲಿಯವರೆಗೆ ಕರ್ನಾಟಕದಲ್ಲಿ ಬೆಳಕಿಗೆ ಬಂದ ಶಿವಶರಣರ ಶಿಲ್ಪಗಳ ಒಂದು ಪಟ್ಟಿ ಸಿಗುವುದು. ಅವರು ಶಿವಶರಣರ ಬಗ್ಗೆ ಶಾಸನಗಳ ಉಲ್ಲೇಖವನ್ನು ಕೊಟ್ಟು ಪ್ರಸ್ತಾಪಿಸಿರುವರು. ರೇವಣಸಿದ್ಧ, ೬೩ ಪುರಾತನರು, ಗುಂಡಬ್ರಹ್ಮಯ್ಯ, ಶೂಲಬ್ರಹ್ಮಯ್ಯ, ಏಕಾಂತರಾಮಯ್ಯ, ಮಡಿವಾಳ ಮಾಚಿದೇವ, ಮೂರುಜಾವಿದೇವ, ಕುಂಬಾರಗುಂಡ, ಜೇಡರ ದಾಸಿಮಯ್ಯ, ಆದಯ್ಯರ ಶಿಲ್ಪಗಳು ಅದರಲ್ಲಿ ಮುಖ್ಯವಾಗಿವೆ. ಶಿಲ್ಪಗಳ ಅಧ್ಯಯನದ ಕೊರತೆಯಿಂದ ಅವುಗಳ ಕಾಲಮಾನ ಮತ್ತು ಇನ್ನಿತರ ಉಡುಗೆ, ತೊಡುಗೆಯ

ಲಕ್ಷಣಗಳು ತಿಳಿದುಬಂದಿಲ್ಲ. ಅವರು ಗುರುತಿಸಿರುವ ಶಿವ ಶರಣರ ಹೆಸರುಗಳಿರುವ ಶಾಸನಸ್ಥಳಗಳ ಅನ್ವೇಷಣೆಯ ಅಗತ್ಯತೆ ಇದೆ. ಈ ಮಾದರಿಯ ಶಿಲ್ಪಗಳಲ್ಲಿ ವ್ಯಕ್ತಿಯ ಅಂಗವಿನ್ಯಾಸ, ವಸ್ತ್ರಾಭರಣ ಮತ್ತು ಶೈಲಿಯ ಅಧ್ಯಯನವನ್ನು ಕೈಗೆತ್ತಿಕೊಳ್ಳಬೇಕಾಗಿದೆ. ಇದರಿಂದ ಈ ಶಿಲ್ಪಗಳ ವಿಶಿಷ್ಟ ಲಕ್ಷಣಗಳನ್ನು ಅವುಗಳ ವಿಂಗಡನೆಗಾಗಿ ತಕ್ಕಮಟ್ಟಿಗಾದರೂ ತಿಳಿಯಲು ನೆರವಾಗಬಹುದು.

ಈ ಗುಂಪಿಗೆ ಸೇರಿದ ಶಿಲ್ಪಗಳು ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಸರೂರ ಗ್ರಾಮದಲ್ಲಿ ಇತ್ತೀಚೆಗೆ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಕೈಕೊಂಡ ಅನ್ವೇಷಣೆಯಲ್ಲಿ ಕಂಡುಬಂದಿವೆ. ಆ ಶಿಲ್ಪಗಳ ವಿಶೇಷತೆಯನ್ನು ತಿಳಿಯುವುದಕೋಸ್ಕರ ಆ ಸ್ಥಳದ ದೇವಾಲಯದ ವಾಸ್ತು-ಶಿಲ್ಪ, ಶಿಲಾಶಾಸನಗಳು, ದಂತಕಥೆ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಸ್ಥೂಲ ಪರಿಚಯವನ್ನು ಪ್ರಸ್ತಾಪಿಸಲಾಗಿದೆ.

ಆ ಭಾಗದಲ್ಲಿ ಸರೂರು ಗ್ರಾಮವು ರೇವಣಸಿದ್ಧ ದೇವಾಲಯಕ್ಕೆ ಹೆಸರಾಗಿದೆ. ಗ್ರಾಮದಿಂದ ಸುಮಾರು ಕಾಲು ಕಿಲೋಮೀಟರ್ ಅಂತರದ ಪ್ರಶಾಂತ ಸ್ಥಳದಲ್ಲಿ ಈ ದೇವಾಲಯವಿದೆ. ಅದಕ್ಕೆ ಮತ್ತೊಂದು ಹೆಸರು ಏಳುಗುಡಿ. ಒಟ್ಟು ಏಳು ಶಿಖರಗಳಿರುವ ಆ ದೇವಾಲಯದ ಸಮೂಹಕ್ಕೆ ಏಳುಗುಡಿ ಎಂದು ಹೆಸರುಬಂದಿತು. ದೊಡ್ಡ-ಚಿಕ್ಕ ಒಟ್ಟು ಎರಡು ದೇವಾಲಯಗಳು ಒಂದರ ಪಕ್ಕದಲ್ಲೊಂದು ವಿಶಾಲ ಆವರಣದಲ್ಲಿವೆ. ಐದು ಗರ್ಭಗೃಹಗಳನ್ನು ಹೊಂದಿದ ಪೂರ್ವ-ಪಶ್ಚಿಮಾಭಿಮುಖದ ದೊಡ್ಡ ದೇವಾಲಯಕ್ಕೆ ರೇವಣಸಿದ್ಧ ದೇವಾಲಯವೆಂದೂ ಪಕ್ಕದ ಉತ್ತರ-ದಕ್ಷಿಣಾಭಿಮುಖದ ಎರಡು ಗರ್ಭಗುಡಿಗಳನ್ನು ಹೊಂದಿದ ಮತ್ತೊಂದು ದೇವಾಲಯಕ್ಕೆ ಪಾಕಶಾಲೆಯೆಂದೂ ಹೆಸರು. ಒಟ್ಟು ಎರಡು ಶಿಲಾಶಾಸನಗಳು ಅಲ್ಲಿವೆ.

ದಕ್ಷಿಣಕ್ಕೆ ದೇವಾಲಯದ ಪೂಜೆ - ಪುನಸ್ಕಾರ ಮಾಡುವ ಪೂಜಾರಿಗಳ ಪೂರ್ವಜರ ನೂರಾರು ಗದ್ದಿಗೆಗಳಿವೆ. ಆ ದೇವಾಲಯದ ಮುಂದೆ ಇರುವ ಸುಮಾರು ೮-೧೦ ಹೆಕ್ಟೇರ್ ಫಲವತ್ತಾದ ಮರಳುಮಿಶ್ರಿತ ಕೆಂಪು ಭೂಮಿಯು ಆ ದೇವಾಲಯದ್ದೇ. ಅದರ ಫಲಉತ್ಪತ್ತಿಯನ್ನು ಅಲ್ಲಿಯ ಪೂಜಾರಿಗಳಿಗೆ ಮೀಸಲಾಗಿಡಿಸಲಾಗಿದೆ. ಆ ಪೂಜಾರಿಗಳ ಒಂದು ದೊಡ್ಡ ಕುಟುಂಬ ಆ ಗ್ರಾಮದಲ್ಲಿದ್ದು, ಆ ಕುಟುಂಬ ಮೊದಲು ಒಬ್ಬ ವ್ಯಕ್ತಿಯಿಂದ ಪ್ರಾರಂಭವಾಗಿ ಇಂದು ಅದು ಬೆಳೆದು ದೊಡ್ಡದಾಗಿದೆ. ಅವರು ವೀರಶೈವ ಜಂಗಮವರ್ಗಕ್ಕೆ ಸೇರಿದವರಾಗಿದ್ದಾರೆ. ಆ ದೇವಾಲಯಕ್ಕೆ ಕೇವಲ ವೀರಶೈವರಲ್ಲದೆ ಕುರುಬ ಜನಾಂಗದವರೂ ಭಕ್ತಾದಿಗಳಾಗಿದ್ದಾರೆ. ಅವರು ಸಹಾ ದೇವರಿಗೆ ಆಡು, ಕುರಿ ಮೊದಲು ಮಾಡಿ ದವಸ-ಧಾನ್ಯಗಳನ್ನು ಪ್ರತಿವರ್ಷವೂ ಅರ್ಪಿಸುವುದುಂಟು. ಅಲ್ಲಿಯ ದಂತಕಥೆಯಲ್ಲಿ ರೇವಣಸಿದ್ಧನ ಪವಾಡಗಳ ವರ್ಣನೆಯು ಎದ್ದು ಕಾಣಿಸುವಂತಹದು. ಬಹುಶಃ ಇದರಿಂದಾಗಿ ಆ ದೇವಾಲಯದ ಆವರಣದಲ್ಲಿ ಪಾದರಕ್ಷೆಗಳ ಪ್ರವೇಶವನ್ನು ನಿಷೇಧಿಸಲಾಗಿದೆ. ಉತ್ತರಕ್ಕೆ ಸ್ವಲ್ಪ ಅಂತರದಲ್ಲಿ ಎರಡು ವಿಶಾಲ ಗುಡ್ಡಗಳಿದ್ದು, ಆ ಎರಡು ಗುಡ್ಡಗಳ ಮೂರು ಸ್ಥಳಗಳಲ್ಲಿ ಅಲ್ಲಿಯ ದೇವಾಲಯಕ್ಕೆ ಸಂಬಂಧಿಸಿದ ಚಿಕ್ಕ ಚಿಕ್ಕ ಗುಡಿಗಳಿವೆ. ಅವೆಲ್ಲ ಇತ್ತೀಚಿನ ಕಾಲದವು.

ಪ್ರತಿವರ್ಷವೂ ಆ ದೇವಾಲಯದಲ್ಲಿ ಸಾಂಪ್ರದಾಯಕವಾಗಿ ಹಲವಾರು ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಸಂಭ್ರಮದಿಂದ ನೆರವೇರುತ್ತವೆ. ಅದರಲ್ಲಿ ಒಂದು ಹಬ್ಬದ ಆಚರಣೆಯು ಜಾತ್ರೆಯ ರೂಪದಲ್ಲಿ ವಿಜೃಂಭಣೆಯಿಂದ ಸಾಗುವುದು. ಆ ಹಬ್ಬದಲ್ಲಿ ನಿರ್ದಿಷ್ಟಪಡಿಸಿದ ಗುಡ್ಡದ ಮೇಲಿನ ಒಂದು ಸ್ಥಳದಲ್ಲಿ ತೈಲಾಭಿಷೇಕವನ್ನು ಆಚರಿಸುವುದು ವಿಶೇಷವಾಗಿದೆ. ಆ ವೇಳೆಯಲ್ಲಿ ಪೂಜಾರಿಯ ಪಾತ್ರವು ಗಮನ ಸೆಳೆಯುವಂತಹದು. ತೈಲಾಭಿಷೇಕದ ಸ್ಥಳವು ಅಲ್ಲಿಯ ದೇವಾಲಯದ ಉತ್ತರಕ್ಕಿರುವ ಗುಡ್ಡದ ಪೂರ್ವದಿಕ್ಕಿನ ಅಂಚಿನಲ್ಲಿದೆ. ಅದು ಸುಮಾರು ಹತ್ತು ಅಡಿ ವಿಸ್ತೀರ್ಣದ್ದು ಮೆಟ್ಟಿಲುಗಳನ್ನುಳ್ಳ ಚಚ್ಚೌಕ. ಸ್ವಲ್ಪ ಎತ್ತರದ ಪೂರ್ಣವಾಗಿ ತೆರೆದ ತೊಟ್ಟಿಯ ಗೋಡೆಯ ಕಟ್ಟಡ ಅದಾಗಿದೆ. ಹಾಸು ಇಳಿಜಾರು ಗುಡ್ಡದ ಬಂಡೆಯ ಮೇಲಿದೆ. ಅಲ್ಲಿ ಸೇರುವ ಭಕ್ತಾದಿಗಳು ವರ್ಷಕ್ಕೊಮ್ಮೆ ತೈಲಾಭಿಷೇಕವನ್ನು ನೆರವೇರಿಸುತ್ತಾರೆ. ಅದರ ಪಕ್ಕದಲ್ಲಿ ಅದಕ್ಕೆ ಸಂಬಂಧಿಸಿದ ಒಂದು ಚಿಕ್ಕ ರೇವಣಸಿದ್ಧನ ಗುಡಿಯಿದೆ. ಇನ್ನೆರಡು ಗುಡಿಗಳು ಈ ಗುಡ್ಡದ ದಕ್ಷಿಣಕ್ಕೆ ಮತ್ತು ಪೂರ್ವಕ್ಕಿವೆ.

ಆ ಎಲ್ಲ ಗುಡಿಗಳಿಗೆ ತನ್ನದೇ ಆದಂತಹ ಹಸರುಗಳಲ್ಲದೆ, ಅವುಗಳು ಒಂದಕ್ಕೊಂದು ಸಂಬಂಧವನ್ನೂ ಹೊಂದಿವೆ.

ರೇವಣಸಿದ್ಧ ದೇವಾಲಯದಲ್ಲಿ ಒಟ್ಟು ಎರಡು ಶಿಲಾಶಾಸನಗಳಿವೆ. ನೂರಾರು ಚಿಕ್ಕ ಪುಟ್ಟ ನಾಗಶಿಲ್ಪಗಳಿವೆ. ಅವುಗಳು ಇತ್ತೀಚಿನ ಕಾಲದವು. ಈ ದೇವಾಲಯದ ಒಳಗಡೆ ಶೈವಯತಿಗಳ ಉಪಾಸಕ, ಉಪಾಸಕಿಯರ (ಭಕ್ತ, ಭಕ್ತೆಳ), ದಂಪತಿಗಳ ಮತ್ತು ರಾಶಿ–ಚಕ್ರಫಲಕ ಶಿಲ್ಪಗಳಿವೆ. ಇವಲ್ಲದೆ ನಾಗ, ವಿಷ್ಣು, ನಂದಿ ವಿಗ್ರಹಗಳಿವೆ. ಅವೆಲ್ಲವುಗಳಿಗೆ ದಪ್ಪನಾಗಿ ಎಣ್ಣೆ, ಮೇಣ ಮೆತ್ತಿಕೊಂಡಿದೆ, ಇದರ ಪಕ್ಕದ ದೇವಾಲಯದಲ್ಲಿ ಯತಿಗಳ ಅಥವಾ ಭಕ್ತರ ಯಾವ ಶಿಲ್ಪಗಳೂ ಇಲ್ಲ.

**ಶಿಲಾಶಾಸನಗಳು :** ಎರಡು ಶಾಸನಗಳಲ್ಲಿ ಒಂದು ಈಗಾಗಲೇ ದಕ್ಷಿಣಭಾರತದ ಶಾಸನಗಳ ಸಂಪುಟ ೧೫ರಲ್ಲಿ ಪ್ರಕಟವಾಗಿದೆ. ಆದರೆ ಅದರ ಪಾಠಕ್ರಮದ ಕೆಲಮುಖ್ಯ ಅಂಶದ ಭಾಗದಲ್ಲಿ ಚಿಕ್ಕೆಗಳನ್ನು ಗುರ್ತಿಸಿ ಪ್ರಕಟಿಸಲಾಗಿದೆ. ಆದುದರಿಂದ ಅದರ ಹೆಚ್ಚಿನ ಪಾಠ ಕ್ರಮ ಕೂಡಿಸಿ ಈ ಕೆಳಗೆ ಕೊಡಲಾಗಿದೆ :

೧. ಸ್ವಸ್ತಿ ಶ್ರೀಮತು
೨. ಯಾದೋನ ರಾಯಣ ಪ್ರ
೩. ತಾಪ ಚಕ್ರವರ್ತ್ತಿ ಸಿಂಹಣ ದೇ
೪. ವ ವರಿಸದ ೧೧ನೆಯ ಬ್ರ (ಪ್ರ)ಮೋ
೫. ದಿ (ದೂ)ತ ಸೌತ್ಸರದ ಆಸಡ ಸುಧ
೬. ಪುಣಮಿ ಸೋಮವಾರದಂದು ಸರ
೭. ಊರ ಅರಳಿಗೆರೆಯ ಕೋಡಿಯ ಮ
೮. ಲ್ಲಿಕಾರ್ಜುನ ದೇವರ ಸಿಧರಾಮ ತಂದೆ ಪ್ರತಿ
೯. ಷ್ಠೆ ಮಾಡಿದ ಸಿವಗೌಡನ ಕೈಯಲು ಮ [ನ್ನೆ]
೧೦. ಯನು ಹೊಂನ ಕೊಟು ಕೊಂಡ ಕೆಯಿ ಊರಿಂದ ತೆಂಕ
೧೧. ಅರಳಿಗೆರೆಯ ಕೆರೆಯಿಂ ಪಡುವಲು ಮಲ್ಲಿನಾ
೧೨. ಥ ದೇವರ ಕೆಯಿ ಮತ್ತರು|| ಗಳತಿಗೆ ಮನೆಯ
೧೩. ಹಿಂ[ದೆ] ದೇವರ ಮ[ನೆ]ಎರ್ಡು ‖ ಅರಸನ ಹಳ್ಳಿಯ ವೀರಗೌ
೧೪. ಡನ ಕಯಲು ಮಂಕಯ್ಯನು ಹೊಂನ ಕೊಟ್ಟು ಆ ಹೊಲದಲುನ
೧೫. ಹೇ . . ಕೆರೆಯಿಂ ಬಡಗ ಸರಊರ ಸೀಮೆಯಲು ಅರಸನಹಳ್ಳಿಯ
೧೬. ಹೊಲದಲು ಸರಊರು ಮಲ್ಲಿನಾಥ ದೇವರಿಗೆ ಮತ್ತರು ನಲ್ವತ್ತು
೧೭. . ಧ. .. . . ಪೂರ್ವ್ವವಾಗಿ ನೆರೆದು ಅಯ ಮರಿ ಅಳವರಿತೊಳಿಕಾಯಿ.
೧೮. ಗಳು ಸಿಧರಾಮ ತಂದೆಯ ಮಕ್ಕಳು ಊರರ್ಪೂಜೆ ಹ.ದಲಿವರ ಹಸತಿ
೧೯. ಲಕ ಹಾಗವಂ ಬಿರರು .... ದಾಯ ಮಲ್ಲಿ ನಾತ ನಡೆವ ಹೊಸುಗು[೦]ದ
೨೦. ದ ಬೀಚಗುರು ತಂನ ಮಗ ಮಂಕಯನ ಕಾಲದಾಗುರುವಿಗೆ ಮಂಕಯಸು
೨೧. ಮಲಿನಾಥ ದೇವರ ಸ್ತಾನವ ಧಾರಾ ಪೂರ್ವ್ವಕ ಮಾಡಿಕೊಟ್ಟರು[।]
೨೨. ಹಾಗ ಹನೆರಡು ಹಾಗದ ಫಲವಕ್ಕು। ಇ ಥ
೨೩. ರ್ಮ್ಮವ ಪ್ರತಿಪಾಳಿಸಿದವರು ದೇವಗತಿ ಇ ಧರ್ಮ್ಮಕೆ ವಕ್ರವಾದ ನಾ
೨೪. ಯ[ಕ]ನರಕ । ಬೀಚಗುರುವಿನ ಮಕ್ಕಳು . . . ಸಿವಲೋಕ ಒಡೆಯರು

ಅಪ್ರಕಟಿತ ಶಿಲಾಶಾಸನದ ಪಾಠಕ್ರಮ ಈ ಕೆಳಗಿನಂತಿದೆ :

೧. ಸ್ವಸ್ತಿ।ಶ್ರೀಮತು ಯಾದವ
೨. . . . .ಣ ಪ್ರತಾಪ ಚಕ್ರವರ್ತ್ತಿ ಸಿಂ
೩. ಹಣ ದೇವವರಿಸದ ೧೦ನೇ ಇ
೪. ಭವ ಸಂವಛರದ ಬಾದ್ರಪದ ಮಾ
೫. ಘ ಪುಂರ್ಣಮಿ ಸೋಮವಾರ ಸೋಮ
೬. ಗ್ರಹಣದಲು ಅರಳಿಗೆರೆ ಮೇಲನಾಡಿ
೭. ಯಲು ಕೊಂಡಿರೆ ಭೂಸೆಂಲ ಮತ್ತ ೨ ದೇವ
೮. ರ್ಗೆಂದು .... ಕಲಯಿಂತ್ತಿ ಮೂವರುಂ
೯. ಸಹಿರಣ್ಯಃ ಕೊಂಡು ಕಮ್ಮಂಕೆಯ ನಿವೇಶ

೧೦. ಣ ಸಹಿತ ಯೀ ಧರ್ಮ್ಮವಂ ಪ್ರತಿಪಾಳಿಸು
೧೧. ವಂತಾಗಿ ಮುಂಕಯ್ಯಂಗಳಿಗೆ ಮಲ್ಲಿನಾಥ
೧೨. ರಾಮುವೆಂಬನು ಸಂವಿಧಾನದಲು ಸರ್ವ
೧೩. ನಮಸ್ಯವಾಗಿ ಧಾರಾಪೂರ್ವ್ವಕವಾಗಿ
೧೪. ಕೊಟ್ಟರು ಸ್ವದತ್ತಂ ಪರದ
೧೫. ತ್ತ ವಾ ಯೋ ಹರೇತಿ
೧೬. ಷಷ್ಟಿರ್ವ್ವರ್ಷ
೧೭. ಸಹಸ್ರಾಣಿ
೧೮. ವಿಷ್ಟಾ .
೧೯. . . .
೨೦. . .

ಮೊದಲ ಶಾಸನದ ಪಾಠ : ಯಾದವ ಸಿಂಘಣನ ಆಳ್ವಿಕೆಯ ೧೧ನೆಯ ವರ್ಷದಲ್ಲಿ ಸಿವಗೌಡನು ಅರಳಿಗೆರೆಯ ಕೋಡಿಯ ಮಲ್ಲಿಕಾರ್ಜುನದೇವರನ್ನು ಪ್ರತಿಷ್ಠಾಪಿಸಿದನು. ಸಿದ್ಧರಾಮನ ತಂದೆಯು ಭೂಮಿ ಮತ್ತು ಮನೆನಿವೇಶನವನ್ನು ಕೊಂಡು ಈ ದೇವರಿಗಾಗಿ ಸಿವನಗೌಡನ ಕೈಯಲ್ಲಿ ದತ್ತಿ ಕೊಟ್ಟನು. ಮುಂಕಯ್ಯ ಮತ್ತು ಸಿದ್ಧರಾಮು ತಂದೆಯ ಮಕ್ಕಳು ಆ ದೇವರಿಗೆ ಮತ್ತೊಂದು ಭೂದತ್ತಿಯನ್ನು ಅರಸನಹಳ್ಳಿಯ ವೀರ ಗೌಡನ ಕೈಯಲ್ಲಿ ಕೊಟ್ಟರು. ಮುಂಕಯ್ಯನು ಹುನುಗುಂದದ ಬೀಚಗುರುವಿನ ಮಗ. ಬಹುಶಃ ಮುಂಕಯ್ಯನು ತನ್ನ ತಂದೆ ಮತ್ತು ಗುರುವಾದ ಬೀಚನಿಗೆ ಆ ದೇವಸ್ಥಾನವನ್ನು ಕೊಟ್ಟಂತೆ ಕಂಡುಬರುವುದು. ಇದನ್ನು ಪ್ರತಿಪಾಳಿಸಿದವರಿಗೆ ದೇವಗತಿ ದೊರೆಯುವುದೆಂದು ಮತ್ತು ವಕ್ರರಾಗಿ ನಡೆದವರಿಗೆ ನರಕ ಸಿಗುವುದೆಂದು ತಿಳಿಸಲಾಗಿದೆ. ಕೊನೆಯಲ್ಲಿ ಬೀಚಗುರುವಿನ ಮಕ್ಕಳು ಸಿವಲೋಕ ಒಡೆಯರೆಂದು ಉಕ್ತವಾಗಿದೆ. ಬಹುಶಃ ಮುಂಕಯ್ಯನು ಸಿವಲೋಕವಪ್ಪಿದ ಹಾಗೆ ಕಾಣುತ್ತದೆ. ಈ ಶಾಸನದ ಕಾಲಮಾನ ಯಾದವ ಸಿಂಘಣ ವರ್ಷ ೧೧ ನೆಯ ಪ್ರಮೋದೂತ ಸಂವತ್ಸರ, ಆಶಾಡ, ಸುದ್ಧ, ಪುಣಮಿ, ಸೋಮವಾರ ವು ಕ್ರಿ.ಶ. ೧೨೧೦, ಜುಲೈ ೮ ಗುರುವಾರವಾಗುವುದು.

ಎರಡನೆಯ ಶಾಸನದ ಸಾರಾಂಶ : ಯಾದವ ಸಿಂಘಣನ ಆಳ್ವಿಕೆಯ ೧೦ನೆಯ ವರ್ಷದಲ್ಲಿ ಮಲ್ಲಿನಾಥ ರಾಮನೆಂಬವನು ಮುಂಕಯ್ಯನಿಗೆ ಅಲ್ಲಿಯ ದೇವರಿಗೆ ಭೂಮಿ, ಬಂಗಾರ, ಮನೆನಿವೇಶವನ್ನು ದತ್ತಿಕೊಟ್ಟನೆಂದಿದೆ. ಸಿಂಹಣದೇವ ವರ್ಷದ ೧೦ನೇ ವಿಭವ ಸಂವತ್ಸರದ ಬಾದ್ರಪದ, ಮಾಘ, ಪುಣ್ಯಮಿ, ಸೋಮವಾರ ಸೋಮಗ್ರಹಣದಲ್ಲಿ ಈ ದತ್ತಿ ಕೊಡಲಾಯಿತು. ಇದು ಕ್ರಿ.ಶ. ೧೨೦೮, ನವೆಂಬರ್ ೨೪, ಸೋಮವಾರವಾಗುವುದು.

ದೇವಾಲಯ : ಅಲ್ಲಿಯ ಐದು ಗರ್ಭಗೃಹಗಳಿರುವ ರೇವಣಸಿದ್ಧ ದೇವಾಲಯಕ್ಕೆ ಎರಡು ಸಭಾಮಂಟಪಗಳಿವೆ. ಅದು ಪೂರ್ವಾಭಿಮುಖವಾಗಿದೆ. ಶೈವ ದ್ವಾರಪಾಲಕರ ಚಿತ್ರಗಳನ್ನು ಬಾಗಿಲು ಚೌಕಟ್ಟಿನ ಫಲಕಗಳಲ್ಲಿ ತೋರಿಸಲಾಗಿದೆ. ಮೊದಲನೇ ಸಭಾಮಂಟಪಕ್ಕೆ ಹೊಂದಿ ಮೂರು ಗರ್ಭಗೃಹಗಳು ದೇವಾಲಯದ ಹಿಂಭಾಗದಲ್ಲಿವೆ. ಇನ್ನೊಂದು ಮುಂದಿನ ಸಭಾಮಂಟಪಕ್ಕೆ ಎರಡು ಗರ್ಭಗೃಹಗಳಿವೆ. ಕೇವಲ ಮೊದಲ ಸಭಾಮಂಟಪದ ಉತ್ತರ–ದಕ್ಷಿಣದ ಗರ್ಭಗೃಹಗಳಿಗೆ ಮಾತ್ರ (ಸಭಾಮಂಟಪ ಮತ್ತು ಗರ್ಭಗೃಹದ ಮಧ್ಯ) ಅಂತರಾಳಗಳಿರುವುದು ಒಂದು ವಿಶೇಷವಾಗಿದೆ. ಅದರ ಪಶ್ಚಿಮದ ಗರ್ಭಗೃಹದಲ್ಲಿ ವಿವಿಧ ಎತ್ತರದ ಐದು ಶಿವಲಿಂಗಗಳನ್ನು ಒಂದು ಪೀಠದ ಮೇಲೆ ನಿಲ್ಲಿಸಲಾಗಿದೆ. ಅದಕ್ಕೆ ಮಲ್ಲಿಕಾರ್ಜುನ ಎಂದು ಹೆಸರು. ಅದರ ದಕ್ಷಿಣ ಗರ್ಭಗುಡಿಯಲ್ಲಿಯ ಶಿವಲಿಂಗಕ್ಕೆ ರೇವಣಸಿದ್ಧನೆಂದು ಹೆಸರು. ಅದು ಇತ್ತೀಚಿನದು. ಅಲ್ಲಿ ಒಟ್ಟು ನಾಲ್ಕು ಭಕ್ತ, ಭಕ್ತಳ ಶಿಲ್ಪಗಳನ್ನು ಮತ್ತು ರಾಶಿ–ಚಕ್ರ ಫಲಕವನ್ನಿಡಲಾಗಿದೆ. ಅಲ್ಲಿಯ ದೇವರಿಗೆ ವಿಶೇಷ ಪೂಜೆ ಸದಾ ಜರುಗುವುದು. ಅದರ ಉತ್ತರ ಗರ್ಭಗೃಹದಲ್ಲಿರುವ ಶಿವಲಿಂಗಕ್ಕೆ ರೇವಣಯ್ಯನೆಂದು ಹೆಸರು. ಮುಂದಿನ ಸಭಾಮಂಟಪದ ಉತ್ತರ–ದಕ್ಷಿಣ ಗರ್ಭಗೃಹಗಳ ಶಿವಲಿಂಗ ಮತ್ತು ಅದರ ಪೀಠಗಳಿವೆ. ಅಲ್ಲಿಯ ಸಭಾಮಂಟಪದಲ್ಲಿ ಭಕ್ತದಂಪತಿಗಳ (೩), ಪ್ರಾಣಾರ್ಪಣೆ ಮಾಡಿಕೊಳ್ಳುವ ಭಕ್ತಳ (೧), ಯತಿಯ (೨)–ಹೀಗೆ ಒಟ್ಟು ಆರು ಶಿಲ್ಪಗಳಲ್ಲದ, ಒಡೆದ ವಿಷ್ಣು ಮತ್ತು ನಾಗರಾಜರ ಮೂರ್ತಿಗಳಿವೆ. ಮುಂಭಾಗದಲ್ಲಿ ಪೂರ್ವಕ್ಕೆ ತೆರೆದ ಕಕ್ಷಾಸನವಿದೆ. ಕದಂಬನಾಗರ ಶೈಲಿಯ ಶಿಖರಗಳು ಇಲ್ಲಿಯ ಐದು ಗರ್ಭಗೃಹಗಳ ಮೇಲಿವೆ. ಅವುಗಳನ್ನು ಸುಣ್ಣ–ಗಾರೆಯಿಂದ ನಿರ್ಮಿಸಲಾಗಿದೆ. ಆ ದೇವಾಲಯಕ್ಕೆ ಸಂಪೂರ್ಣವಾಗಿ ಸುಣ್ಣವನ್ನು ಬಳಿಯಲಾಗಿದೆ.

ಮೊದಲ ಸಭಾಮಂಟಪವು ನಾಲ್ಕು ಕಂಬಗಳಿಂದ ಆವೃತ್ತಗೊಂಡಿದೆ. ಅಲ್ಲಿಯೂ ಸ್ವಲ್ಪ ಎತ್ತರದ ಚಚ್ಚೌಕ ಕಟ್ಟೆಯಿದೆ. ಅಲ್ಲಿ ನಂದಿ, ಪ್ರಾಣಾರ್ಪಣೆ ಮಾಡಿಕೊಳ್ಳುವ ಭಕ್ತನ ಶಿಲ್ಪಗಳಿವೆ. ಆದರೆ ಎರಡನೇ ಸಭಾಮಂಟಪವು ಗಾತ್ರದಲ್ಲಿ ಮೊದಲಿನದಕ್ಕಿಂತ ಸ್ವಲ್ಪ ಹೆಚ್ಚು ಉದ್ದವಿದ್ದು, ಅದರ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಕಕ್ಷಾಸನದ ಮೇಲೆ ಅರ್ಧ ಕಂಬಗಳಿವೆ. ಮೇಲ್ಛಾವಣಿಯು ಮುಂಭಾಗದಲ್ಲಿ ಇಳಿಜಾರಾಗಿದೆ. ಈ ದೇವಸ್ಥಾನದ ಹೊರಗೋಡೆಯು ಸರಳವಾಗಿದೆ. ಕ್ರಿಸ್ತಶಕ ಸುಮಾರು ೧೨-೧೩ನೇ ಶತಮಾನದ ಕಂಬಗಳು ಅಲ್ಲಿವೆ. ಕಟ್ಟಡದ ಹೊರಗೋಡೆಯಲ್ಲಿ ಜೋಡಣೆಯ (ಮೊದಲ ಸಭಾಮಂಟಪ ಭಾಗದ ನಂತರ) ಗುರುತುಗಳು ಸ್ಪಷ್ಟವಾಗಿ ಗೋಚರಿಸುತ್ತದೆ. ಇದರಿಂದಾಗಿ ಈ ಕಟ್ಟಡದ ರಚನೆಯು ಸ್ಪಷ್ಟವಾಗಿ ಎರಡು ಹಂತಗಳಲ್ಲಿ ನಡೆಯಿತೆಂದು ಹೇಳಬಹುದು. ಕ್ರಿ. ಶ. ೧೩ನೆಯ ಶತಮಾನದ ಮೊದಲೇ ಈ ಕಾರ್ಯ ನಡೆಯಿತೆಂದು ಹೇಳಬಹುದು. ಅಲ್ಲಿಯ ಶಿಲಾಶಾಸನಗಳಲ್ಲಿ ಈ ದೇವಾಲಯದ ದೇವರಿಗೆ ಮಲ್ಲಿನಾಥ ಅಥವಾ ಮಲ್ಲಿಕಾರ್ಜುನ ದೇವರೆಂದು ಉಕ್ತವಾಗಿದೆ. ಯಾದವರ ಸಿಂಘಣದೇವನ ಕ್ರಿ.ಶ. ೧೨೧೦ರ ಕಾಲದಲ್ಲಿ ಸಿವಗೌಡನು ಆ ದೇವರನ್ನು ಪ್ರತಿಷ್ಠೆ ಮಾಡಿದ ನೆಂದಿದೆ.

ಪಾಕಶಾಲೆಯೆಂದು ಕರೆಯುವ ಪಕ್ಕದ ಶಿಥಿಲವಾದ ದೇವಸ್ಥಾನಕ್ಕೆ ಶಿವಲಿಂಗಗಳನ್ನು ಹೊಂದಿದ ಎರಡು ಗರ್ಭಗೃಹಗಳು ಉತ್ತರ-ದಕ್ಷಿಣಾಭಿಮುಖವಾಗಿವೆ. ಅವುಗಳ ಮಧ್ಯೆ ಸಭಾಮಂಟಪವಿದೆ. ಆ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಅದರ ಎರಡೂ ಗರ್ಭಗೃಹಗಳ ಮೇಲೂ ಕದಂಬನಾಗರ ಶೈಲಿಯ ಶಿಖರಗಳಿವೆ. ಗಾರೆ-ಸುಣ್ಣದಿಂದ ಆವೃತ್ತ ಹೊಂದಿದೆ. ಶೈಲಿಯ ದೃಷ್ಟಿಯಿಂದ ಅದೂ ಕ್ರಿ.ಶ. ೧೩ನೇ ಶತಮಾನದ್ದು.

ಮುನಿ, ಭಕ್ತಸಮೂಹದ ಶಿಲ್ಪಗಳನ್ನು ಈ ಕೆಳಗಿನಂತೆ ಒಂದೊಂದಾಗಿ ವಿವರಿಸಲಾಗಿದೆ :

೧. ಅ) ಭಕ್ತ (೫೦×೩೮ ಸೆಂ.ಮೀ.) : ಇವನು ಪದ್ಮಾಸನದಲ್ಲಿ ಕುಳಿತು ಅಂಜಲಿಮುದ್ರೆಯಲ್ಲಿದ್ದಾನೆ. ತಲೆಗೆ ಸುತ್ತಲೂ ಎಳೆದು ಟೊಪ್ಪಿಗೆಯನ್ನೂ ಧರಿಸಿದ್ದಾನೆ. ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಹಾರ, ಕೈ, ತೋಳು ಮತ್ತು ಕಾಲುಗಳಲ್ಲಿ ಬಳೆಗಳನ್ನು ಧರಿಸಿದ್ದಾನೆ. ಸೊಂಟದಲ್ಲಿ ಪಟ್ಟಿ-ವಸ್ತ್ರವಿದೆ. ಈತನ ಶಿಲ್ಪಕ್ಕೆ ಪ್ರಭಾವಳಿಯಿದ್ದು ಅದರಲ್ಲಿ ಮಕರತೋರಣವನ್ನೂ ಚಿತ್ರಿಸಲಾಗಿದೆ.

ಆ) ಭಕ್ತ (೪೦×೩೨ ಸೆಂ. ಮೀ.) : ಈ ಶಿಲ್ಪದಲ್ಲಿಯ ಯತಿಯ ಎಲ್ಲ ಲಕ್ಷಣಗಳೂ ಈ ಮೇಲೆ ತಿಳಿಸಿದ ಶಿಲ್ಪದಂತಿದೆ. ಆದರೆ ಈ ಶಿಲ್ಪದ ಯತಿಯು ತಲೆಯ ಮೇಲೆ ಟೊಪ್ಪಿಗೆಯನ್ನು ಧರಿಸಿಲ್ಲ. ಈತನ ಶಿಲ್ಪಕ್ಕೆ ಮಕರತೋರಣವಿದೆ.

ಇ) ಭಕ್ತಳು (೫೦×೩೬ ಸೆಂ. ಮೀ.) : ಈ ಶಿಲ್ಪದಲ್ಲಿ ಒಬ್ಬ ಮಹಿಳೆ ಪದ್ಮಾಸನದಲ್ಲಿ ಕುಳಿತು ಅಂಜಲಿ ಮುದ್ರೆಯಲ್ಲಿದ್ದಾಳೆ. ಅವಳ ಕೂದಲನ್ನು ಹಿಂದಕ್ಕೆ ಎಳೆದು ತುರುಬಿನಾಕಾರದಲ್ಲಿ ಕಟ್ಟಲಾಗಿದೆ. ಕಿವಿಯಲ್ಲಿ ಬಳೆಗಳು, ಕೊರಳಲ್ಲಿ ಹಾರ, ಕೈಯಲ್ಲಿ ಬಳೆ, ಕಾಲುಗಳಲ್ಲಿ ಕಾಲುಗಡಗ, ಸೊಂಟದಲ್ಲಿ ಪಟ್ಟಿ ಮತ್ತು ವಸ್ತ್ರಗಳಲ್ಲಿ ಸರಳವಾಗಿ ಧರಿಸಿರುವಂತೆ ಚಿತ್ರಗಳಿದೆ. ಇದರಲ್ಲಿ ಮಕರ ತೋರಣವನ್ನೂ ಚಿತ್ರಿಸಲಾಗಿದೆ.

೨. ಅ) ಭಕ್ತ (೬೪×೪೪ ಸೆಂ.ಮೀ.) : ಈ ಶಿಲ್ಪಕ್ಕೆ ದಪ್ಪನಾದ ಎಣ್ಣೆಮೇಣದ ಹೊದಿಕೆಯಿದೆ. ಒಬ್ಬ ಭಕ್ತನು ಸ್ವತಃ ಪ್ರಾಣಾರ್ಪಣೆ ಮಾಡಿಕೊಳ್ಳುವ ಭಂಗಿಯನ್ನು ಇದರಲ್ಲಿ ತೋರಿಸಲಾಗಿದೆ. ಇವನು ಮಂಡಿ ಊರಿ ಕುಳಿತು ತನ್ನ ಕರುಳನ್ನು ಬಿಗಿಯಾಗಿ ಹಿಡಿದು ಎಳೆಯುತ್ತ ಬಲಗೈಯಲ್ಲಿ ಚೂರಿ ಹಿಡಿದು ತಿವಿದುಕೊಳ್ಳುವುದನ್ನು ತೋರಿಸಲಾಗಿದೆ. ಇದು ಒಬ್ಬ ಭಕ್ತನು ತನ್ನ ಕರುಳನ್ನು ಅರ್ಪಿಸುವ ಸನ್ನಿವೇಶವಾಗಿದೆ. ಇವನಿಗೆ ಸರಳ ವಸ್ತ್ರಾಭರಣಗಳನ್ನೂ ತೋರಿಸಲಾಗಿದೆ.

ಆ) ಭಕ್ತಳು (೬೪×೪೪ ಸೆಂ. ಮೀ.) : ಈ ಶಿಲ್ಪದಲ್ಲಿ ಈ ಮೇಲಿನ ಶಿಲ್ಪದಂತೆಯೇ ತೋರಿಸಲಾಗಿದೆ. ಆದರೆ ಇಲ್ಲಿ ಭಕ್ತಳ ಚಿತ್ರವಿದೆ. ಇಲ್ಲಿಯೂ ಭಕ್ತಳು ತನ್ನ ಕರುಳನ್ನು ಅರ್ಪಣೆ ಮಾಡುವ ಸನ್ನಿವೇಶವನ್ನು ತೋರಿಸಲಾಗಿದೆ.

೩. ಮುನಿ(ಯತಿ) (೩೦×೨೨ ಸೆಂ. ಮೀ.) : ಈ ಶಿಲ್ಪಕ್ಕೆ ದಪ್ಪನಾಗಿ ಎಣ್ಣೆ ಮೆತ್ತಿಕೊಂಡಿದೆ. ಇದರಲ್ಲಿರುವ ಯತಿಗೆ ಗಡ್ಡವಿದೆ. ಈತನು ಪದ್ಮಾಸನದಲ್ಲಿ ಕುಳಿತು ಯೋಗಮುದ್ರೆಯಲ್ಲಿದ್ದಾನೆ. ಸರಳ ವಸ್ತ್ರಾಭರಣಗಳಿವೆ.

೪. ಮುನಿ(ಯತಿ) (೭೫×೫೫ ಸೆಂ. ಮೀ.) : ಈ ಶಿಲ್ಪದಲ್ಲಿರುವ ಯತಿಯ ಕೊರಳಭಾಗ ಒಡೆದು ಎರಡು ಹೋಳಾಗಿದೆ. ಅದನ್ನು ಹಾಗೇ ಜೋಡಿಸಿಡಲಾಗಿದೆ. ಗಡ್ಡಧಾರಿಯಾದ ಇವನು ಪದ್ಮಾಸನದಲ್ಲಿ ಕುಳಿತು ಯೋಗಮುದ್ರೆಯಲ್ಲಿದ್ದಾನೆ. ಕೂದಲನ್ನು ಹಿಂದಕ್ಕೆ ಎಳೆದು ಸಿಂಬಿಯಾಕಾರದಲ್ಲಿ ಕಟ್ಟಲಾಗಿದೆ. ವಸ್ತ್ರಾಭರಣವು ಸರಳವಾಗಿದೆ.

೫. ಭಕ್ತ ದಂಪತಿಗಳು (೫೦×೩೮ ಸೆಂ.ಮೀ.): ಈ ಶಿಲ್ಪದಲ್ಲಿರುವ ದಂಪತಿಗಳು ಪದ್ಮಾಸನದಲ್ಲಿ ಕುಳಿತಿದ್ದು, ಅಂಜಲಿಮುದ್ರೆಯಲ್ಲಿದ್ದಾರೆ. ಅವರಿಗೆ ಸರಳ ವಸ್ತ್ರಾಭರಣಗಳಿವೆ. ಅಲ್ಲಿ ಒಟ್ಟು ಇಂತಹ ಮೂರು ಶಿಲ್ಪಗಳಿವೆ.

೬. ರಾಶಿಚಕ್ರ–ಫಲಕ (೩೮×೪೦ ಸೆಂ.ಮೀ.): ಚಚ್ಚೌಕಾದ ಫಲಕದ ಮೇಲೆ ಪದ್ಮ ಮತ್ತು ರಾಶಿಗಳ ಚಿತ್ರವನ್ನು ತೋರಿಸಲಾಗಿದೆ. ಸುಂದರವಾಗಿ ಮತ್ತು ದುಂಡಾಗಿ ಒಟ್ಟು ೧೬ ದಳದ ಕಮಲ ಚಿತ್ರವನ್ನು ೪ ಗುಂಪಿನಲ್ಲಿ ತೋರಿಸಲಾಗಿದೆ. ೧೨ ಜೀವರಾಶಿಯ ಚಿತ್ರಗಳಾದ ಚೇಳು, ಮಕರ, ಮೀನು, ಏಡಿ, ತುಲಾ, ಕುರಿ, ಎತ್ತು, ಸಿಂಹ, ಧನಸ್ಸು, ದಂಪತಿಗಳು(ಮಿಥುನ), ಕನ್ಯಾಗಳನ್ನು ಕಮಲದ ಸುತ್ತಲೂ ತೋರಿಸಲಾಗಿದೆ. ಚಿಕ್ಕ ಚಿಕ್ಕ ಏಳು ಚಿತ್ರಗಳು ಲಂಬಾಕಾರದ ಒಂದು ಮಗ್ಗಲಿನಲ್ಲಿವೆ. ಬಹುಶಃ ಅವುಗಳು ಕುದುರೆಗಳಿರಬೇಕು. ಕಮಲ ಚಿತ್ರದ ಮಧ್ಯದಲ್ಲಿ ಚಿಕ್ಕ ಶಿವಲಿಂಗದ ಚಿತ್ರವಿರುವುದು ವಿಶೇಷವಾಗಿದೆ. ಇಂತಹ ಚಿತ್ರವುಳ್ಳ ಫಲಕಗಳು (ಕ್ರಿ. ಶ. ಸು. ೧೩ನೇ ಶತಮಾನ) ಬೆಳಗಾಂ ಜಿಲ್ಲೆಯ ದೇಗಾವಿ, ಬೀದರ್ ಜಿಲ್ಲೆಯ ನಾರಾಯಣಪುರ ಮತ್ತು ಆಂಧ್ರಪ್ರದೇಶಗಳಲ್ಲಿ ದೊರೆತಿವೆ.

ತಾತ್ಪೂರ್ತಿಕವಾಗಿ ಕೆಲ ಲಕ್ಷಣಗಳಿಂದ ಈ ಶಿಲ್ಪದಲ್ಲಿರುವ ವ್ಯಕ್ತಿಗಳನ್ನು ವಿವಿಧ ರೀತಿಯಲ್ಲಿ ವಿಂಗಡಿಸಲಾಗಿದೆ. ಭಂಗಿ ಮತ್ತು ಮುದ್ರೆಗಳನ್ನು ಇಲ್ಲಿ ಮುಖ್ಯವಾಗಿ ಪರಿಗಣಿಸಲಾಗಿದೆ. ಪದ್ಮಾಸನ ಮತ್ತು ಯೋಗಮುದ್ರೆಯುಳ್ಳವರನ್ನು ಮುನಿ(ಯತಿ) ಎಂದೂ ಅಂಜಲಿಮುದ್ರೆಯುಳ್ಳವರನ್ನು ಭಕ್ತ ಮತ್ತು ಭಕ್ತಳು (ಉಪಾಸಕ/ಉಪಾಸಕಿ) ಎಂದೂ ಪ್ರಾಣಾರ್ಪಣೆ ಮಾಡಿಕೊಳ್ಳುವ ಭಂಗಿ ಮತ್ತು ಮುದ್ರೆಯುಳ್ಳವರನ್ನು ಭಕ್ತ ಮತ್ತು ಭಕ್ತಳು ಎಂದೂ ವಿಂಗಡಿಸಿದೆ.

ಒಟ್ಟು ಎರಡು ಮುನಿಗುಂಪಿಗೆ ಸೇರಿದ ಶಿಲ್ಪಗಳಿವೆ. ಮುನಿಗಳ ಗುಂಪಿಗೆ ಸೇರಿದ ಒಬ್ಬನಿಗೆ ಗಡ್ಡ ತೋರಿಸಿರುವುದು ಒಂದೆಡೆ ಕಂಡರೆ, ಇನ್ನೊಂದೆಡೆ ಮುನಿ/ಭಕ್ತ ಎರಡೂ ಗುಂಪಿಗೆ ಸೇರಿದವರಿಗೆ ಸರಳ ವಸ್ತ್ರಾಭರಣಗಳಿರುವುದು ಒಂದು ವಿಶೇಷವಾಗಿದೆ.

ಭಕ್ತ/ಭಕ್ತಳ (ಉಪಾಸಕ/ಉಪಾಸಕಿಯರ) ಒಟ್ಟು ಐದು ಶಿಲ್ಪಗಳಿವೆ. ಈ ಗುಂಪಿಗೆ ಸೇರಿದ ದಂಪತಿಗಳ ಮೂರು ಶಿಲ್ಪಗಳಿವೆ. ಈ ಗುಂಪಿನಲ್ಲಿ ಒಂದೆಡೆ ಕೇವಲ ಭಕ್ತಿಯಿಂದ ಕೈಮುಗಿದು ಕುಳಿತಿರುವವರನ್ನು ಕಂಡರೆ, ಮತ್ತೊಂದೆಡೆ ಅವರ ಉತ್ಕೃಷ್ಟ ಭಕ್ತಿಯ ಸೇವೆಯನ್ನು ಪ್ರಾಣಾರ್ಪಣೆಯ ಸಂಕೇತದಲ್ಲಿ ತೋರಿಸಲಾಗಿದೆ. ಕೈಮುಗಿದು ಕುಳಿತ(ಅಂಜಲಿ) ಭಕ್ತರ ಎರಡು ಶಿಲ್ಪಗಳೂ ಭಕ್ತಳ ಒಂದು ಶಿಲ್ಪವೂ ಇವೆ. ಪ್ರಾಣಾರ್ಪಣೆ ಮಾಡಿಕೊಳ್ಳುವ ಭಕ್ತ, ಭಕ್ತಳ ಒಂದೊಂದು ಶಿಲ್ಪಗಳಿವೆ.

ಈ ಎಲ್ಲ ಶಿಲ್ಪಗಳನ್ನೂ ಅಲ್ಲಿಯ ರೇವಣಸಿದ್ಧ ದೇವಾಲಯದ ಗರ್ಭಗೃಹ ಮತ್ತು ಅದರ ಮೊದಲು ಮತ್ತು ಎರಡನೇ ಸಭಾಮಂಟಪಗಳಲ್ಲಿಡಲಾಗಿದೆ. ಪ್ರತ್ಯೇಕ ಸ್ಥಳವನ್ನಾಗಲೀ ಕೋಣೆ/ಗೂಡುಗಳನ್ನಾಗಲೀ ಕಲ್ಪಿಸಿಲ್ಲ. ಅವು ಶೈಲಿಯ ದೃಷ್ಟಿಯಿಂದ ಕ್ರಿ. ಶ. ಸು ೧೩ನೇ ಶತಮಾನದ್ದಾಗಿವೆ.

ಇಲ್ಲಿಯ ಯಾದವ ಸಿಂಘಣನ ಶಿಲಾಶಾಸನಗಳಲ್ಲಿರುವಂತೆ, ದತ್ತಿ ನೀಡಿದವರು ಸಿದ್ಧರಾಮನ ತಂದೆ, ಸಿದ್ಧರಾಮನ ತಂದೆಯ ಮಕ್ಕಳು ಮತ್ತು ಮಂಕಯ್ಯ. ದತ್ತಿ ಪಡೆದವರು ದೇವರ ಪ್ರತಿಷ್ಠಾಪಕನಾದ ಸಿವಗೌಡ ಮತ್ತು ಅರಸನಹಳ್ಳಿಯ ವೀರಗೌಡ. ಮಂಕಯ್ಯನ ತಂದೆ ಹುನಗುಂದದ ಬೀಚಗುರು. ಅವನು ಅಲ್ಲಿಯ ಮಲ್ಲಿಕಾರ್ಜುನ ದೇವಸ್ಥಾನದ ಅಧಿಪತಿಯಾಗಿದ್ದ ವಿಷಯಗಳು

ಅದರಲ್ಲಿವೆ. ಕೊನೆಯಲ್ಲಿ ಬೀಚಗುರುವಿನ ಮಕ್ಕಳು ಸಿವಲೋಕ ಒಡೆಯರು ಎಂದಿದೆ. ಈ ಹೇಳಿಕೆಯಿಂದ ಬೀಚಗುರುವಿನ ಮಕ್ಕಳನ್ನು ಯತಿಯ ಸ್ಥಾನಕ್ಕೆ ಮತ್ತು ಉಳಿದವರನ್ನು ಭಕ್ತ/ಉಪಾಸಕರ ಗುಂಪಿಗೆ ಸೇರಿಸ ಬಹುದು. ಆದರೆ ಸಿದ್ಧರಾಮನ ತಂದೆ, ತಾಯಿ ಮತ್ತು ಆತನ ಸಹೋದರರ ಹೆಸರುಗಳು ಉಕ್ತವಾಗಿಲ್ಲ. ದತ್ತಿ ನೀಡಿದವರನ್ನು ಸಿದ್ಧರಾಮನ ತಂದೆ ಮತ್ತು ಸಿದ್ಧರಾಮನ ತಂದೆಯ ಮಕ್ಕಳು ಎಂದು ವಿಂಗಡಿಸಿ ಉಲ್ಲೇಖಿಸಿರುವುದು ವಿಶೇಷವಾಗಿದೆ. ಆತನ ಹೆಸರನ್ನು ಬಳಸದೇ ಕೇವಲ ಸಿದ್ಧರಾಮನ ತಂದೆ ಮತ್ತು ಸಿದ್ಧರಾಮನ ಮಕ್ಕಳೆಂದು ಬಳಸಿರುವುದನ್ನು ನೋಡಿದರೆ, ಸಿದ್ಧರಾಮನ ಹೆಸರನ್ನು ಬಳಸುವುದು ಅವರಿಗೆ ಹೆಚ್ಚು ಪ್ರಿಯವಾಗಿರಬೇಕೆಂದು ಕಾಣುವುದು. ಸಿದ್ಧರಾಮನ ತಂದೆ-ತಾಯಿಯರು ಮುದ್ದೇಗೌಡ ಮತ್ತು ಸುಗ್ಗವ್ವೆ. ಆತನ ಅಣ್ಣ ಬೊಮ್ಮಯ್ಯ. ಆದರೆ ಅವನ ಸಹೋದರರ ಹೆಸರುಗಳು ತಿಳಿದಿಲ್ಲ. ಆತನ ಊರು ಸೊನ್ನಲಿಗೆ (ಸೊಲ್ಲಾಪುರ, ಮಹಾರಾಷ್ಟ್ರ). ಆತನನ್ನು ಸೊನ್ನಲಿಗೆ ಸಿದ್ಧರಾಮನೆಂದು ಕರೆಯುವರು. ಈತ ಖ್ಯಾತಿವೆತ್ತ ಒಬ್ಬ ಶಿವಯೋಗಿ. ಮತ್ತೊಂದು ಶಾಸನದಿಂದ ಮಲ್ಲಿವಾತರಾಮನೆಂಬವನ ಹೆಸರು ತಿಳಿಯುತ್ತದೆ.

ಈ ಭಾಗದ ಶಾಸನಗಳಲ್ಲಿ ಸಿದ್ಧರಾಮನ ಅನುಯಾಯಿಗಳಾದ ಮಾರುಡಿಗ ನಾಚಯ್ಯ,ಏಕಾಂತ ರಾಮಯ್ಯ, ಕೆಂಬಾವಿ ಭೋಗಣ್ಣ (ತಾಳಿಕೋಟೆ ಕ್ರಿ.ಶ. ೧೧೮೪), ದಶಗಣರಲ್ಲಿ ಒಬ್ಬನಾದ ಸಿಂಗಿದೇವ (ಇಂಗಳಗಿ-ಕ್ರಿ. ಶ. ೧೨೦೯), ಕೊಂಡಗುಳಿ ಕೇಶಿರಾಜ(ಕೊಂಡಗುಳಿ-ಕ್ರಿ.ಶ. ೧೧೩೨)ರು ಒಂದೆಡೆ ಕಂಡರೆ, ಸಿದ್ಧರಾಮನ ಹೆಸರನ್ನುಳ್ಳ ೨೫ ಶಾಸನಗಳು (ಕ್ರಿ. ಶ. ೧೧೯೦-೧೩೦೦) ಬಿಜಾಪುರ, ಧಾರವಾಡ, ಶಿವಮೊಗ್ಗ (ಕರ್ನಾಟಕ), ಸೊಲ್ಲಾಪುರ ಮತ್ತು ಉಸ್ಮಾನಾಬಾದ್(ಮಹಾರಾಷ್ಟ್ರ) ಗಳಲ್ಲಿವೆ. ಅದರಲ್ಲಿ ಆತನ ಹಲವಾರು ಶಾಸನಗಳು ಈ ಭಾಗದ ಚಡಚಣ, ಸಂಗೂರ, ಗುಂಡಕರ್ಜಗಿ, ಇಂಗಳಗಿ, ತಾಳಿಕೋಟೆ ಮುಂತಾದ ಸ್ಥಳಗಳಲ್ಲಿವೆ. ಆದ್ದರಿಂದ ಸಿದ್ಧರಾಮನು ಆ ಕಾಲಕ್ಕೆ ಈ ಭಾಗದಲ್ಲಿ ಖ್ಯಾತಿವೆತ್ತ ವ್ಯಕ್ತಿಯಾಗಿರಬೇಕು. ಆದರೆ ಹುನಗುಂದದ ಬೀಚಗುರು, ಮಂಕಯ್ಯ, ಶಿವಗೌಡ, ಅರಸನಹಳ್ಳಿಯ ವೀರಗೌಡ ಅವರುಗಳು ಮತ್ತು ಸಿದ್ಧರಾಮನಿಗಿದ್ದ ಸಂಬಂಧಗಳು ತಿಳಿದಿಲ್ಲ.

ಎರಡು ಶಿಲ್ಪಗಳಲ್ಲಿ ಒಂದು ಅಲ್ಲಿಯ ದೇವರ ಪ್ರತಿಷ್ಠಾಪಕ ಸಿವಗೌಡನದ್ದು. ಮತ್ತೊಂದು ಅರಸನಹಳ್ಳಿಯ ವೀರನಗೌಡನದ್ದಿರಬಹುದು. ಆದರೆ ಅಲ್ಲಿ ಭಕ್ತಳ ಶಿಲ್ಪವೊಂದಿದೆ. ಬಹುಶಃ ಇಬ್ಬರು ಭಕ್ತರಲ್ಲಿ ಒಬ್ಬನು ಅವಿವಾಹಿತನಿರಬೇಕು. ಮತ್ತೊಬ್ಬನು ವಿವಾಹಿತನಾಗಿರಬೇಕು.ಆದರೆ ದಂಪತಿಗಳ ಮೂರು ಶಿಲ್ಪಗಳಿವೆ. ವಿವಾಹಿತನಾದ ಒಬ್ಬನು ತನ್ನ ಪತ್ನಿ ಸಮೇತನಿರುವ ಒಂದು ಶಿಲ್ಪವಿದ್ದು, ಇನ್ನೊಂದು ಪ್ರಾಣಾರ್ಪಣೆ ಮಾಡಿಕೊಳ್ಳುವ ಭಕ್ತ-ಭಕ್ತಳ ಶಿಲ್ಪವಾಗಿದೆ. ಇನ್ನೆರಡು ಶಿಲ್ಪಗಳು, ಅಲ್ಲಿಯ ಶಾಸನದಲ್ಲಿ ಹೇಳಿರುವಂತೆ "ಬೀಚಗುರುವಿನ ಮಕ್ಕಳು ಶಿವಲೋಕ ಒಡೆಯರು" ಎಂದಿರುವುದರಿಂದ, ಅವುಗಳು ತಂದೆ ಮತ್ತು ಮಗನದ್ದಾಗಿರಬೇಕು. ಏಕೆಂದರೆ ಅಲ್ಲಿಯ ಶಾಸನದಲ್ಲಿ ಮಂಕಯ್ಯನ ತಂದೆ ಬೀಚಗುರು ಎಂದೂ ಅವನು ಅಲ್ಲಿಯ ಮಲ್ಲಿಕಾರ್ಜುನ ದೇವಸ್ಥಾನದ ಅಧಿಪತಿಯೆಂದೂ ಹೇಳಿದೆ. ಇದರಿಂದಾಗಿ ಬೀಚಗುರುವಿಗೆ ಒಬ್ಬ ಮಗನಿದ್ದಿರಬೇಕೆಂದು ಗೊತ್ತಾಗುತ್ತದೆ. ಭಕ್ತರ ಗುಂಪಿಗೆ ಸೇರಿದ ದಂಪತಿಗಳ ಶಿಲ್ಪವೊಂದಿದೆ. ಮತ್ತೊಂದು ಬಹುಶಃ ಬೀಚಗುರುವಿನ ದಂಪತಿಗಳ ಶಿಲ್ಪವಿರಬಹುದು. ಅಂದರೆ ಅವು ಮಂಕಯ್ಯನ ತಂದೆ-ತಾಯಿಯರ ಶಿಲ್ಪವಿರಬೇಕು. ಆದರೆ ಪ್ರಾಣಾರ್ಪಣೆ ಮಾಡಿಕೊಳ್ಳುವ ಭಕ್ತ-ಭಕ್ತಳ ಶಿಲ್ಪಗಳು ಯಾರವು ಎಂಬುದನ್ನು ತಿಳಿಯಬೇಕಾಗಿದೆ. ಈ ದೇವಸ್ಥಾನದ ಪಕ್ಕದ ಸಮಾಧಿಗಳನ್ನು ಯಾವ ಕಾಲದಿಂದ ಕಟ್ಟಲಾರಂಭವಾಯಿತೆಂಬುದನ್ನು ವಿಚಾರ ಮಾಡಿದರೆ, ಆ ಸ್ಥಳವು ಆ ಕಾಲದಲ್ಲೇ ಗುರು-ಭಕ್ತ ಸಮೂಹದ ಒಂದು ನೈಷ್ಠಿಕ ಕೇಂದ್ರವಿರಬೇಕೆನಿಸುತ್ತದೆ. ಅಲ್ಲಿಯ ಪರಂಪರೆಯನ್ನು ವಿಶ್ಲೇಷಿಸಿದರೆ, ಈಗ ಅಲ್ಲಿಯ ಪೂಜಾರಿ ವರ್ಗದ ಕುಟುಂಬದವರು ತಮ್ಮ ವಂಶಸ್ಥರು ತೀರಿಕೊಂಡರೆ ಅವರ ಸಮಾಧಿಯನ್ನು ಇಂದಿಗೂ ಅಲ್ಲಿಯೇ ಕಟ್ಟುವರಂತೆ. ಇದರಿಂದ ಆ ಸಮಾಧಿಗಳು ಆಗಿನ ಅಲ್ಲಿಯ ಗುರುವರ್ಗದ ಮನೆತನದವರಿಂದ ಪ್ರಾರಂಭವಾಗಿರಬೇಕು. ಹಾಗಿದ್ದಲ್ಲಿ, ಈ ಪರಂಪರೆಯು ಸುಮಾರು ಎಂಟುನೂರು ವರ್ಷಗಳಷ್ಟು ಹಳೆಯದಾಗುವುದು(?). ಆದರೂ ಈಗಿನ ಪೂಜಾರಿವರ್ಗದವರು ಮತ್ತು ಆಗಿನ

ಗುರುವರ್ಗದವರು ಒಂದೇ ಮನೆತನದವರೇ ಎಂಬು ವರ ಬಗ್ಗೆ ಅಭ್ಯಾಸ ಮಾಡಬೇಕಾಗಿದೆ.

ಶಿಲ್ಪಗಳ ತುಲನಾತ್ಮಕ ಅಭ್ಯಾಸದ ಅಗತ್ಯವಿದೆ. ಈ ಕಾಲದ ಇಂತಹ ಶಿಲ್ಪಗಳು ಉತ್ತರಕರ್ನಾಟಕದ ವಿವಿಧೆಡೆ ಕಂಡಿವೆ. ವಸ್ತ್ರಾಭರಣ, ಶೈಲಿಯ ಲಕ್ಷಣಗಳಲ್ಲಿ ಕೆಲವೆಡೆ ವ್ಯತ್ಯಾಸವಿದೆ. ಕೆಲವೆಡೆಯ ಶಿಲ್ಪಗಳು ಇವು ಗಳನ್ನು ಹೋಲುತ್ತವೆ. ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲೂಕಿನ ಉಜ್ಜನಿ ಶ್ರೀ ಮರುಳಸಿದ್ಧ (ಮೊದಲು ಶ್ರೀ ಮಲ್ಲಿಕಾರ್ಜುನ)ದೇವಾಲಯದಲ್ಲಿ ಸುಮಾರು ಹದಿನಾಲ್ಕು ಮುನಿ–ಭಕ್ತವರ್ಗದ ಮೂರ್ತಿಗಳಿವೆ. ಒಬ್ಬನಿಗೆ ನಾಲ್ಕು ಕೈಗಳಿವೆ. ಮಂಗಳವೇಡದ ರೇವಣಸಿದ್ಧನಿಗೂ ನಾಲ್ಕು ಕೈಗಳಿರುವುದನ್ನು ಡಾ॥ ಪಿ. ಬಿ. ದೇಸಾಯಿ ಅವರು ೧೯೬೮ರಲ್ಲಿ ದಾಖಲಿಸಿದ್ದಾರೆ. ಕೆಲವುಗಳಿಗೆ ಅಲ್ಲಿ ಪ್ರತ್ಯೇಕ ದೇವಕೋಷ್ಠಗಳೂ ಉಪಗರ್ಭಗೃಹಗಳೂ ಇದ್ದು, ಅವು ಗಳ ಬಾಗಿಲು ಚೌಕಟ್ಟಿನ ಮೇಲೆ ಅಂತಹದೇ ಚಿತ್ರ ಗಳನ್ನು ಸುಂದರವಾಗಿ ಚಿತ್ರಿಸಲಾಗಿದೆ. ಅಂಜಲಿ ಮುದ್ರೆಯ ಕೆಲ ಶಿಲ್ಪಗಳಿವೆ. ಕೆಲವು ಕಿರೀಟಧಾರಿಗಳ ಶಿಲ್ಪಗಳಾಗಿವೆ. ನೂರಾರು ಚಿಕ್ಕ ಚಿಕ್ಕ ಶಿಲ್ಪಗಳನ್ನು ಅಲ್ಲಿಯ ಭುವನೇಶ್ವರಿಯ ಸುಂದರ ಕಮಲದ ಒಂದೊಂದು ಸುತ್ತಿನ ದಳಗಳ ಮೇಲೆ ಚಿತ್ರಿಸಲಾಗಿದೆ. ಕೆಳಗೆ ಸಭಾಮಂಟಪದಲ್ಲಿ ನಂದಿ ಇದೆ. ಶಿಖರದ ಸುಕ ನಾಸಿ ಮುಂದೆ ನಿಂತ ನಂದಿ ಮತ್ತು ಅದರ ಮುಂದೆ ಒಂದು ಯತಿಯ ಶಿಲ್ಪಗಳಿವೆ. ಅದಲ್ಲದೆ, ದೇವಾಲ ಯದ ಮುಂಭಾಗದಲ್ಲಿರುವ ತೋರಣಫಲಕದ ಮೇಲೆ ಎರಡೂ ಭಾಗಗಳಲ್ಲಿ ಒಂದೇ ತರಹದ ಯತಿಗಳ ಶಿಲ್ಪ ಗಳಿವೆ. ಇವುಗಳ ಕಾಲಮಾನ ಕ್ರಿ. ಶ. ಸು. ೧೨ನೇ ಶತ ಮಾನ. ಈ ಉಜ್ಜನಿ ದೇವಾಲಯ–ಮಠವು ಪಂಚ ಪೀಠಗಳಲ್ಲಿ ಒಂದಾಗಿದೆ. ರೇವಣಸಿದ್ಧನು ಪಂಚತೀರ್ಥಸ್ಥ ರಲ್ಲಿ ಒಬ್ಬನಾಗಿರುವನು.

ಇದರ ಶಿಲ್ಪಗಳ ನಮೂನೆಯಲ್ಲಿ ವ್ಯತ್ಯಾಸ ಕಾಣು ತ್ತದೆ. ಆದರೆ ಮುನಿ–ಭಕ್ತರ ಶಿಲ್ಪಗಳೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಇಂತಹ ಕೆಲವು ಶಿಲ್ಪಗಳು ಚಿತ್ರ ದುರ್ಗದಲ್ಲೂ ಕಂಡುಬಂದಿವೆ. ಮತ್ತೊಂದು ವಿಷಯ ವೆಂದರೆ, ಪ್ರತಿವರ್ಷವೂ ಉಜ್ಜನಿಯ ದೇವಾಲಯದ ಶಿಖರಕ್ಕೆ ತೈಲಾಭಿಷೇಕಮಾಡುವರು. ಜರಿಮಲಿ ಗ್ರಾಮದ ಒಬ್ಬ ನಾಯಕ(ರಾಜ) ಮನೆತನದವರಿಂದ ಮಡಿ ಉಡಿ ಯಿಂದ ತಂದ ಮಗಿ ಎಣ್ಣೆಯನ್ನು ಪ್ರಥಮವಾಗಿ ಎರೆದು ಮುಂದೆ ಇನ್ನಿತರ ಭಕ್ತರು ತಂದ ತೈಲವನ್ನು ಎರೆಯು ವುದು ಒಂದು ರೂಢಿಯಾಗಿದೆ.

ಸಿಂಧಗಿಯ ಮಲ್ಲಿಕಾರ್ಜುನ ದೇವಾಲಯದ ಶಿಲ್ಪ ಗಳಲ್ಲೂ ಮುನಿ ಮತ್ತು ಭಕ್ತರೆಂದು ಎರಡು ಗುಂಪಿನ ಶಿಲ್ಪಗಳನ್ನಾಗಿ ಪ್ರತ್ಯೇಕಿಸಬಹುದು. ಈ ಮಾದರಿಯ ಈ ಕಾಲದ ಶಿಲ್ಪಗಳಲ್ಲಿ ಇಂಗಳೇಶ್ವರದ ಮುನಿ ರೇವಣ ಸಿದ್ಧನ ಶಿಲ್ಪದಲ್ಲಿ ಹೆಚ್ಚು ವ್ಯತ್ಯಾಸ ಕಾಣುವುದು. ಈ ಎಲ್ಲ ಶಿಲ್ಪಗಳೂ ಶೈವ ದೇವಾಲಯದಲ್ಲಿವೆ. ಅದರಲ್ಲೂ ಮಲ್ಲಿಕಾರ್ಜುನ ದೇವಾಲಯಗಳಲ್ಲಿರುವುದು ವಿಶೇಷ ವಾಗಿದೆ. ಈ ಅಭ್ಯಾಸದಿಂದ ಮುನಿಗಳ ಮತ್ತು ಭಕ್ತರ ಚಿತ್ರಗಳು ವಿವಿಧ ಲಕ್ಷಣಗಳನ್ನು ಹೊಂದಿರುವುದು ಸ್ಪಷ್ಟ ವಾಗಿ ಗೋಚರಿಸುವುದು. ಇದರಿಂದಾಗಿ ಶಿಲ್ಪಗಳಲ್ಲಿಯ ಮುನಿಗಳ ಚಿತ್ರಗಳು ಹಲವಾರೆಂದು ಮತ್ತು ಭಕ್ತರ ಗುಂಪಿನ ಚಿತ್ರಗಳು ನಾನಾ ವಿಧವೆಂದು ಸರೂರು, ಸಿಂಧಗಿ, ಉಜ್ಜನಿ ಇತ್ಯಾದಿ ಸ್ಥಳಗಳ ಶಿಲ್ಪಗಳಿಂದ ತಿಳಿ ಯುತ್ತದೆ. ಮುನಿ–ಭಕ್ತ ಗುಂಪು ವಿವಿಧವೆಂದು ಸಾಹಿತ್ಯ ದಿಂದ ತಿಳಿದಿದೆ. ಸರೂರಿನ ಶಿಲ್ಪಗಳನ್ನು ಅಲ್ಲಿಯ ಶಾಸನ ಸಹಾಯದಿಂದ ಗುರುತಿಸಲು ಪ್ರಯತ್ನಿಸಲಾಗಿದೆ.

ಶಾಸನ ಸಾಹಿತ್ಯದಲ್ಲಿ ಶಿವನಿಗೆ ಮಸ್ತಕ, ಕೈ ಮತ್ತು ಕರುಳನ್ನು ಅರ್ಪಿಸುವ ಭಕ್ತರ ವಿವರಗಳಿವೆ. ಬಳ್ಳಾರಿ ಜಿಲ್ಲೆಯ ಕುಡತಿನಿಯ ಕ್ರಿ. ಶ. ಸು. ೧೩ನೇ ಶತಮಾನದ ಶಾಸನವನ್ನು ಇಲ್ಲಿ ಮುಖ್ಯವಾಗಿ ಉದಾ ಹರಿಸಬಹುದಾಗಿದೆ ಇಂತಹ ಸನ್ನಿವೇಶಗಳು ಶಿಲ್ಪದಲ್ಲಿ ಕಾಣುವುದು ವಿರಳ. ಆದರೆ ರೇವಣಸಿದ್ಧನ ಪವಾಡ ವನ್ನು ತೋರಿಸುವ ಯಾವಶಿಲ್ಪಗಳೂ ಅಲ್ಲಿ ಕಂಡು ಬಂದಿಲ್ಲ. ಪ್ರಾಣಾರ್ಪಣೆ ಮಾಡಿ ಕೊಳ್ಳುವ ಭಕ್ತ–ಭಕ್ತಳ ಚಿತ್ರಗಳನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸೇವುಣರ ಕಾಲದ ನಂತರ ಬಿಜಾಪುರ ಜಿಲ್ಲೆಯು ಸುಲ್ತಾನರ ಅಧೀನದಲ್ಲಿ ಬಹುಕಾಲವಿದ್ದಿತು. ಈ ಕಾಲ ದಲ್ಲಿ ಯಾವ ಕಟ್ಟಡಗಳು ನಿರ್ಮಾಣವಾದವು ಎಂಬು ದಕ್ಕೆ ಒಂದು ಉದಾಹರಣೆಯೂ ಅಲ್ಲಿಲ್ಲ. ಆದಲ್ಲದೆ ಆ ಭಾಗವು ಹಿಂದೂಧರ್ಮದ ಬೆಳವಣಿಗೆಗೆ ಪ್ರೋತ್ಸಾಹ

ನೀಡಿತೆಂಬುದಕ್ಕೆ ಯಾವ ಆಧಾರವೂ ಲಭ್ಯವಾಗಿಲ್ಲ. ಆದರೆ ಅಲ್ಲಿಯ ಜನ-ಜೀವನ, ಅವರ ಧರ್ಮ-ಸಂಸ್ಕೃತಿ ಮುತ್ತು ಆಚರಣೆಗಳಿಗೆ ಯಾವುದೇ ರೀತಿಯಿಂದ ಅಡೆತಡೆ ವುಂಟಾದಂತೆ ಕಾಣುವ ಯಾವ ಕುರುಹುಗಳೂ ಇಲ್ಲ.

ಈ ಅಧ್ಯಯನದಿಂದ, ಸರೂರಿನ ರೇವಣಸಿದ್ಧ ದೇವಾಲಯವು ಕ್ರಿ.ಶ. ೧೨-೧೩ನೇ ಶತಮಾನದಲ್ಲಿ ಬಹುಶಃ ಸಿದ್ಧರಾಮನ ಅನುಯಾಯಿಗಳ ಒಂದು ಕೇಂದ್ರ ವಾಗಿದ್ದಿರಬೇಕೆಂದು ಮತ್ತು ಮುನಿ-ಭಕ್ತವೃಂದದವರ ಬೀಡಾಗಿದ್ದಿತೆಂದು ಹೇಳಬಹುದು. ವೀರಶೈವಧರ್ಮದ ಪ್ರಕಾರ, ಯಾವ ಯತಿ ಅಥವಾ ಭಕ್ತ/ಭಕ್ತಳ ಕೈಯಲ್ಲಿ ಅಥವಾ ದೇಹದ ಮೇಲೆ ಇಷ್ಟಲಿಂಗ ಇರುವುದಿಲ್ಲ. ಈ ಪರಿಸರದ ದೇವಾಲಯದಲ್ಲಿ ಈ ಕಾಲದ ರಾಶಿ-ಚಕ್ರ ಫಲಕವು ಲಭ್ಯವಾಗಿರುವುದು ಮಹತ್ವದ್ದಾಗಿದೆ.*

## ಆಧಾರ ಸಾಹಿತ್ಯ


೧. ಕರ್ನಾಟಕ ಭಾರತಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (ಡಾ॥ ಅ. ಸುಂದರ ಅವರ ಲೇಖನ)

೨. ಎಂ. ಎಂ. ಕಲ್ಬುರ್ಗಿ : ಅ) ಶಾಸನದಲ್ಲಿ ಶಿವಶರಣರು, ಧಾರವಾಡ, ೧೯೭೮

ಆ) 'ಶಿಲ್ಪಗಳಲ್ಲಿ ಶಿವಶರಣರು', ಸಿದ್ಧಗಂಗಾಶ್ರೀ, ಶ್ರೀ ಸಿದ್ಧಗಂಗಾ ಕ್ಷೇತ್ರ, ೧೯೮೧

೩. ರು. ಮ. ಷಡಕ್ಷರಯ್ಯ : ಅ) 'ಉಜ್ಜನಿ ಮರುಳಸಿದ್ಧ ದೇವಾಲಯದ ಒಂದು ಶಿಲಾಶಾಸನ' ಮಾನವಿಕ ಕರ್ಣಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯

ಆ) 'ಉಳ್ಳವರು ಶಿವಾಲಯ ಮಾಡುವರಯ್ಯ' ಲಿಂಗನುಡಿ, ಗದಗ, ೧೯೮೪

೪. ಎಸ್. ಐ. ಐ., ಸಂಖ್ಯೆ ೯, ಭಾಗ-೧ ಮತ್ತು ಸಂಖ್ಯೆ ೧೫

೫. ಲಕ್ಷ್ಮಣ್ ತೆಲಗಾವಿ : 'ಚಿತ್ರದುರ್ಗ ಪರಿಸರದ ವಿಜಯನಗರ ಕಾಲದ ಸ್ಮಾರಕಗಳು : ಕೆಲವು ಹೊಸ ಶೋಧಗಳು' (ಈ ಲೇಖನವನ್ನು ೧೯೮೯ರಲ್ಲಿ ಶಿವಮೊಗ್ಗದಲ್ಲಿ ಜರುಗಿದ ಕರ್ನಾಟಕ ಇತಿಹಾಸ ಏಳನೆಯ ಪರಿಷತ್ತಿನಲ್ಲಿ ಸಾದರ ಪಡಿಸಿದರು. ಆದರೆ ಛಾಯಾಚಿತ್ರದ ಪ್ರಕಾರ ಆ ಶಿಲ್ಪವು ಶೈಲಿಯ ದೃಷ್ಟಿಯಿಂದ ಸುಮಾರು ಕ್ರಿ.ಶ. ೧೨-೧೩ನೇ ಶತಮಾನದ್ದು).

೬. ಪಿ. ಬಿ. ದೇಸಾಯಿ : ಅ) ಬಸವೇಶ್ವರ ಅಂಡ್ ಹಿಜ್ ಟೈಮ್ಸ್, ಕ.ವಿ.ವಿ., ಧಾರವಾಡ, ೧೯೬೮

ಆ) ಎ ಹಿಸ್ಟರಿ ಆಫ್ ಕರ್ನಾಟಕ, ಕ.ವಿ.ವಿ., ಧಾರವಾಡ, ೧೯೭೦



* ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಸರೂರಿನ ದೇವಾಲಯ ಮತ್ತು ಶಾಸನಗಳ ಅನ್ವೇಷಣೆ ಕೈಕೊಳ್ಳಲು ಪರವಾನಿಗಿ ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಕುಲಸಚಿವರಿಗೂ ರಾಯಚೂರು ಜಿಲ್ಲೆಯ ಪುರದಲ್ಲಿರುವ ಕೆಲವು ಮೂರ್ತಿಗಳ ಬಗ್ಗೆ ಮಾಹಿತಿ ನೀಡಿದ ಪ್ರಾಚೀನಭಾರತ ಮತ್ತು ಶಾಸನವಿಜ್ಞಾನ ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾದ ಡಾ॥ ಅ. ಸುಂದರ ಅವರಿಗೂ ಕೃತಜ್ಞನಾಗಿದ್ದೇನೆ.

ಡಾ॥ ಎಚ್. ಆರ್. ರಘುನಾಥ ಭಟ್

# ಮುಕ್ಕೊಡೆಯ ಕಲ್ಲುಬರಹ

ಉತ್ತರಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿನ ಗುಬ್ಬಿಗೋಡಿನಲ್ಲಿ ನಾನು ನಡೆಸಿದ ಇತ್ತೀಚಿನ ಕ್ಷೇತ್ರ ಕಾರ್ಯದಲ್ಲಿ ಪತ್ತೆಯಾದ ಒಂದು ಮುಕ್ಕಾಗದೆ ಉಳಿದಿರುವ ಮುಕ್ಕೊಡೆಯ ಕಲ್ಲುಬರಹವನ್ನು ಇಲ್ಲಿ ಪ್ರಕಟಿಸಲಾಗುತ್ತಿದೆ. ಈ ಶಾಸನಶಿಲೆಯನ್ನು (ಸುಮಾರು ೭೮×೪೨ ಸೆಂ.ಮೀ.) ಗುಬ್ಬಿಗೋಡಿನ ಸಾಂಬಸದಾಶಿವೇಶ್ವರ ಗುಡಿಯ ಮಣ್ಣುಗೋಡೆಗೆ ಹಾಕಿ ಕಟ್ಟಿಬಿಟ್ಟಿದ್ದರು. ಈಚೆಗೆ ಈ ದೇವಾಲಯದ ಜೀರ್ಣೋದ್ಧಾರ ಮಾಡುವಾಗ ಈ ಕಲ್ಲು ಹೊರಬಿತ್ತು. ಇದನ್ನು ಈ ದೇಗುಲದ ಪ್ರಾಂಗಣದಂಚಿನಲ್ಲಿ ಈಗ ನಿಲ್ಲಿಸಿಡಲಾಗಿದೆ.

"ಶ್ರೀ ಶಕವರ್ಷ ೧೫೧೦ನೆಯ ಸರ್ವಜಿತು ಸಂವತ್ಸರದ ಚೈತ್ರ ಶುದ್ಧ ಪಾಡ್ಯದಂದು ಬಿಳಗಿಯ ಮಹಾಪ್ರಭು ಘಂಟೊಡೆಯರು (ಘಂಟಣ್ಣೊಡೆಯ, ಘಂಟೇಂದ್ರ) ಬಿಳಗಿಯ ಕಲ್ಲುಬಸದಿಯ ಪಾರ್ಶ್ವನಾಥ ತೀರ್ಥಂಕರರ ಶ್ರೀಕಾರ್ಯಕ್ಕೆ ವಂಧ್ಯಾನೆಗ್ರಾಮದ ಪೂರ್ವ ಚತುಸ್ಸೀಮೆಯಿಂದೊಳಗಾದ ಭೂಮಿಯನ್ನು ಸರ್ವಮಾನ್ಯವಾಗಿ ಧಾರೆಯೆರೆದು ಸಮರ್ಪಿಸಿದರು"– ಎಂದು ದಾಖಲಿಸುವ ಈ ದತ್ತಿಶಾಸನಶಿಲೆ ಬಿಳಗಿ ಅರಸರ ಕಾಲದ ಒಂದು ಉತ್ತಮ ಮುಕ್ಕೊಡೆಯ ಕಲ್ಲಾಗಿದೆ. ಈಗಾಗಲೇ ಪ್ರಕಟವಾದ ಬಿಳಗಿಯ ಎರಡು ದೀರ್ಘ ಶಿಲಾಶಾಸನಗಳಲ್ಲಿ ದತ್ತಿನೀಡಿದ ಭೂಮಿಯ ಚತುರ್ಗಡಿಯಲ್ಲಿ ಮುಕ್ಕೊಡೆಯ ಕಲ್ಲು ನೆಡಿಸಿದ್ದರ ಉಲ್ಲೇಖ ಹೀಗಿದೆ:

....ನಮಗೆ ದಾನಮೂಲವಾಗಿ ಸಲುವ।
ಆಯಿವತ್ತಳಿಗೆಯನಾಡು ಚಿಕ್ಕಮಾಳಿಗೆಯನಾಡು
ಗಳಿಗೆ ಸಲುವ
ಸೋವಿನಕೊಪ್ಪ। ಹಾದಿರಿಮಾನಿ। ಮಳಿಗೆಕಯಿ।
ಕೊಱತಾರಿ। ನೇಱಿರಿಮಾನಿ। ಚಟ್ಟನಹಳ್ಳಿ।
ಗೊರಟಿನಹಳ್ಳಿ। ಬಲುಗಣಿ।
ಬಂದಾನೆ। ಯೀ
ವೊಂಬತ್ತು ಗ್ರಾಮಗಳನೂ ಪೂರ್ವ ಚತುಸ್ಸೀಮೆ
ಯಿಂದೊಳಗಾದ
ಸರ್ವ್ವಾಂಗೋಡು ಸಹವಾದ ಭೂಮಿಗಳಿಗೆ
ಚತುರ್ಗಡಿಯಲ್ಲಿ ಮುಕ್ಕೊಡೆಯ
ಕಲ್ಲ ನೆಡಿಸಿ ಸಹಿರಣ್ಯೋದಕ ದಾನಧಾರಾಪೂರ್ವಕ
ವಾಗಿ ಧಾರೆಯ
ನೆಱದು ಕೊಟ್ಟೆವಾಗಿ........

ಇದೇ ಶಾಸನದ ಕೊನೆಯಲ್ಲೂ...ಸರ್ವಾಂಗೋಡು ಸಹಿತವಾದ ಭೂಮಿ ಸಹ ಚತುಸ್ಸೀಮೆಯಲ್ಲಿ ಮುಕ್ಕೊಡೆಯಕಲ್ಲ ನೆಡಿಸಿದ್ದರ ಪ್ರಸ್ತಾಪ ಮತ್ತೆ ಬರುತ್ತದೆ. ಬಿಳಗಿಯ ಎರಡನೆಯ ಶಾಸನದಲ್ಲೂ "ಚತುಸ್ಸೀಮೆಯೊಳ್ಮುಕ್ಕೊಡೆಯ ಕಲ್ಲನೆಡಿಸಿ"ದ್ದು ಕಂಡುಬರುತ್ತದೆ. ಹೀಗೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂಬ ನಾಲ್ಕು ಪ್ರಧಾನ ದಿಕ್ಕುಗಳಲ್ಲಿ ದತ್ತಿಭೂಮಿಯ ಸೀಮಾರೇಖೆಯಲ್ಲಿ ಮುಕ್ಕೊಡೆಯ ಸೀಮಾಕಲ್ಲುಗಳನ್ನು ನೆಡುತ್ತಿದ್ದರು.

ಕ್ರಿಸ್ತಶಕ ೧೨೪೦ರ ಕೊಪ್ಪಳದ ನೇಮಿನಾಥ ಬಸದಿಗೆ ಬಿಟ್ಟ ದತ್ತಿಭೂಮಿಯ ಚತುರ್ಗಡಿಗಳಲ್ಲಿ ನಾಲ್ಕು ಮುಕ್ಕೊಡೆಯ ಕಲ್ಲುಗಳನ್ನು ನಿಲ್ಲಿಸಿದ್ದು, ಅದನ್ನು ನಾಲ್ಕು ಸಲ ಪ್ರತ್ಯೇಕವಾಗಿ ಉಲ್ಲೇಖಿಸಿದ್ದರಿಂದ ಸ್ಪಷ್ಟವಾಗುತ್ತದೆ. ಅಷ್ಟೇಅಲ್ಲ, ಸಂಸ್ಕೃತದಲ್ಲಿ 'ಛತ್ರತ್ರಯ

ಪಾಷಾಣ' ಎಂದು ಪುನರುಕ್ತಿಗೈದು ಮತ್ತಷ್ಟೂ ಖಾತ್ರೀ ಪಡಿಸಲಾಗಿದೆ. ಕ್ರಿ.ಶ. ೧೨೭೬ರ ಬೊಮ್ಮೈಮಲೈ (ತಿರುಚಿರಪಳ್ಳಿ) ತಮಿಳು ಶಾಸನಗಳಲ್ಲಿ 'ಶ್ರೀ ಮುಕ್ಕೊಡೈಕಲ್' ಎಂದು ಶ್ರೀಕಾರ(ತಿರು) ಸೇರಿಸಿದೆ. ಶ್ರವಣಬೆಳಗೊಳದ ನಗರಜಿನಾಲಯದ ಕ್ರಿ.ಶ.೧೨೮೨ರ ಶಾಸನದ ದಾನ ಭಾಗದಲ್ಲಿ ಚತುಸ್ಸೀಮೆಗಳಲ್ಲಿ'ಬರದ ಮುಕ್ಕೊಡೆ ಹಸುಬೆನೆಟ್ಟ' ಉಲ್ಲೇಖವಿದೆ. ಚಾಮರಾಜನಗರದ ಮಲೆಯೂರು ಜೈನಬಸದಿ ತಾಮ್ರಪತ್ರದಲ್ಲಿ (ಕ್ರಿ.ಶ. ೧೪೨೨) ಗ್ರಾಮದ ಚತುಸ್ಸೀಮೆಯಲ್ಲಿ ಮುಕ್ಕೊಡೆಕಲ್ಲನ್ನು ನೆಟ್ಟಿಸಿದ್ದು ಕಂಡು ಬರುತ್ತದೆ. ಸಿದ್ದಾಪುರ ತಾಲೂಕಿನ ಕೊರ್ಲಕೈ ಬಳಿ ಜೀನೀಮಠದ ಜಾಗದಲ್ಲಿ ಶಾಸನರಹಿತ ಮುಕ್ಕೊಡೆಕಲ್ಲನ್ನು ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ನಾನು ಶೋಧಿಸಿದ್ದೇನೆ. ಈ ಕೆಲವು ನಿದರ್ಶನಗಳಲ್ಲಿ ಸೀಮಾಕಲ್ಲಾಗಿ ನೆಟ್ಟ ನಾಲ್ಕು ಮುಕ್ಕೊಡೆಕಲ್ಲುಗಳು ನಾಲ್ಕು ಪ್ರಧಾನ ದಿಕ್ಕುಗಳಲ್ಲಿ ಇದ್ದುದು ವೇದ್ಯವಾಗುತ್ತದೆ. ಇಷ್ಟಾದರೂ ಇದರ ಗುಣ ಲಕ್ಷಣ ಹಾಗೂ ಸ್ವರೂಪದ ಬಗೆಗೆ ಖಚಿತವಾಗಿ ಇನ್ನೂ ತಿಳಿದುಬಂದಿರಲಿಲ್ಲ.

ಇದೀಗ ಶೋಧನೆಯಾದ ಶಾಸನ-ಶಿಲ್ಪ ಫಲಕವು ಮುಕ್ಕೊಡೆಯ ಬಗೆಗಿನ ನಮ್ಮ ಅರಿವನ್ನು ಹೆಚ್ಚಿಸುತ್ತದೆ. ಆಯತಾಕಾರದ ಫಲಕದಲ್ಲಿ, ಅರ್ಧಕ್ಕಿಂತ ಹೆಚ್ಚಿನ ಭಾಗದಲ್ಲಿ, ಮೂರು ಕೊಡೆಗಳನ್ನು ಎದ್ದು ಕಾಣುವಂತೆ ಕಂಡರಿಸಲಾಗಿದೆ. ಒಂದರ ಮೇಲೊಂದರಂತೆ ಪೇರಿಸಿಟ್ಟಂತೆ ಚಿತ್ರಿತವಾದ ಈ ಮೂರು ಕೊಡೆಗಳು ಕೇವಲ ಸಾಂಕೇತಿಕವಾಗಿವೆ. ಯಾವ ಅಲಂಕರಣೆಯೂ ಇಲ್ಲದೆ, ತ್ರಿಕೋನಾಕೃತಿ ಅಥವಾ ಪಿರಮಿಡ್ಡಾಕೃತಿಯಲ್ಲಿ ಇವನ್ನು ಕೆತ್ತಲಾಗಿದೆ. ಇದರ ಕೆಳಗಡೆ ಜೈನ ತೀರ್ಥಂಕರನ ಚಿಕಣಿಶಿಲ್ಪವಿದೆ. ಪದ್ಮಾಸನದಲ್ಲಿ ಪದ್ಮಾಸೀನನಾಗಿ ಧ್ಯಾನಮುದ್ರೆಯಲ್ಲಿ ಕುಳಿತ ತೀರ್ಥಂಕರ ವಿಗ್ರಹವೂ ತುಂಬ ಸರಳವಾಗಿದೆ. ಇಲ್ಲಿ ಮುಕ್ಕೊಡೆಗೇ ಹೆಚ್ಚಿನ ಪ್ರಾಧಾನ್ಯ ನೀಡಲಾಗಿದೆಯೆ ಹೊರತು ಈ ಜಿನಬಿಂಬಕ್ಕಲ್ಲ. ಮುಕ್ಕೊಡೆಗಳ ಒಟ್ಟೂ ಎತ್ತರ ೨೨ ಸೆಂ.ಮೀ. ನಷ್ಟಿದ್ದರೆ, ಜಿನಬಿಂಬದ ಎತ್ತರ ಪೀಠಸಹಿತ ಕೇವಲ ೫ ಸೆಂ.ಮೀ.ನಷ್ಟಿದೆ !

ಜೈನಶಿಲ್ಪಗಳಲ್ಲಿ ಮುಕ್ಕೊಡೆಯನ್ನು ಸಾಮಾನ್ಯವಾಗಿ ಕಲಾತ್ಮಕವಾಗಿ ಕಂಡರಿಸಲಾಗುತ್ತದೆ. ಮುತ್ತಿನ ಕುಚ್ಚುಗಳು, ಸುಂದರವಾದ ಕಿರೀಟ-ಕಲಶ ಇತ್ಯಾದಿ ಅಲಂಕರಣೆಗಳಿಂದ ಇದು ಶೋಭಿಸುತ್ತದೆ. ಕಿಂಕಾಪು, ದಿವ್ಯರತ್ನ-ರೇಷ್ಮೆಕುಚ್ಚುಳ್ಳ ಕೊಡೆಗೆ ಹೋಲಿಸಿದರೆ ಮುಕ್ಕೊಡೆಕಲ್ಲಿನಲ್ಲಿ ಚಿತ್ರಿತವಾದ ಕೊಡೆಗಳು ತೀರ ಸರಳ ಹಾಗೂ ಸಾಂಪ್ರದಾಯಿಕವಾಗಿವೆ. ಆದರೆ ನೀಡಿದ ದಾನ ಶಾಸನೀಯ ಸಂದರ್ಭದಲ್ಲಿ ತ್ರಿಛತ್ರ ಸಂಕೇತ ಮೂಲತಃ ಜೈನಮತೀಯವಾಗಿದೆ. ಜೈನಮತೀಯ ದಾನಿಗಳು ಜೈನಬಸದಿ, ಮಠಕ್ಕೆ ದತ್ತಿಬಿಟ್ಟ ಜಮೀನುಗಳ ಸೀಮಾ ಕಲ್ಲುಗಳಾಗಿ ನಾಲ್ಕುದಿಕ್ಕುಗಳಲ್ಲಿ ನೆಡಿಸುತ್ತಿದ್ದ ಮುಕ್ಕೊಡೆ ಕಲ್ಲುಗಳ ಸ್ವರೂಪ ಮತ್ತು ಪ್ರಕ್ರಿಯೆಯಲ್ಲಿ ಸಹಜವಾಗಿಯೇ ಜೈನಧರ್ಮೀಯ ಭಾವವಿದೆಯೆಂದು ಮತ್ತೆ ಹೇಳಬೇಕಿಲ್ಲ.

ಕೆಲವೆಡೆ ಮುಕ್ಕೊಡೆಯ ಬದಲಾಗಿ ಪದ್ಮಾವತಿಯ ಶಿಲ್ಪವುಳ್ಳ 'ಪದ್ಮಾವತಿಕಲ್ಲು', ಕಮಂಡಲು ಚಿತ್ರವುಳ್ಳ 'ಕುಂಡಿಗೈಕಲ್ಲು', 'ಕುಂಡಿಗಲಿ' ಮುಂತಾದವು ಜೈನ ಧರ್ಮ ಸಂಬಂಧವುಳ್ಳವಾಗಿವೆ. ಬೆಂಗಳೂರು ಜಿಲ್ಲೆ ಚಿಕ್ಕಬಳಗುಂಬದಲ್ಲಿ ದೊರೆತ ಶಾಸನಶಿಲಾ ಫಲಕದ ಮೇಲ್ತುದಿಯಲ್ಲಿ ಮುಕ್ಕೊಡೆ, ಅದರ ಕೆಳಗಡೆ ಎಡಕ್ಕೆ ಮುಖ ಮಾಡಿ ನಿಂತ ಕುದುರೆಯ ಶಿಲ್ಪ ಕಂಡುಬರುತ್ತಿದ್ದು, ಇದೂ ಜೈನಬಸದಿಗೆ ದತ್ತಿಬಿಟ್ಟ ಭೂ ಸೀಮಾ ರೇಖೆಯನ್ನು ಗುರುತಿಸುವ ಸಲುವಾಗಿದೆಯೆಂದೂ ಹೇಳಲಾಗಿದೆ. ಇವೆಲ್ಲವೂ ಗಡಿಕಲ್ಲು ಅಥವಾ ಸೀಮಾಕಲ್ಲುಗಳಾಗಿದ್ದು, ಶಾಸನ ಸಹಿತ ಇಲ್ಲವೆ ಶಾಸನರಹಿತವಾಗಿರುತ್ತವೆ

ಈ ಬಗೆಯ ಮುಕ್ಕೊಡೆಕಲ್ಲುಗಳನ್ನು ಸೀಮಾ ಕಲ್ಲುಗಳಾಗಿ ಚತುಸ್ಸೀಮೆಯ ಪೂರ್ವ. ಪಶ್ಚಿಮ,ಉತ್ತರ, ದಕ್ಷಿಣ ಗಡಿಗಳಲ್ಲಿ ಹೆಚ್ಚಾಗಿ ನಿಲ್ಲಿಸಲಾಗುತ್ತದೆ. ಕೊಪ್ಪಳದ ನೇಮಿನಾಥಬಸದಿ ಶಾಸನದಲ್ಲಿರದ ಉಲ್ಲೇಖ ಮತ್ತು ಇತರ ಶಾಸನಗಳಲ್ಲಿರುವಂತೆ 'ಚತುಸ್ಸೀಮೆಯೊಳ್ಮುಕ್ಕೊಡೆ ಕಲ್ಲನೆಡಿಸಿ' ಎಂಬ ಪ್ರಯೋಗ ಈ ಮಾತನ್ನು ಸಮರ್ಥಿಸುತ್ತವೆ. ಮುಳಗುಂದತೀರ್ಥದ ಜೈನಬಸದಿ ಶಾಸನ (ಕ್ರಿ.ಶ. ೧೦೫೩)ದಲ್ಲಿ ಜೈನಬಸದಿಗೆ ದತ್ತಿಬಿಟ್ಟ ಹೊಲಕ್ಕೆ ಮೇರೆಯಾಗಿ ಈಶಾನ್ಯಕ್ಕೆ 'ಕವಿಲೆಯಕಲ್ಲ'ನ್ನೂ ಆಗ್ನೇಯದೊಳ್ 'ಆದಿತ್ಯನಕಲ್ಲ'ನ್ನೂ ನೈರುತ್ಯದೊಳ್ 'ಚಂದ್ರನ ಕಲ್ಲ'ನ್ನೂ ಮತ್ತು ವಾಯುವ್ಯದೊಳ್ 'ಪದ್ಮಾವತೀ

ಕಲ್ಲ'ನ್ನೂ ನೆಡಲಾಗಿದ್ದುದು ತುಂಬ ಸ್ವಾರಸ್ಯಕರವಾಗಿದೆ. ಇದರಿಂದ ಪ್ರಧಾನ ನಾಲ್ಕುದಿಕ್ಕುಗಳಲ್ಲಿ ಮುಕ್ಕೊಡೆ ಕಲ್ಲುಗಳನ್ನೂ ಉಳಿದ ನಾಲ್ಕು ಉಪದಿಕ್ಕುಗಳಲ್ಲಿ ಮುಕ್ಕೊಡೇತರ ಜೈನಮತೀಯ ಕಲ್ಲುಗಳನ್ನೂ ಗಡೀಕಲ್ಲು ಗಳಾಗಿ ನೆಡುತ್ತಿದ್ದ ಪದ್ಧತಿಯಿದ್ದಿರಬೇಕೆಂದು ಸದ್ಯಕ್ಕೆ ಊಹೆಮಾಡಬಹುದಾಗಿದೆ.

ಒಟ್ಟನಲ್ಲಿ ಹೇಳಬಹುದಾದ್ದೆಂದರೆ, ಯಾವ ದಾನಿ ಯಿಂದ ಯಾವ ಸಂಸ್ಥೆಗೆ ದತ್ತಿಬಿಟ್ಟಿರುತ್ತದೆಯೋ ಆ ವ್ಯಕ್ತಿಯ, ಸಂಸ್ಥೆಯ ಧಾರ್ಮಿಕ ಆಶಯಗಳು ಈ ಬಗೆಯ ಗಡಿಕಲ್ಲುಗಳಲ್ಲಿ ಪಡಿಮೂಡಿರುತ್ತವೆ. ಗುಬ್ಬಗೋಂಡಿನಲ್ಲಿ ಪತ್ತೆಯಾದ ಮುಕ್ಕೊಡೆಯ ಕಲ್ಲುಬರಹದಿಂದ ಇದು ಇನ್ನೂ ಸ್ಪಷ್ಟವಾಗುತ್ತದೆ. ದತ್ತಿಬಿಟ್ಟ ಭೂಮಿಯ ಎಲ್ಲೆಗಳನ್ನೂ ನಿಖರವಾಗಿ ಗುರುತಿಸಿ, ಮತೀಯ ಮುದ್ರೆ ಯೊಂದಿಗಿನ ಸೀಮಾಸೂಚಕ ಶಿಲೆಗಳನ್ನೂ ವಿದ್ಯುಕ್ತ ನಾಗಿ ನೆಡುವ ಪದ್ಧತಿ ಪ್ರಾಚೀನವಾದುದ್ದಾದರೂ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಇದು ವ್ಯಾಪಕವಾಗಿತ್ತು ಎಂಬುದಕ್ಕೆ ಈ ಕಾಲದ ಹಲವು ಬಗೆಯ ಗಡಿಕಲ್ಲುಗಳು ಸಾಕ್ಷಿ. ಇವು ಆ ಕಾಲದ ಸಮಾ ಜೋಧಾರ್ಮಿಕ-ಕೃಷಿಕ ಇತಿಹಾಸದ ಪುನಾರಚನೆಗೆ ಪೂರಕ ಸಾಮಗ್ರಿಗಳಾಗಿವೆ ಎಂದು ಪ್ರತ್ಯೇಕವಾಗಿ ಹೇಳ ಬೇಕಾಗಿಲ್ಲ. ಅಂತೆಯೇ ಈ ಬಗೆಯ ಗಡಿಕಲ್ಲುಗಳನ್ನು ಇನ್ನೂ ವ್ಯಾಪಕವಾಗಿ, ಸಮಗ್ರವಾಗಿ ಸಂಶೋಧಿಸಿ ವರ್ಗೀಕರಿಸುವುದು ಅಗತ್ಯ.

## ಶಾಸನ ಪಾಠ

೧. ಶ್ರೀ ಶಕವರುಷ ೧೫೧೦ನೆಯ ಸರ್ವಜಿತ್ಸಂವತ್ಸ
೨. ರದ ಚೈತ್ರ ಶು ೧ ಲು ಶ್ರೀಮನ್ಮಹಾಪ್ರಭು ಘಂಟೊಡೆಯರು ಬಿಳಿಗೆ
೩. ಯ ಕಲ್ಲಬಸ್ತಿಯ ಪಾರ್ಶ್ವತೀರ್ತ್ಥೇಶ್ವರರ ಶ್ರೀಕಾರ್‍ಯಕ್ಕೆ ವೊಂದಾನೆಯ ಗ್ರಾಮ
೪. ದ ಪೂರ್ವ ಚತುಸ್ಸೀಮೆಯಿಂದೊಳಗಾದ ಭೂಮಿಯನೂ ಸರ್ವ್ವಮಾ
೫. ನ್ಯವಾಗಿ ಧಾರೆಯೆಱೆದು ಸಮರ್ಪ್ಪಿಸಿದರು ಶ್ರೀ ಶ್ರೀ ಶ್ರೀ

## ಆಧಾರ ಸಾಹಿತ್ಯ


೧. ಸಾಧನೆ, ಸಂಪುಟ ೮, ಸಂಚಿಕೆ ೪, ೧೯೭೯ (ಆರ್. ಎನ್. ಗುರುವ ಅವರ ಲೇಖನ)
೨. ಉಪ್ಪಂಗಳ ರಾಮಭಟ್ಟ : ಕನ್ನಡ ವೈಯಾಕರಣ ಭಟ್ಟಾಕಲಂಕ, ಉಡುಪಿ, ೧೯೮೬
೩. ಎ.ಇ., ಸಂಪುಟ ೧೬
೪. ಪಿ.ಎಸ್.ಐ., ಸಂಪುಟ ೨, ಸಂಖ್ಯೆ ೪೭೪, ೬೫೮
೫. ಎ.ಕ., ಸಂಪುಟ ೨ (೧೯೭೩) ಮತ್ತು ಸಂಪುಟ ೪ (೧೯೭೫)
೬. ಎ.ಆರ್.ಎಸ್.ಐ.ಈ., ೧೯೩೦-೪೦-೪೨-೪೩
೭ ಎ.ಎಸ್.ಓ.ಎಂ.-ಎ.ಆರ್., ೧೯೧೦-೧೧ (೧೯೭೬)

ಡಾ॥ ಚೂಡಾಮಣಿ ನಂದಗೋಪಾಲ್

# ಹದಿನೆಂಟನೇ ಶತಮಾನದಲ್ಲಿಯ ಕರ್ನಾಟಕದ ಭಿತ್ತಿಚಿತ್ರಗಳು

೧

ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆಯು ಸಮೃದ್ಧವಾಗಿ ಭಿತ್ತಿಗಳಲ್ಲಿ ರೂಪುಗೊಂಡು ಬಾದಾಮಿಯ ಗುಹಾಂತರ ದೇವಾಲಯದ ವೈಷ್ಣವಚಿತ್ರಗಳ ಮೂಲಕ ವೈಶಿಷ್ಟ್ಯಪೂರ್ಣವಾದ ಕಾಣಿಕೆಯನ್ನು ನೀಡಿರುವುದು ಗಮನಾರ್ಹವಾಗಿದೆ. ಅಲ್ಲಿಯ ವೈಷ್ಣವ ಗುಹೆಯಲ್ಲಿರುವ ಮಂಗಳೇಶನ ಕ್ರಿ. ಶ. ೫೭೮ರ ಶಾಸನವು ಚಿತ್ರಕಲೆಯಿಂದ ಗುಹೆಯ ಸೌಂದರ್ಯವು ವೃದ್ಧಿಸಿರುವುದನ್ನು ಉಲ್ಲೇಖಿಸುತ್ತದೆ. ಮಣ್ಣೆಯ ಕ್ರಿ. ಶ. ೮೦೨ರ ತಾಮ್ರಶಾಸನವು ಗಂಗ ಅರಸರ ಆಸ್ಥಾನ ಕಂಡರಣೆಕಾರನಿಗೆ ಚಿತ್ರಕಲೆಯಲ್ಲಿಯೂ ಪರಿಣತಿ ಇದ್ದ ಬಗ್ಗೆ ತಿಳಿಸುವುದಲ್ಲದೆ, ಚಿತ್ರಕಲೆಯು ಉಳಿದ ಲಲಿತಕಲೆಗಳಿಗೆ ಆಧಾರಭೂತವೆಂದೂ ಹೇಳುತ್ತದೆ. ದೇವನಹಳ್ಳಿಯ ಕ್ರಿ. ಶ. ೭೭೬ರ ತಾಮ್ರಶಾಸನವು ಅದರ ಕಂಡರಣೆಕಾರನು ಚಿತ್ರಕಲಾ ನಿಪುಣನೂ ಆಗಿದ್ದನೆಂದು ತಿಳಿಸುತ್ತದೆ. ಗುಪ್ತರ ಕಲೆಯ ಮುಂದುವರಿಕೆಯಾಗಿ ಎಲ್ಲೋರದಲ್ಲಿ ಕಂಡುಬರುವ ಅಂತಿಮ ಹಂತದ ಸಾಂಪ್ರದಾಯಿಕ ಭಿತ್ತಿಚಿತ್ರಗಳಿಗೆ ರಾಷ್ಟ್ರಕೂಟರು ಪ್ರೋತ್ಸಾಹ ನೀಡಿರುವುದನ್ನು ಕಾಣಬಹುದು.

ಕಲ್ಯಾಣಿ ಚಾಲುಕ್ಯ ಸೋಮೇಶ್ವರನ 'ಮಾನಸೋಲ್ಲಾಸ'ವೇ ಕರ್ನಾಟಕದಲ್ಲಿ ಚಿತ್ರಕಲೆಯನ್ನು ಕುರಿತು ಹೇಳಿದ ಮೊದಲ ಗ್ರಂಥ. ಇದರಲ್ಲಿ ಭಿತ್ತಿಚಿತ್ರ ರಚನೆಯನ್ನು ಕುರಿತು ಅನೇಕ ಉಪಯುಕ್ತ ಮಾಹಿತಿಗಳು ದೊರೆಯುತ್ತವೆ. ಭಿತ್ತಿಯ ತಯಾರಿಕೆ, ಭಾವಚಿತ್ರ ರಚನೆ, ಬಣ್ಣಗಳ ತಯಾರಿಕೆ, ಕುಂಚಗಳ ಬಳಕೆ, ಚಿನ್ನದ ರೇಕಿನಿಂದ ಚಿತ್ರವನ್ನು ಅಲಂಕರಿಸುವುದು ಇತ್ಯಾದಿಗಳನ್ನು ಕುರಿತು ಗ್ರಂಥಕರ್ತನು ವಿಶದವಾಗಿ ವಿವರಿಸಿದ್ದಾನೆ. ಇದರಿಂದಾಗಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಭಿತ್ತಿಚಿತ್ರಗಳು ವಿಜೃಂಭಿಸಿದವೆಂದು ಹೇಳಲು ಏನೂ ಅಡ್ಡಿಯಿಲ್ಲ. ಕಲ್ಯಾಣಿ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳನ್ನು ಅಕಲದುರ್ಗದಲ್ಲಿ ಅಬ್ದುಲ್ ವಹೀದ್‌ಖಾನರು ಸಂಶೋಧಿಸಿದುದರಿಂದ, ಅದು ಬಾದಾಮಿ ಮತ್ತು ಕೈಲಾಸನಾಥದ ಭಿತ್ತಿಚಿತ್ರಗಳು ಹಾಗೂ ಹೊಯ್ಸಳರ ಕಾಲದ ಜೈನ ತಾಳೆಓಲೆಯ ಗ್ರಂಥವಾದ ಧವಳದ ಚಿತ್ರಗಳ ಮಧ್ಯದ ಅಂತರವನ್ನು ತುಂಬಿದಂತಾಯಿತು. ಹೊಯ್ಸಳರ ಕಾಲದ ಕೆಲವು ಶಾಸನಗಳು 'ಚಿತ್ರಮಂಟಪ'ಗಳನ್ನು ಉಲ್ಲೇಖಿಸುತ್ತವೆ. ಜಕ್ಕನಹಳ್ಳಿಯ ಕಾಳೇಶ್ವರ ದೇವಾಲಯ ಹಾಗೂ ಶ್ರವಣಬೆಳಗೊಳದ ಶಾಂತಿನಾಥ ಬಸ್ತಿಗಳು ಒಮ್ಮೆ ಸಂಪೂರ್ಣವಾಗಿ ಚಿತ್ರಕಲೆಯಿಂದ ಆವೃತ್ತವಾಗಿದ್ದು, ಈಗ ಕೆಲವು ಅಳಿದು ಉಳಿದಿರುವ ತುಣುಕುಗಳೇ ಗತಕಾಲದ ವೈಭವಕ್ಕೆ ದುರಂತ ಸಾಕ್ಷಿಯಾಗಿವೆ. ಹೊಯ್ಸಳರ ಕಾಲವು ನಾಜೂಕಿನ ಕೆತ್ತನೆಯ ಶಿಲ್ಪಗಳಿಗೆ ಹೆಸರುವಾಸಿಯಾದರೂ ದೇವಾಲಯದ ವಿವಿಧ ಭಾಗಗಳನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದ ಬಗ್ಗೆ ಕೆಲವು ಉಲ್ಲೇಖಗಳು ದೊರೆಯುತ್ತವೆ.

ಕರ್ನಾಟಕದ ಚಿತ್ರಕಲಾ ವಾಹಿನಿಯು ನಿರಂತರವಾಗಿ, ಪರಂಪರಾನುಗತವಾಗಿ ಹರಿದು ಕೆಲವು ಅಲ್ಪಸ್ವಲ್ಪ ಬದಲಾವಣೆಗಳಿಂದ ಕೂಡಿ, ವಿಜಯನಗರ ಕಾಲದಲ್ಲಿ ಧರ್ಮಛತ್ರ, ಅರಮನೆ, ದೇವಾಲಯ ಹಾಗೂ ಶ್ರೀಮಂತ ಕುಟೀರಗಳು ವರ್ಣಮಯ ಭಿತ್ತಿಚಿತ್ರಗಳಿಂದ

ಅಲಂಕರಿಲ್ಪಟ್ಟಿದ್ದರ ಬಗ್ಗೆ ಅಸಂಖ್ಯಾತ ಶಾಸನಗಳು, ಕನ್ನಡ ಸಾಹಿತ್ಯದಲ್ಲಿಯ ವರ್ಣನೆಗಳು ಹಾಗೂ ವಿದೇಶಿ ಪ್ರವಾಸಿಗಳ ಹೇಳಿಕೆಗಳು ಮಾಹಿತಿ ನೀಡುತ್ತವೆ. ಇದಲ್ಲದೆ ಗಣಿಕೆಯರು, ವಾದ್ಯಗಾರರು ಮತ್ತು ಕಲಾ ಸಂಗ್ರಹಕಾರರ ಮನೆಗಳೂ ಸೃಜನಶೀಲ ಕಲಾಕೃತಿಗಳಿಂದ ಅಲಂಕರಿಸಲ್ಪಟ್ಟಿದ್ದರ ಬಗ್ಗೆ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ. ಗೋಡೆಗಳ ಹಾಗೂ ಮೇಲ್ಚಾವಣಿಗಳ ಶೂನ್ಯತನವನ್ನು ಕಳೆಯಲು ಹಾಗೂ ಸುಂದರವಾಗಿ ಕಾಣುವಂತೆ ಮಾಡಲು ಚಿತ್ರಗಳನ್ನು ಬರೆಯಿಸುತ್ತಿದ್ದರು. ಇದಕ್ಕೆ 'ಚಿತ್ರಾಭಾಸ' ಎಂದು ಕರೆಯಲಾಗಿದೆ. ಈ ಚಿತ್ರಗಳು ಶಿಲ್ಪಗಳಂತೆ ತ್ರಿಮಾನದಲ್ಲಿ ಭಾಸವಾಗುವಂತಿದ್ದು, ಉತ್ತರಭಾರತದ ಚಪ್ಪಟೆಯಾದ ಚಿತ್ರಗಳಿಗಿಂತ ಭಿನ್ನವಾಗಿ ದುಂಡುತನವನ್ನು ತೋರಿಸುತ್ತವೆ.

ಬೃಹತ್ ಪ್ರಮಾಣದ ವಾಸ್ತುಶಿಲ್ಪ ಕಟ್ಟೋಣಗಳು ಭಿತ್ತಿಚಿತ್ರಕಲಾ ನಿಪುಣರಿಗೆ ಹೊಸದೊಂದು ಆಶಾಕಿರಣವನ್ನೇ ಮೂಡಿಸಿದವು. ವಿಜಯನಗರ ಕಾಲದ ಹಾಗೂ ನಂತರದ ದೇವಾಲಯಗಳ ಪ್ರಾಕಾರ ಮತ್ತು ಮೇಲ್ಚಾವಣಿಗಳು ವಿಶಾಲವಾಗಿಯೂ ಶಿಲ್ಪಗಳ ಅಡೆತಡೆಯಿಲ್ಲದೆಯೂ ಇದ್ದುದರಿಂದ ಚಿತ್ರಕಲಾವಿದರು ಹೆಚ್ಚಿನ ಸ್ವಾತಂತ್ರ್ಯದಿಂದ, ಆತ್ಮಸಂತೋಷದಿಂದ ಚಿತ್ರ ರಚಿಸಲು ಸಾಧ್ಯವಾಯಿತು. ಇದರಿಂದಾಗಿ ಇವರ ಕಲಾಕೃತಿಗಳನ್ನು ಬಹಳಷ್ಟು ಜನರು ನೋಡಿ ಮೆಚ್ಚಲು ಅವಕಾಶವಾಯಿತು. ಕಲಾವಿದರಿಗೂ ಇದೊಂದು ಸದಾವಕಾಶವಾಗಿದ್ದು, ಅವರ ಅತ್ಯುತ್ತಮ ಅಭಿವ್ಯಕ್ತಿಯನ್ನು ಭಿತ್ತಿಗಳಲ್ಲಿ ಮೂಡಿಸಲು ಸಾಧ್ಯವಾಯಿತು. ವಿಜಯನಗರ ಕಾಲದ ಅತ್ಯಂತ ಮಹತ್ವದ ಚಿತ್ರಗಳು ಹಂಪೆಯ ವಿರೂಪಾಕ್ಷ ದೇವಾಲಯ ಹಾಗೂ ಲೇಪಾಕ್ಷಿಯ ವೀರಭದ್ರ ದೇವಾಲಯಗಳಲ್ಲಿ ಕಾಪಾಡಲ್ಪಟ್ಟಿವೆ. ಆಗಮ ಹಾಗೂ ಸಮಕಾಲೀನ ಅಂಶಗಳು ಸುಮಧುರವಾಗಿ ಸಾಮರಸ್ಯಗೊಂಡು ಸುಂದರವಾಗಿ ಇಲ್ಲಿ ಒಡಮೂಡಿವೆ. ಪೌರಾಣಿಕ ವಸ್ತು-ವಿಷಯಗಳು ಚಿತ್ರಕಲೆಯ ಷಡಂಗಗಳನ್ನು ಒಳಗೊಂಡ ಆಕೃತಿಗಳು ಲಲಿತವಾದ ಬಾಹ್ಯರೇಖೆಗಳ ಸಂಯೋಜನೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸಿವೆ (ಷಡಂಗವೆಂದರೆ ರೂಪಭೇದ, ಪ್ರಮಾಣ, ಭಾವ, ಲಾವಣ್ಯ, ಸಾದೃಶ್ಯ ಮತ್ತು ವರ್ಣಿಕಾಭಂಗ). ವಿಜಯನಗರ ಹಾಗೂ ಅನಂತರ ಕಾಲದ ಚಿತ್ರಗಳಲ್ಲಿ ಸಾದೃಶ್ಯ ಮತ್ತು ಲಾವಣ್ಯಗಳೇ ಮುಖ್ಯವಾಗಿ ಕಂಡುಬರುತ್ತವೆ.

ತಾಡಪತ್ರಿಯ ದೇವಾಲಯಗಳಲ್ಲಿ ಚಿತ್ರಕಲೆಯ ಕೆಲವು ತುಣುಕುಗಳು ಉಳಿದುಕೊಂಡಿವೆ. ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿ ಭಿತ್ತಿಚಿತ್ರಗಳು ತಕ್ಕ ಮಟ್ಟಿಗೆ ಉತ್ತಮ ಸ್ಥಿತಿಯಲ್ಲಿ ಉಳಿದುಕೊಂಡಿದ್ದು, ಅವುಗಳಲ್ಲಿ ವಿಜಯನಗರ ಕಾಲದ ತಿರುಪರುತ್ತಿಕುನ್ರಂನ ಭಿತ್ತಿಚಿತ್ರಗಳೂ ಸೇರಿವೆ. ಇಲ್ಲಿಯ ಸಂಗೀತಮಂಟಪವನ್ನು ಎರಡನೇ ಬುಕ್ಕನ ಮಂತ್ರಿ ಹಾಗೂ ಸೇನಾಪತಿಯಾಗಿದ್ದ ಇರುಗಪ್ಪನು ಕಟ್ಟಿಸಿ ವರ್ಣಮಯ ಚಿತ್ರಗಳನ್ನು ಬರೆಯಿಸಿದ್ದಕ್ಕೆ ದಾಖಲೆಗಳಿವೆ. ಈ ಚಿತ್ರಗಳು ಜೈನತೀರ್ಥಂಕರರಾದ ವೃಷಭದೇವ, ವರ್ಧಮಾನ ಹಾಗೂ ನೇಮಿನಾಥರ ಜೀವಿತಕಥಾಮಾಲಿಕೆಗೆ ಸೇರಿದ್ದು, ಅಪ್ಸರೆಯರ ನೃತ್ಯ ಮತ್ತು ಕೋಲಾಟಗಳ ದೃಶ್ಯಗಳನ್ನೂ ಒಳಗೊಂಡಿವೆ.

ವಿಜಯನಗರ ಸಾಮ್ರಾಜ್ಯವು ಕ್ರಿ. ಶ. ೧೫೬೫ರಲ್ಲಿ ನಾಶವಾದ ಮೇಲೆ ಕಲಾವಿದರು, ಕುಶಲಕರ್ಮಿಗಳು ನಿರಾಶ್ರಿತರಾಗಿ ಚದುರಿ ಹೋಗುವಂತಾಯಿತಾದರೂ ವಿಜಯನಗರದ ಸಾಮಂತರೇ ಆಗಿದ್ದ ಮೈಸೂರು ಒಡೆಯರ ಹಾಗೂ ತಂಜಾವೂರು ನಾಯಕರ ಕೃಪಾಶ್ರಯಕ್ಕೆ ಒಳಗಾದರು. ಸ್ವಾಭಾವಿಕವಾಗಿಯೇ ಅವರು ವಿಜಯನಗರದ ಸಾಂಪ್ರದಾಯಿಕ ಶೈಲಿಯನ್ನು ಮುಂದುವರಿಸಿಕೊಂಡು ಬಂದರು. ಇದರಿಂದಾಗಿ ಮೈಸೂರು ಹಾಗೂ ತಂಜಾವೂರು ಶೈಲಿಯ ಚಿತ್ರಗಳಲ್ಲಿ ಅನೇಕ ಸಾಮ್ಯಗಳನ್ನು ಕಾಣಬಹುದು. ಮುಂದಿನ ಶತಮಾನಗಳಲ್ಲಿ ಕೃತಿ ರಚನೆಯನ್ನು ಜೀರ್ಣಿಸಿಕೊಳ್ಳುವ ಹಾಗೂ ಅರ್ಜಿಸುವ ಕ್ರಿಯೆಯಲ್ಲಿ ಇವೆರಡೂ ಸಂಪ್ರದಾಯಗಳು ಅಭಿವ್ಯಕ್ತಿ ಹಾಗೂ ತಂತ್ರಗಳೆರಡರಲ್ಲೂ ಸ್ಪಷ್ಟವಾಗಿ ಗೋಚರಿಸುವಂತೆ ಬೆಳೆದುಬಂದವು. ದಕ್ಷಿಣಭಾರತದ ಚಿತ್ರಕಲಾ ಚಟುವಟಿಕೆಗಳು ವಿಭಿನ್ನ ಅವಕಾಶಗಳಲ್ಲಿ, ವಿವಿಧ ಕ್ಷೇತ್ರಗಳಲ್ಲಿ, ವೈವಿಧ್ಯಮಯ ಶೈಲಿಗಳಲ್ಲಿ ವಿಪುಲವಾಗಿ ಬೆಳೆದು ಹದಿನೆಂಟು ಹಾಗೂ ಹತ್ತೊಂಬತ್ತನೆಯ ಶತಮಾನದ ಭಿತ್ತಿಚಿತ್ರಗಳಲ್ಲಿ ಪುನರುತ್ಥಾನವನ್ನು ಕಾಣುವಂತಾಯಿತು.

೨

ಕಾಲಮಾನದ ದೃಷ್ಟಿಯಿಂದ ಲೇಪಾಕ್ಷಿಯ ನಂತರದ ಚಿತ್ರಗಳು ಶ್ರವಣಬೆಳಗೊಳದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದ್ದು, ವಿಜಯನಗರ ಹಾಗೂ ಮೈಸೂರುಶೈಲಿಗಳ ಮಧ್ಯದ ಕೊಂಡಿಯಾಗಿವೆ. ಇವು ಹದಿನೆಂಟನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದವುಗಳು. ಇಲ್ಲಿಯ ಜೈನಮಠದಲ್ಲಿ ಚಿತ್ರ, ಶಿಲ್ಪ, ವಿಗ್ರಹ, ಲೋಹದ ಕೃತಿಗಳ ಸಂಗ್ರಹವೂ ಇದೆ. ಪ್ರವೇಶದ್ವಾರದ ಒಳಗೆ ಪಶ್ಚಿಮ ಹಾಗೂ ಉತ್ತರದ ಗೋಡೆಗಳಲ್ಲಿ ಪಾರ್ಶ್ವನಾಥನ ಜೀವನವನ್ನು ಆತನ ಹಿಂದಿನ ಒಂಬತ್ತು ಭವಾವಳಿಗಳೊಂದಿಗೆ(ಜನ್ಮ) ಚಿತ್ರಿಸಿದೆ. ಅವುಗಳಲ್ಲಿ ಮೊದಲ ಹಾಗೂ ಕೊನೆಯ ಜನ್ಮಗಳನ್ನು ವಿಶದವಾಗಿ ಚಿತ್ರಿಸಿದೆ. ಶ್ರೀಮಂತಿಕೆಯ ಜೀವನ, ಏಕಾಂತದ ವಾಸಸ್ಥಾನ, ರಾಜಾಸ್ಥಾನ, ಶ್ರವಣಬೆಳಗೊಳದ ವಾರ್ಷಿಕ ಜಾತ್ರೆಯ ಚಿತ್ರಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ. ಸರಿಸುಮಾರು ಎಲ್ಲ ಮಾನವಾಕಾರಗಳೂ ಪಾರ್ಶ್ವಗತ ನೋಟ ಉಳ್ಳದ್ದಾಗಿದ್ದು, ಹಂಪೆ ಹಾಗೂ ಲೇಪಾಕ್ಷಿಯ ಭಿತ್ತಿಚಿತ್ರಗಳನ್ನು ತದ್ವತ್ತಾಗಿ ಹೋಲುತ್ತವೆ. ಆಭರಣಗಳ ಹೊರರೇಖೆ,ಅವಿಚ್ಛಿನ್ನರೇಖೆಯಲ್ಲಿ ರೂಪಿಸಿದ ಆಕೃತಿಗಳ ಸಂಯೋಜನಾ ತಂತ್ರ, ಆಕೃತಿಗಳ ನಿಲವು, ಕೈಗಳಲ್ಲಿ ಕಂಡುಬರುವ ಶಕ್ತಿಯುತವಾದ ಅಭಿವ್ಯಕ್ತಿಗಳು ಲೇಪಾಕ್ಷಿಯಿಂದ ಬಂದಂತಹವು.ಆದರೆ ಸೀರೆಯ ನೆರಿಗೆಗಳು, ಸ್ತ್ರೀಯರ ಹೊಲಿದ ಉಡುಪುಗಳು ಹಾಗೂ ಗಂಭೀರ ಮುಖಭಾವಗಳು ಶಿಷ್ಟ ಬೆಳವಣಿಗೆಯನ್ನು ವ್ಯಕ್ತಪಡಿಸುತ್ತವೆ. ಕೆಲವು ಪುರುಷವ್ಯಕ್ತಿಗಳ ಉಡುಪು ಮತ್ತು ಶಿರೋಭೂಷಣಗಳು ಮರಾಠರು ಅಧಿಕಾರಿಗಳನ್ನು ಹೋಲುತ್ತವೆ. ಸಂತೆಯಲ್ಲಿ ಮಾರುತ್ತಿರುವ ಹಾಗೂ ಕೊಳ್ಳುತ್ತಿರುವ ಸಾಮಾನ್ಯ ಸ್ತ್ರೀಯರ ಅಲಂಕಾರಗಳು ಮೈಸೂರು ಸಾಂಪ್ರದಾಯಿಕ ಚಿತ್ರಗಳನ್ನು ಯಥವತ್ತಾಗಿ ಅನುಸರಿಸಲ್ಪಟ್ಟಿವೆ. ರಾಕ್ಷಸರ ರೂಪಚಿತ್ರಗಳು ಅವರ ಪೌರುಷಯುತ ಆಕಾರಗಳು ಮತ್ತು ಶಕ್ತಿಯುತ ಭಾವನೆಗಳನ್ನೊಳಗೊಂಡಿದ್ದು, ತೊಗಲುಗೊಂಬೆಯನ್ನು ನೆನಪಿಸುತ್ತವೆ. ಕೆಲವು ಕಡೆಗಳಲ್ಲಿ ಚಿತ್ರಗಳನ್ನು ಚಿಕ್ಕ ಅಳತೆಯಲ್ಲಿ ಹೂಬಳ್ಳಿಗಳ ವಿನ್ಯಾಸದ ಸಣ್ಣ ಸಣ್ಣ ಅಂಕಣಗಳೊಳಗೆ ರಚಿಸಿರುವುದರಿಂದ ಚಿಕಣಿಚಿತ್ರಗಳಂತೆ ಕಾಣುತ್ತವೆ. ಈ ಎಲ್ಲ ಸತ್ಯಾಂಶಗಳಿಂದ ಚಿತ್ರಕಲಾ ರಚನೆಯಲ್ಲಿ ಹಲವಾರು ಪ್ರದೇಶಗಳ ಕಲಾವಿದರನ್ನು ಇಲ್ಲಿ ತೊಡಗಿಸಿಕೊಂಡರೂ ಒಟ್ಟು ಸಂವಿಧಾನದ ಐಕ್ಯತೆಗೆ ಭಂಗ ಬಾರದೆ ಕೃತಿ ರಚನೆಯಾಗುವಂತೆ ಮಾಡುವಲ್ಲಿ ಜೈನಮಠವು ಯಶಸ್ವಿಯಾದ ಸಾಧನೆಯನ್ನು ಮಾಡಿದೆ. ಇದು ಒಟ್ಟು ಚಿತ್ರಗಳ ವಿಭಿನ್ನ ರಚನಾ ಶೈಲಿಯ ಸೃಷ್ಟಿ ಕ್ರಿಯೆಯನ್ನು ಗಮನಿಸಿದಾಗ ಕಂಡುಬರುತ್ತದೆ. ಚಿತ್ರದುರ್ಗದಿಂದ ೪೦ ಕಿ.ಮೀ. ದೂರದಲ್ಲಿರುವ ಹಿರಿಯೂರಿನ ತೇರು ಮಲ್ಲೇಶ್ವರ ದೇವಾಲಯವನ್ನು ಕೆಂಚಪ್ಪನಾಯ್ಕನೆಂಬುವನು ಕಟ್ಟಿಸಿದ್ದು. ಇಲ್ಲಿ ಕಿರಾತಾರ್ಜುನವಿಜಯಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಅಷ್ಟದಿಕ್ಪಾಲಕರು, ದಶಾವತಾರ ಮತ್ತು ಸೀತಾಕಲ್ಯಾಣದ ದೃಶ್ಯಗಳಲ್ಲಿ ಶಕ್ತಿಯುತವಾದ ಚಿತ್ರಣವಿದ್ದು.ಸ್ಥಳೀಯ ಕಲಾವಿದರ ಕಸಬುಗಾರಿಕೆ ಕಂಡುಬರುತ್ತದೆ. ಕೌಶಲ್ಯದ ಕೊರತೆ ತೋರಿಬರುತ್ತದೆಯಾದರೂ ಅದು ಬದಲಾಗುತ್ತಿದ್ದ ಸಾಂಪ್ರದಾಯಿಕ ಚಿತ್ರಶೈಲಿಗಳ ಮತ್ತೊಂದು ಕೊಡುಗೆಯಾಗಿದೆ.

ಸಿರಾ : ಬಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ ಸಿರಾ ಪ್ರಾಮುಖ್ಯತೆಗೆ ಬಂದಿತು. ಆದಿಲ್‌ಶಾಹಿಗಳನ್ನು ಗೆದ್ದುಬಂದ ಮೊಘಲರೂ ಸಿರಾವನ್ನು ರಾಜಧಾನಿಯಾಗಿಸಿ ದಕ್ಷಿಣದ ಒಂದು ಮುಖ್ಯಕೇಂದ್ರವನ್ನಾಗಿ ಮಾಡಿಕೊಂಡರು. ಪುನಃ ಕ್ರಿ. ಶ. ೧೭೫೭ರಲ್ಲಿ ಮರಾಠರು ಸಿರಾವನ್ನು ವಶಪಡಿಸಿಕೊಂಡರಾದರೂ ಕ್ರಿ.ಶ. ೧೭೫೯ರಲ್ಲಿ ಶಾಂತಿಸಂಧಾನವಾಗಿ ಅದು ಮೈಸೂರಿನ ವಶಕ್ಕೆ ಬಂದಿತು. ಹೈದರ್‌ಅಲಿಯು ಕ್ರಿ.ಶ. ೧೭೬೧ರಲ್ಲಿ ತಾನು ಸಿರಾದ ನವಾಬನೆಂದು ಘೋಷಿಸಿಕೊಂಡನು. ಮತ್ತೆ ಕ್ರಿ. ಶ. ೧೭೬೬ರಲ್ಲಿ ಅದು ಮರಾಠರ ಕೈಸೇರಿತು. ಟಿಪ್ಪು ಸುಲ್ತಾನನು ಕ್ರಿ.ಶ. ೧೭೭೪ರಲ್ಲಿ ಪುನಃ ಅದನ್ನು ಗೆದ್ದನು. ಈ ಕಾರಣಗಳಿಂದಾಗಿ ಸಿರಾ ವಿಭಿನ್ನ ಬಗೆಯ ರಾಜ್ಯಾಡಳಿತ, ಧಾರ್ಮಿಕ ಹಾಗೂ ಸಾಮಾಜಿಕ ಬೆಳವಣಿಗೆಯನ್ನು ಕಾಣುವಂತಾಯಿತು. ಇಲ್ಲಿಯ ರೇವಣಸಿದ್ಧೇಶ್ವರ ದೇವಾಲಯವು ಸ್ವಲ್ಪ ಶ್ರೀಮಂತರೆನ್ನಬಹುದಾದ ಕುರುಬ ಜನಾಂಗದವರದಾಗಿದ್ದು, ಇವರು ಕಲಾಪೋಷಕರೂ ಆಸ್ಥಾನ ಕಲಾವಿದರನ್ನೇ ನೇಮಿಸಿಕೊಳ್ಳುವಷ್ಟು ಶಕ್ತಿಯುತರೂ ಆಗಿದ್ದರು. ಇಲ್ಲಿಯ ಚಿಕ್ಕದಾದ ಕತ್ತಲು ತುಂಬಿದ ಹಜಾರದಲ್ಲಿ ರಾಮಾಯಣ ಹಾಗೂ ಭಾಗವತಗಳಿಗೆ ಸಂಬಂಧಿಸಿದ ಚಿತ್ರಗಳಿವೆ. ಈ ಚಿತ್ರಗಳು ಹಲವು ಪದರಗಳ ಸುಣ್ಣದೊಳಗೆ ಮರೆಯಾಗಿದ್ದು, ಆಕಸ್ಮಿಕವಾಗಿ

ಕಂಡುಹಿಡಿಯಲ್ಪಟ್ಟವು. ಈ ಚಿತ್ರಗಳ ಕಲಾವಿದರು ಭಿತ್ತಿಚಿತ್ರರಚನೆಯಲ್ಲಿ ಸಾಕಷ್ಟು ನುರಿತವರಾಗಿದ್ದಾರೆ. ಚಿಕ್ಕ ಅಂಕಣಗಳಲ್ಲಿ ಸುಂದರವಾದ ಚಿಕಣಿಚಿತ್ರಗಳನ್ನು ಹೋಲುವಂತೆ ಪೌರಾಣಿಕ ಕಥೆಗಳ ಮುಖ್ಯ ಪ್ರಸಂಗ ಗಳನ್ನು ಅತ್ಯುನ್ನತ ಮಟ್ಟದಲ್ಲಿ ಅಭಿವ್ಯಕ್ತಿಸಿದ್ದಾರೆ.ಚಿತ್ರಿತ ಆಕಾರಗಳು ಸಂಪ್ರದಾಯಬದ್ಧವಾಗಿದ್ದು ತಾಳಮಾನಕ್ಕೆ ಹೊಂದುವಂತಿವೆಯಲ್ಲದೆ, ಬಣ್ಣಗಾರಿಕೆ ಮತ್ತು ಕೃತಿ ರಚನೆಯಲ್ಲಿ ಪರಿಶುದ್ಧವಾಗಿವೆ. ಚಿತ್ರಕಲೆಯ ಹಲವು ಹಂತಗಳನ್ನು ಸಹಾ ಇಲ್ಲಿ ಗುರುತಿಸಬಹುದು. ಒಟ್ಟು ಚಿತ್ರಶೈಲಿ ಹಿರಿಯೂರು ಚಿತ್ರಗಳನ್ನೆ ಇವು ಬಹಳವಾಗಿ ಹೋಲುವುದರಿಂದ ಅಲ್ಲಿಯ ಕಲಾವಿದರೇ ಇಲ್ಲೂ ರಚಿಸಿರಬಹುದು.

ಮುಡುಕುತೊರೆ : ತಿರುಮಕೂಡ್ಲು ನರಸೀಪುರದಿಂದ ೨೫ ಕಿ.ಮೀ. ದೂರದಲ್ಲಿ ಸಣ್ಣಗುಡ್ಡವೊಂದರ ಮೇಲಿರುವ ಮಲ್ಲಿಕಾರ್ಜುನ ದೇವಾಲಯವು ಕರ್ನಾಟಕದ ಪ್ರಾಚೀನ ಯಾತ್ರಾಸ್ಥಳಗಳಲ್ಲಿ ಒಂದು. ಇಲ್ಲಿಯ ಕಲ್ಯಾಣಮಂಟಪದ ಗೋಡೆಯಲ್ಲಿ ಪುರಾಣದ ಕಥೆಗಳಿಗೆ ಸಂಬಂಧಿಸಿದ ಚಿತ್ರಗಳಿವೆ. ಸಂಯೋಜನೆ, ಬಣ್ಣಗಾರಿಕೆ, ಸಪೂರಾದ ಆಕೃತಿಗಳಿಂದ ಸಮತೋಲನತೆ ಹಾಗೂ ಸಾಂಪ್ರದಾಯಿಕ ಆಕಾರಗಳು ಲೇಪಾಕ್ಷಿಯ ಭಿತ್ತಿಚಿತ್ರ ಗಳನ್ನು ಬಹಳವಾಗಿ ಹೋಲುತ್ತವೆ. ಈ ಚಿತ್ರಗಳನ್ನು ಸಂಶೋಧಿಸುವ ಮೊದಲು ಶ್ರವಣಬೆಳಗೊಳದ ಚಿತ್ರಗಳೇ ಲೇಪಾಕ್ಷಿಯ ನಂತರದವೆಂದು ತಿಳಿಯಲಾಗಿತ್ತು. ಆದರೆ ಮುಡುಕುತೊರೆ, ಹಿರಿಯೂರು ಮತ್ತು ಸಿರಾಗಳಲ್ಲಿ ಭಿತ್ತಿ ಚಿತ್ರಗಳನ್ನು ಕಂಡುಹಿಡಿದುದರಿಂದ ವಿಜಯನಗರಾ ನಂತರದ ಸುಮಾರು ನೂರುವರ್ಷಗಳ ಹಾಗೂ ೧೭೫೦ರ ವೇಳೆಗೆ ಶ್ರವಣಬೆಳಗೊಳದಲ್ಲಿ ರಚಿತವಾದ ಚಿತ್ರಗಳ ಮಧ್ಯದ ಅಂತರವನ್ನು ತುಂಬಿದಂತಾಯಿತು. ಇಲ್ಲಿಯ ಚಿತ್ರಗಳ ಕಾಲದ ಬಗ್ಗೆ ಒಮ್ಮತವಿರುವಂತೆ ಕಂಡುಬರುವುದಿಲ್ಲ. ಆದರೆ ಬೇರೆಯದರ ಯಾವುದೇ ಪ್ರಭಾವವಿಲ್ಲದೆ ವಿಜಯನಗರದ ಚಿತ್ರಗಳ ಶೈಲಿಯನ್ನೇ ಇಲ್ಲಿಯೂ ಕಾಣಬಹುದು. ಈ ಕುರಿತು ವಿವರವಾದ ಅಧ್ಯಯನ ನಡೆದಲ್ಲಿ ಈ ಸಂಬಂಧದ ಅನುಮಾನಗಳು ಪರಿಹಾರವಾಗುವುವಲ್ಲದೆ, ನಮ್ಮ ಸಂಪ್ರದಾಯದ ಬೆಳವಣಿಗೆಯನ್ನೂ ದೃಢಪಡಿಸಿಕೊಳ್ಳಬಹುದು.

ಸಿಬಿ : ತುಮಕೂರಿನಿಂದ ೨೪ ಕಿ.ಮೀ. ದೂರದಲ್ಲಿರುವ ಸಿಬಿಯ ನರಸಿಂಹಸ್ವಾಮಿ ದೇವಾಲಯದ ಮಂಟಪಗಳಲ್ಲಿ ಇನ್ನೂ ಹಲವು ಬಗೆಯ ಚಿತ್ರಗಳನ್ನು ಕಾಣಬಹುದು. ಪ್ರಸ್ತುತ ದೇವಾಲಯವು ಕರಣಿಕ ನಲ್ಲಪ್ಪ ಹಾಗೂ ಆತನ ಸಹೋದರರಿಂದ ಆಗಾಗ್ಗೆ ಜೀರ್ಣೋದ್ಧಾರ ಆಗಿರುವಂತಹದು. ಇದನ್ನು ಟಿಪ್ಪು ಸುಲ್ತಾನನ ಆಡಳಿತ ಕಾಲದಲ್ಲಿ ಆತನ ಫೌಜುದಾರನಾಗಿದ್ದ ಹಾಗೂ ಹೈದರ್‌ನಾಮಾ ರಚಿಸಿದ ನಲ್ಲಪ್ಪನ ವಂಶಸ್ಥರ ಬಳಿ ಇರುವ ದಾಖಲೆಗಳು ಮತ್ತು ಇತರ ಶಾಸನಗಳ ಆಧಾರದಿಂದ ತಿಳಿಯಬಹುದು. ದೇವಾಲಯದಲ್ಲಿ ಇತರ ಕೆಲವು ಪ್ರಾಚೀನ ಕಲಾಕೃತಿಗಳೂ ಇದ್ದು, ಮಂಟಪಗಳಲ್ಲಿಯ ಭಿತ್ತಿಚಿತ್ರಗಳು ೧೮ನೆಯ ಶತಮಾನದ ಗಣನೀಯ ರಚನೆಗಳಾಗಿವೆ. ಚಿತ್ರಗಳು ಹಾಗೂ ಮಹಾದ್ವಾರದಲ್ಲಿರುವ ಚಿತ್ರಿತಶಾಸನಗಳು ಐತಿಹಾಸಿಕವಾಗಿ ಮುಖ್ಯವಾಗಿದ್ದು, ಇವುಗಳಲ್ಲಿ ಹೈದರ್‌ಅಲಿಯ ಕೈಕೆಳಗಿನ ನಂಬಿಕಸ್ಥ ಅಧಿಕಾರಿಯಾಗಿದ್ದ ಕಛೇರಿ ಕೃಷ್ಣಯ್ಯ, ಆತನ ಪತ್ನಿ ಅಲಮೇಲಮ್ಮ, ಅವರ ಪುತ್ರರು, ಹಿಂದೂ ಹಾಗೂ ಮುಸ್ಲಿಂ ಆಡಳಿತಗಾರರ ಮಧ್ಯೆ ಇದ್ದ ಸುಮಧುರ ಬಾಂಧವ್ಯ, ಮುಖ್ಯವಾದ ವಸಾಹತುಗಳು, ಇತ್ಯಾದಿಗಳ ಹೆಸರುಗಳನ್ನು ಗುರುತಿಸಬಹುದು. ಪ್ರವೇಶ ದ್ವಾರದ ಮೇಲ್ಭಾವಣಿಯಲ್ಲಿರುವ ಚಿತ್ರದಲ್ಲಿ ಕೆಲವು ಗುಡಿಸಲುಗಳು ಒಂದಾಗಿ ಕೂಡಿದ್ದು, ಹಲವಾರು ಪುಷ್ಕರಣಿ ಅಥವಾ ಪವಿತ್ರತೀರ್ಥಗಳಿಂದ ತುಂಬಿದೆ. ಇದು ಸಿಬಿ ಅಗ್ರಹಾರದಲ್ಲಿರುವ ದೇವಾಲಯದ ಹಿನ್ನೆಲೆ, ಪರಿಸರಗಳನ್ನು ತೋರಿಸುವ ನಕ್ಷೆಯಾಗಿ ದೇವಾಲಯ ಸಂಕೀರ್ಣಕ್ಕೆ ಮಾರ್ಗದರ್ಶಿಯಂತಿದೆ. ಈ ಭಾಗದ ಚಿತ್ರಗಳು ಕೇವಲ ಸಾಮಾಜಿಕ ದೃಶ್ಯಗಳನ್ನಷ್ಟೇ ತೋರಿಸುವಂತಿದ್ದು, ಫೌಜುದಾರ ನಲ್ಲಪ್ಪ ಹಾಗೂ ಆತನ ಸಂಬಂಧಿಕರು, ಆಸ್ಥಾನದ ಕಾರ್ಯಕಲಾಪಗಳು ಹಾಗೂ ವಿವಿಧ ವರ್ಗದ ಜನರು ವಾರಾಂಗನೆಯರೊಂದಿಗೆ ಹಲವು ಬಗೆಯ ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವುದು ಇತ್ಯಾದಿ ಚಿತ್ರಿತವಾಗಿವೆ. ಈ ಚಿತ್ರಗಳಲ್ಲಿ ಪ್ರೌಢವಾದ ಅಭಿವ್ಯಕ್ತಿಯು ಕಂಡುಬರದೆ ಆಕೃತಿಗಳು ಜಡವಾಗಿ ನಿಂತಂತೆ ಭಾಸವಾಗುತ್ತದೆ. ಹೂಬಳ್ಳಿಗಳ ವಿನ್ಯಾಸ ಮತ್ತು ಆಶಯಗಳು ಮುಸ್ಲಿಂ ಕಲಾವಿದರು ರಚಿಸಿದಂತೆ ಕಂಡುಬರುವುದರಿಂದ ಇವುಗಳನ್ನು ಟಿಪ್ಪುವನ್ನು ಒಲಿಸಲು ಬರೆದಂತೆ ತೋರುತ್ತದೆ.

ಮುಖಮಂಟಪದಲ್ಲಿರುವ ಚಿತ್ರಗಳು ಪ್ರಮುಖ ವಾಗಿ ಪೌರಾಣಿಕ ವಿಷಯಗಳಿಗೆ ಸಂಬಂಧಿಸಿದ್ದು, ಉತ್ತಮವಾಗಿ ಅಭಿವ್ಯಕ್ತಗೊಂಡಿವೆ. ಇವುಗಳನ್ನು ಈ ಬಗೆಯ ಕಥಾಪ್ರಸಂಗ ತಿಳಿದ ಹಾಗೂ ಚಿತ್ರಕಲೆಯಲ್ಲಿ ಪರಿಣಿತರಾದ ಕಲಾವಿದರು ರಚಿಸಿದ್ದಾರೆ. ಮೇಲ್ಛಾವಣಿಯ ಮಧ್ಯದ ಅಂಕಣದಲ್ಲಿ ವಿಶಾಲವಾಗಿ ವಿಷ್ಣುವಿನ ವಿಶ್ವರೂಪದರ್ಶನವನ್ನು ಸುಂದರವಾಗಿ ಚಿತ್ರಿಸಲಾಗಿದೆ. ಉಳಿದ ಅಂಕಣಗಳಲ್ಲಿ ಭಾಗವತ ಕಥಾಮಾಲಿಕೆ, ಕೃಷ್ಣ ಲೀಲ, ರಾಮಾವತಾರ, ಎಂಟು ಪತ್ನಿಯರೊಂದಿಗಿರುವ ಕೃಷ್ಣ ಮತ್ತು ರಾಮ-ರಾವಣರ ಯುದ್ಧಗಳನ್ನು ಸತ್ವ ಶಾಲಿಯಾಗಿ ರೂಪಿಸಿದೆ. ಮುಖ್ಯ ಅಂಕಣದ ಸುತ್ತಲೂ ಚಿಕ್ಕ ಚಿಕ್ಕ ಅಂಕಣಗಳಲ್ಲಿ ಚಿತ್ರಿಸುವ ಪದ್ಧತಿಯು ಮುಮ್ಮುಡಿ ಕೃಷ್ಣರಾಜ ಒಡೆಯರ ಕಾಲದ ಸುವರ್ಣ ಲೇಪನವನ್ನೊಳಗೊಂಡ ಸಾಂಪ್ರದಾಯಿಕ ಚಿತ್ರ ಹಾಗೂ ಭಾವಚಿತ್ರಗಳಿಗೆ ಮೂಲ ಆಕರವಿರಬಹುದು. ಅಷ್ಟ ಭಾರ್ಯ, ರಾಮಪಟ್ಟಾಭಿಷೇಕ, ರಾಸಲೀಲೆ, ಗೋವರ್ಧನ ಗಿರಿಧಾರಿ, ವಿಶ್ವರೂಪದರ್ಶನ, ಇತ್ಯಾದಿಗಳು ಮೈಸೂರು ಸಾಂಪ್ರದಾಯಿಕ ಕಲೆಯಲ್ಲಿ ಜನಪ್ರಿಯವಾದ ವಸ್ತುಗಳು. ರಾಕ್ಷಸರ ಚಿತ್ರಗಳು ಆಳವಾಗಿ ಅಭಿವ್ಯಕ್ತ ಗೊಂಡು, ಪಾರ್ಶ್ವಗತ ನೋಟದಿಂದ ವೃತ್ತಾಕಾರದ ಸಂಯೋಜನೆಯಿಂದ ಕೂಡಿವೆಯಲ್ಲದೆ, ಕಣ್ಣುಹುಬ್ಬಿನ ರಚನೆಯು ತೊಗಲುಗೊಂಬೆಯನ್ನು ತೀರಾ ಹೋಲುತ್ತದೆ. ನಾವು ಬಹಳಷ್ಟು ಎಡೆಗಳಲ್ಲಿ ನೋಡುವ ಭಿತ್ತಿ ಚಿತ್ರಗಳು ರಾಜಧಾನಿ ಹಾಗೂ ಅರಮನೆಯಿಂದ ನೇರವಾಗಿ ಗುತ್ತಿಗೆ ಪಡೆದಿದ್ದ ಅದರ ಕಲಾವಿದರು ತೊಗಲು ಗೊಂಬೆಯ ರಚನೆಯಲ್ಲಿ ಪರಿಣಿತರಿದ್ದಂತೆ (ತೊಗಲು ಗೊಂಬೆಯು ಕಲಾವಿದರು) ಚಿತ್ರಕಲೆಯ ಅಭಿವ್ಯಕ್ತಿಯು ಲ್ಲಿಯೂ ಪರಿಣಿತರಾಗಿದ್ದರು. ತೀವ್ರವಾದ ಬಲ ಪ್ರಯೋಗ, ಪರಾಕ್ರಮ, ಚಲನಶೀಲತೆಯ ಚಿತ್ರಣ ಎಲ್ಲೆಲ್ಲಿ ಕಂಡುಬರುವುದೋ ಅಲ್ಲೆಲ್ಲಾ ಕಲಾವಿದರು ತೊಗಲುಗೊಂಬೆಯಿಂದ ಪ್ರಭಾವಿತರಾಗಿದ್ದಾರೆ. ಉಡುಪು, ಆಭರಣ, ವಸ್ತ್ರಗಳ ನಮೂನೆ, ಹೂಬಳ್ಳಿಗಳ ಅಂಚು ಪಟ್ಟಿಗಳು ಅತಿ ಹೆಚ್ಚಿನ ವೈವಿಧ್ಯಗಳಿಂದ ಕೂಡಿದ್ದು ಮನೋಹರವಾಗಿದೆ. ಇಲ್ಲಿಯ ಚಿತ್ರಗಳು ವಿಜಯ ನಗರದ ಅಂತಿಮ ಹಂತದ ಕಾಲದವೆಂದು ಅಭಿಪ್ರಾಯ ಪಡಲಾಗಿದೆ.

ತುಮಕೂರಿನ ನಲ್ಲಪ್ಪನ ಉದ್ಯಾನವನದ ವಸಂತ ಮಹಲಿನಲ್ಲಿರುವ ಚಿತ್ರಗಳು ಸಿಬಿಯ ಚಿತ್ರಗಳಿಗಿಂತ ಸ್ವಲ್ಪ ಮುಂಚಿನದಾಗಿದ್ದು, ಚಿತ್ರಕಲೆಯ ಬಗ್ಗೆ ಅತ್ಯಂತ ಮೌಲಿಕ ಮಾಹಿತಿಯನ್ನು ನೀಡುತ್ತವೆ. ಈ ಮಹಲ್ ನಲ್ಲಪ್ಪನ ತಂದೆ ಕಚೇರಿ ಕೃಷ್ಣಪ್ಪನ ಕಾಲದ ವಾಸದಮನೆ ಆಗಿತ್ತು. ಇಲ್ಲಿಯ ಕೋಣೆಗಳಲ್ಲಿ ನವಗ್ರಹ, ಕಾಮಧೇನು, ಕಲ್ಪ ವೃಕ್ಷ, ಕಾಮಸೂತ್ರಗಳಿಗೆ ಸಂಬಂಧಿಸಿದ ಚಿತ್ರಗಳನ್ನು ನಲ್ಲಪ್ಪನ ಕಾಲದಲ್ಲಿ ಬರೆಯಿಸಲಾಗಿದೆ. ಇದು ಶಯನಗೃಹವಾಗಿ ಬಳಕೆಯಾಗುತ್ತಿದ್ದು, ಇಲ್ಲಿಯ ಅಸಭ್ಯ ಚಿತ್ರಗಳನ್ನು ಮಕ್ಕಳು ನೋಡಬಾರದೆಂಬ ಕಾರಣ ದಿಂದಾಗಿ ಸುಣ್ಣ ಹೊಡೆದಿರುವುದರಿಂದ ಚಿತ್ರಗಳು ಬಹಳಷ್ಟು ನಾಶವಾಗಿವೆ.

ಭಿತ್ತಿಚಿತ್ರಗಳ ಇನ್ನೊಂದು ಕುತೂಹಲಕಾರಿಯಾದ ಬೆಳವಣಿಗೆಯನ್ನು ಟಿಪ್ಪುವಿನ ಬೇಸಿಗೆಯ ಅರಮನೆ ಯಾದ ದರಿಯಾದೌಲತ್ ಅಂಕಣಗಳಲ್ಲಿ ಕಾಣಬಹುದು. ಟಿಪ್ಪುವಿನ ಆಡಳಿತದಲ್ಲಿ ಮತಸಹಿಷ್ಣುತೆ ಇತ್ತೆಂಬುದು ಚಿತ್ರಕಲೆಯಲ್ಲೂ ಕಾಣಿಸುವಂತೆ ಹಿಂದೂ, ಇಸ್ಲಾಂ ಹಾಗೂ ಕ್ರಿಶ್ಚಿಯನ್ ಮತಗಳು ಒಂದುಗೂಡಿವೆ. ಬಹು ದೂರಪ್ರದೇಶದ ಕಲಾವಿದರನ್ನು ಟಿಪ್ಪು ಇಲ್ಲಿಗೆ ಕರೆತಂದಿದ್ದನಲ್ಲದೆ, ಬಣ್ಣಗಳನ್ನೂ ವಿದೇಶದಿಂದಲೇ ತರಿಸಿದ್ದನು. ಪರ್ಶಿಯನ್ ನೀಲಿ, ಬಿಳಿ, ಇಂಗಳೀಕ ಬಣ್ಣಗಳು ಇಲ್ಲಿ ಪ್ರಧಾನವಾಗಿ ಕಂಡುಬರುತ್ತವೆ. ಒಂದು ಬದಿಯಲ್ಲಿ ಟಿಪ್ಪು ಹಾಗೂ ಬ್ರಿಟೀಷರ ಅಧಿಕ ಸಂಖ್ಯೆಯ ಸೈನಿಕರು ವೀರಾವೇಶದಿಂದ ಹೋರಾಡುತ್ತಿರುವ ದೃಶ್ಯವನ್ನು ವಿಶಾಲವಾಗಿ ಚಿತ್ರಿಸಿದ್ದು (೫೦ × ೧೮ ಅಡಿ), ಇದು ಭಾರತದಲ್ಲಿಯೇ ಅತ್ಯಂತ ದೊಡ್ಡದಾದ ಹಾಗೂ ವಿಶ್ವ ದಲ್ಲಿಯೇ ಮೂರನೆಯ ಸ್ಥಾನ ಪಡೆದ ಚಿತ್ರಸಂಯೋಜನೆ ಯಾಗಿದೆ. ಮೊದಲೆರಡನೆಯ ಸ್ಥಾನ ಪಡೆದ ಚಿತ್ರಗಳೆಂದರೆ ಬಣ್ಣಗಳು ಮೇಳೈಸಿರುವ ಟಿನ್ಟೆರಿಟ್ಟೊ (Tinteretto) ವಿನ ಭಿತ್ತಿಚಿತ್ರ ಮತ್ತು ರೋಮ್‌ನ ಕ್ರೈಸ್ತ ಇಗರ್ಜಿಯಲ್ಲಿರುವ ಮೈಕೇಲ್ ಎಂಜಲೋವಿನ ಕೊನೆಯ ಭೋಜನ ಇವೆರಡೂ ನಿಜವಾಗಿಯೂ ಹಸಿಮೈಯ ಭಿತ್ತಿಚಿತ್ರಗಳಾಗಿದ್ದು, ಒಣಮೈಯ (ಫ್ರೆಸ್ಕೋ ಸೆಕ್ಕೋ)ಗಳಲ್ಲ. ದರಿಯಾದೌಲತ್‌ನ ಉಳಿದರ್ಧ ಭಾಗದಲ್ಲಿ ಗಣ್ಯವ್ಯಕ್ತಿ ಗಳು, ರಾಷ್ಟ್ರಪತಿಗಳು ಹಾಗೂ ಟಿಪ್ಪುವಿನ ಕಾಲದ ಇತರ

ನವಾಬರ ಭಾವಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿ ಭಾವಚಿತ್ರರಚನಾ ತಂತ್ರ ಹಾಗೂ ಸಂಯೋಜನೆಯಲ್ಲಿ ಸ್ಥಳಾವಕಾಶದ ಬಳಕೆಯು ಕಡೆಗೆ ಹೆಚ್ಚು ಗಮನ ನೀಡಲಾಗಿದೆ. ಬಿಡಿ ಅಂಕಣಗಳನ್ನು ಗಮನಿಸಿದರೆ ಅದು ಮೊಘಲ್ ಚಿಕಣಿಚಿತ್ರಗಳನ್ನು ನೆನಪಿಸುತ್ತದೆ. ವಿವಿಧ ಭಂಗಿಗಳಲ್ಲಿರುವ ಕುದುರೆಗಳು, ಅವುಗಳ ಬಣ್ಣಗಾರಿಕೆ ಹಾಗೂ ಸವಾರರು ಬಿಡಿಯಾದ ಭಾವಚಿತ್ರಗಳಂತೆ ಕಂಡುಬರುತ್ತವೆ. ವಿದೇಶಿಯರ ಕಂಪನಿ ಸರ್ಕಾರದ ಕಾಲದಲ್ಲಿ ಭಾರತೀಯ ಚಿತ್ರಗಳ ಮೇಲೆ ಆದ ಪ್ರಭಾವ ಮತ್ತು ಒತ್ತಡಗಳು ಹಾಗೂ ಒತ್ತಡಗಳ ಪ್ರಮಾಣಗಳು ಇಲ್ಲಿಯ ಚಿತ್ರಗಳಲ್ಲಿ ಕಂಡುಬರುವುದನ್ನು ಭಾರತೀಯ ಇತರ ಸಮಕಾಲೀನ ರಾಜ್ಯಗಳ ಹಾಗೂ ಮಿಲ್‌ಡ್ರೆಡ್ ಆರ್ಚರ್ ಅವರ 'ಇಂಡಿಯಾ ಆಫೀಸಿನ' ಸಂಗ್ರಹದಲ್ಲಿಯ ದಾಖಲೆಗಳ ವಿಶೇಷ ಆಧಾರಗಳಿಂದ ಹೇಳಬಹುದು. ಆದರೆ ೨೦ನೇ ಶಕದ ಆದಿಯಲ್ಲಿ ಈ ಚಿತ್ರಗಳ ಪುನರ್ ರಚನೆಯಾಗಿದ್ದು ಮೂಲ ಬಣ್ಣಗಾರಿಕೆ ಹಾಗೂ ತಾಜಾತನ ಕಳೆದುಹೋದಂತಾಗಿದೆ. ಈಗ ಅದು ಬಣ್ಣ ತೊಡೆದ ಕಲೆಯಂತೆ ಕಾಣುತ್ತದೆ.

ಮುಮ್ಮಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದುದು ಕಲಾಕ್ಷೇತ್ರದಲ್ಲಿ ಬಿರುಸಿನ ಚಟುವಟಿಕೆಗೆ ಅವಕಾಶವಾಯಿತು. ಅರಮನೆ, ಮೈಸೂರಿನ ಸ್ಥಳೀಯ ದೇವಾಲಯಗಳು, ಚಾಮರಾಜನಗರ ಹಾಗೂ ಇತರ ಪ್ರದೇಶಗಳು ಕಲೆಯಲ್ಲಿ ನಿಜವಾದ ಆಸಕ್ತಿಯುಳ್ಳ ರಾಜಾಶ್ರಯದಿಂದ ಕಲಾರ್ಹತೆಯನ್ನು ಪಡೆದವು.

ಹಸ್ತಪ್ರತಿಗಳಲ್ಲಿಯ ಸಾಂದರ್ಭಿಕಚಿತ್ರಗಳು, ಭಾವಚಿತ್ರಗಳು, ಚಿತ್ರಸಂಪುಟಗಳು (ಆಲ್ಬಂ) ಹಾಗೂ ಪೂಜಾರ್ಹ ಪಟಗಳು ಹಲವು ಶೈಲಿಗಳಲ್ಲಿ ರಚಿತವಾಗಿ ಚಿನ್ನದ ರೇಕಿನಿಂದ ಅಲಂಕೃತವಾಗಿ ಸುಂದರ ಶ್ರೀಮಂತ ಕೊಡುಗೆಯೆಂಬಂತೆ ಕಂಡುಬರುತ್ತವೆ. ಈ ಭವ್ಯ ಪರಂಪರೆಯು ಮಹೋನ್ನತ ಕಲಾವಿದರಾದ ಸುಬ್ರಹ್ಮಣ್ಯರಾಜು ಹಾಗೂ ಚಿತ್ರಕಲಾ ಕಾಲೇಜಿನ ಕಲಾವಿದರಿಂದ ಮುಂದುವರೆದು ಹೊಸರೂಪ ತಳೆದು ಇಂದಿಗೂ ವಿಜೃಂಭಿಸುತ್ತಿದೆ. ಭಾರತೀಯ ಕಲೆಯ ಮೇಲೆ ಹೊರಗಿನವರ ಪ್ರಭಾವ ಬೀರಿರುವ ಹಾಗೂ ಸೌಂದರ್ಯಶಾಸ್ತ್ರದ ನಿಜವಾದ ತಿಳುವಳಿಕೆ ಪಡೆಯುವ ದೃಷ್ಟಿಯಿಂದ ಅಧ್ಯಯನವನ್ನು ಕೈಗೊಳ್ಳಲಾಗುತ್ತಿದೆ.

ತಂತ್ರಗಳು ಮತ್ತು ವಿಧಾನಗಳು : ತಳಹದಿಯ ಗೋಡೆಯನ್ನು ಮೂರು ಅಥವಾ ನಾಲ್ಕು ಪದರಗಳಲ್ಲಿ ತಯಾರಿಸಿಕೊಂಡು ಮೊದಲು ಹರಳು ನಂತರ ಮೆದು ಸುಣ್ಣವನ್ನು ಅಥವಾ ಶಂಖಚೂರ್ಣವನ್ನು ಹಚ್ಚಿ ಅಂತಿಮವಾಗಿ ಒಣಗಿದ ಭಿತ್ತಿಯ ಮೇಲೆ ಚಿತ್ರ ಬರೆಯುವ ತಂತ್ರವನ್ನು ಬಳಸಿಕೊಂಡಿದ್ದಾರೆ. ಒಣಗಾರೆಯ ಮೇಲೆ ಕೆಂಗಾವಿಯಿಂದ ಕರಡು ರೇಖೆಯನ್ನು ಹಾಕಿಕೊಳ್ಳುವುದರಿಂದ ಆರಂಭಿಸಿದ್ದಾರೆ. ಕೈಗೆ ಸುಲಭವಾಗಿ ಸಿಗುವ ಬಣ್ಣಗಳನ್ನು ಬಳಸಿ ರಚಿಸಿರುವುದರಿಂದ ಮೂರು ಅಥವಾ ನಾಲ್ಕು ಬಣ್ಣಗಳಷ್ಟೆ ಕಂಡುಬರುತ್ತವೆ. ಬಣ್ಣಗಳು ಖನಿಜಮೂಲದವುಗಳಾಗಿದ್ದು ಗೋಂದಿನಿಂದ ಅಥವಾ ಇತರ ಸಸ್ಯಜನ್ಯ ಅಂಟಿನಿಂದ ತಯಾರಿಸಿಕೊಂಡವು. ಸಿಬಿಯಲ್ಲಿ ಇರುವಂತೆ ಸಾಮಾನ್ಯವಾಗಿ ಹಿನ್ನೆಲೆಯಲ್ಲಿ ಕೆಂಪುಬಣ್ಣವನ್ನು ಬಳಸಿ ಉಳಿದಂತೆ ಮುಖ್ಯ ಆಕೃತಿಗಳು ಮೆದುವಾದ ಛಾಯಾಂಕಣವನ್ನು ಹೊಂದಿರುತ್ತದೆ. ಶ್ರವಣಬೆಳಗೊಳದಲ್ಲಿ ನೀಲಿಯನ್ನು ಹಿನ್ನೆಲೆಗೆ ಬಳಸಿದೆ. ದರಿಯಾದೌಲತ್ ಹಾಗೂ ಮೈಸೂರು ಅರಮನೆಯ ಚಿತ್ರಗಳ ವಿನಾ ಉಳಿದವು ಧಾರ್ಮಿಕ ಸಂಬಂಧಿಯಾಗಿದ್ದು, ಶಿಲ್ಪಸೂತ್ರದ ನಿಯಮಗಳನ್ನು ನಿಷ್ಠೆಯಿಂದ ಪಾಲಿಸಿಕೊಂಡು ಚಿತ್ರದಲ್ಲಿ ದುಂಡುತನವನ್ನು ತಂದಿವೆ. ಎಲ್ಲಿಯೂ ದೇಹರಚನಾಶಾಸ್ತ್ರವನ್ನು ಪಾಲಿಸಿದಂತೆ ಕಂಡುಬರುವುದಿಲ್ಲವಾದರೂ ಒಳಛಾವಣಿಯಲ್ಲಿ ರಚಿಸುವಾಗ ಆಯಾಸವಾಗಿದ್ದು, ಸ್ಪಷ್ಟವಾಗಿ ರಚಿಸಲಾಗದೆ ಆತುರವಾಗಿ ಆಕೃತಿಗಳನ್ನು ಒತ್ತೊತ್ತಾಗಿ ತುಂಬಿಸಿದಂತೆ ಸಂಯೋಜಿಸಿ ಮುಗಿಸಿದೆ. ಶ್ರವಣಬೆಳಗೊಳದ ನಂತರ ಕಾಲದ ಚಿತ್ರದಲ್ಲಿ ತೆರಪಿನ ಪ್ರದೇಶಕ್ಕೆ ಇದ್ದ ಮಹತ್ವ ಕಡಮೆಯಾಗಿದೆ. ಆಕೃತಿಗಳಿಗಿಂತ ಅಲಂಕಾರಣಗಳಿಗೆ ತೀರ ಹೆಚ್ಚಿನ ಮಹತ್ವ ನೀಡಿದೆ. ಹದಿನೆಂಟನೆಯ ಶತಮಾನದ ಕಲಾವಿದರು ಅತ್ಯುನ್ನತ ಮಟ್ಟದ ವಿಚಾರವಂತರಿದ್ದು, ದೃಶ್ಯ ರಚನೆಯಲ್ಲಿ ವಿಶೇಷ ಅರ್ಹತೆಯನ್ನು ಪಡೆದಿದ್ದರು. ಇದರಿಂದಾಗಿ ಒಟ್ಟು ಕಾಣಿಕೆಯಲ್ಲಿ ಅನೇಕ ಭಿನ್ನತೆಯನ್ನು ತಂದಿತು. ನಿಶ್ಚಲ ಸ್ಥಿತಿ ಇರುವಾಗ ಬಲವಾದ ಪ್ರತಿಪಾದನೆಯ ಅವಶ್ಯಕತೆ ಬರುತ್ತದೆ. ಅಂತೆಯೇ ಕರ್ನಾಟಕದ ಚಿತ್ರಗಳು ಆಗಾಗ ಆಕರ್ಷಕವಾಗಿ, ಕೋಮಲವಾಗಿ ರಚಿತ

ವಾಗುತ್ತಿದ್ದು, ಪ್ರಕೃತಿ ಹಾಗೂ ದೇಶಿಯತೆಯ ನವಿರಾದ ಭಾವನೆಗಳನ್ನು ಪ್ರದರ್ಶಿಸಿವೆ.

* * *

ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೮೦ ರಿಂದೀಚೆಗೆ ಭಿತ್ತಿಚಿತ್ರ ಪರಂಪರೆಯನ್ನು ರಕ್ಷಿಸಲು ತೀವ್ರ ಆಸಕ್ತಿ ತೋರಿಸುತ್ತಿದೆ. ಮೊದಲ ಹಂತವಾಗಿ ಬಳ್ಳಾರಿ, ತುಮಕೂರು, ಹಾಸನ, ಬೆಳಗಾವಿ ಮತ್ತು ಮೈಸೂರು ಜಿಲ್ಲೆಗಳಲ್ಲಿ ಪರಿವೀಕ್ಷಣೆ ಮಾಡಲಾಗಿದೆ. ಇದರಿಂದಾಗಿ ಕಲಾವಿದರ ಸಮಿತಿಯು ಭಿತ್ತಿಚಿತ್ರಗಳು ಜೀವಂತ ಸಂಪ್ರದಾಯವಾಗಿದ್ದುದನ್ನು ಬಹಳಷ್ಟು ಸ್ಥಳಗಳಲ್ಲಿ ಗುರುತಿಸುವಂತಾಯಿತು. ಶ್ರವಣಬೆಳಗೊಳ, ಹಿರಿಯೂರು, ಮೈಸೂರು ಮತ್ತು ಸಿರಾಗಳಲ್ಲಿಯ ಭಿತ್ತಿ ಚಿತ್ರಗಳನ್ನು ನಕಲು ಮಾಡಲು ಕೆಲಸ ಆರಂಭವಾಗಿದ್ದು, ಒಟ್ಟು ೬೦೦ ಚದುರ ಅಡಿಗಳಷ್ಟು ಭಿತ್ತಿಚಿತ್ರಗಳನ್ನು ನಕಲು ಮಾಡಲಾಗಿದೆ. ಉಳಿದವನ್ನು ವರ್ಣಪಾರ ದರ್ಶಿಕೆಯಲ್ಲಿ ಚಿತ್ರೀಕರಿಸಿದೆ. ಶ್ರೀಯುತರುಗಳಾದ ಶಿವರಾಮ ಕಾರಂತ, ಬಿ. ವಿ. ಕೆ. ಶಾಸ್ತ್ರಿ, ಎಸ್. ಎನ್. ಚಂದ್ರಶೇಖರ್ ಮೊದಲಾದ ವಿದ್ವಾಂಸರು ಈ ಬಗ್ಗೆ ಲೇಖನಗಳನ್ನು ಬರೆದು ನಷ್ಟವಾಗುತ್ತಿದ್ದ ಸಾಂಪ್ರದಾಯಿಕ ಚಿತ್ರಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಿದ್ದಾರೆ. ಪ್ರಖ್ಯಾತ ಕಲಾವಿದರಗಳಾದ ಶ್ರೀಯುತ ಸುಬ್ರಹ್ಮಣ್ಯರಾಜು, ಎಂ. ಎಸ್. ನಂಜುಂಡರಾವ್, ಎಂ. ಎಸ್. ಚಂದ್ರಶೇಖರ್, ಎಸ್. ಎನ್. ಸ್ವಾಮಿ, ಪತ್ತಾರ್, ಚಿಟ್ಟಿ, ಕಾಳೆ, ಶ್ರೀಮತಿ ಕಮಲಾಕ್ಷಿ ಮುಂತಾದವರು ನಕಲು ಮಾಡುವ ಕಾರ್ಯವನ್ನು ನಿರ್ವಹಿಸುತ್ತಿರುವರು. ಹಿರಿಯ ಕಲಾವಿದರುಗಳಾದ ಟಿ.ಪಿ. ಅಕ್ಕಿ, ಎಂ. ಎಸ್. ನಂಜುಂಡರಾವ್, ಆರ್. ಎಂ. ಹಡಪದ್ ಮೊದಲಾದವರು ಕಿರಿಯರಿಗೆ ಮಾರ್ಗದರ್ಶನ ಮಾಡುತ್ತಿರುವರು.

ಹದಿನೆಂಟನೆಯ ಶತಮಾನದ ಭಿತ್ತಿಚಿತ್ರಗಳು ಆ ಕಾಲದ ಚಾರಿತ್ರಕ, ಸೌಂದರ್ಯ ಹಾಗೂ ಧಾರ್ಮಿಕತೆಯ ಮಟ್ಟವನ್ನು ತಿಳಿಯಲು ತಳಹದಿಯಾಗಿವೆ. ಜಾಗರೂಕ ಹಾಗೂ ವಿವರವಾದ ಅಧ್ಯಯನ ಈ ದಿಶೆಯಲ್ಲಿ ನಡೆದು ವೈಭವೋಪೇತವಾದ ನಮ್ಮ ಸಾಂಪ್ರದಾಯಿಕ ಚಿತ್ರಕಲೆಯನ್ನು ಗುರುತಿಸಬೇಕಿದೆ. ಇದರಿಂದಾಗಿ ಕಲೆ ಹಾಗೂ ಅದರ ಸ್ವರೂಪವನ್ನು ಆಳವಾಗಿ ಅರಿಯಲು ಹಾಗೂ ಅವಿಚ್ಛಿನ್ನವಾದ ಮತ್ತು ದೈವಿಕವಾದ ಸಂಬಂಧವನ್ನು ತಿಳಿಯಲು ಸಾಧ್ಯ. ಇದು ಚಿತ್ರಕಲಾ ಕ್ಷೇತ್ರದಲ್ಲಿ ಮಹತ್ತರವಾದ ಸಾಧನೆಯ ಹಾದಿಯನ್ನು ಪುನಃ ಸಂಶೋಧಿಸಲು ಮಾರ್ಗದರ್ಶಕವಾಗಬಹುದು.

(ಕನ್ನಡಾನುವಾದ/'ವಿಕಾಸ')

ಎಂ. ಎಲ್. ಸುಶೀಲ

# ತುಮಕೂರು ಜಿಲ್ಲೆಯ ಪ್ರಾಚೀನ ಜೈನಕೇಂದ್ರಗಳು

ಜೈನಧರ್ಮವು ಭಾರತದಲ್ಲೇ ಹುಟ್ಟಿ ಬೆಳವಣಿಗೆ ಹೊಂದಿ ಕೆಲವು ಶತಕಗಳವರೆಗೆ ಉನ್ನತಸ್ಥಿತಿಯಲ್ಲಿದ್ದು ನಂತರ ಕ್ರಮೇಣ ಕ್ಷೀಣಿಸುತ್ತಾ ಬಂದ ಬಹಳ ಪುರಾತನ ಧರ್ಮಗಳಲ್ಲಿ ಒಂದು. ದಕ್ಷಿಣಭಾರತದ ಜೈನಧರ್ಮದ ಚರಿತ್ರೆ ಎಂದರೆ ಕರ್ನಾಟಕದ ಜೈನಧರ್ಮದ ಚರಿತ್ರೆಯೇ ಎಂಬುದು ಹಲವಾರು ವಿದ್ವಾಂಸರ ಅಭಿಪ್ರಾಯ. ಕರ್ನಾಟಕದಲ್ಲಿ ಜೈನಧರ್ಮವು ಕನ್ನಡಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಅಪೂರ್ವ. ಈ ಧರ್ಮವು ದಟ್ಟವಾಗಿ ಹರಡಿ ತನ್ನ ಕೀರ್ತಿಯನ್ನು ಹಬ್ಬಿದ ಕೆಲವು ಪ್ರಮುಖ ಸ್ಥಳಗಳೆಂದರೆ ಲಕ್ಷ್ಮೇಶ್ವರ(ಪುಲಿಗೆರೆ), ಶ್ರವಣಬೆಳಗೊಳ, ಕೊಪ್ಪಳ, ಹುಂಚ ಇತ್ಯಾದಿ.

ಕರ್ನಾಟಕದಲ್ಲಿ ಆಳವಾಗಿ ನೆಲೆಯೂರಿದ್ದ ಜೈನ ಧರ್ಮದಲ್ಲಿ ತುಮಕೂರು ಜಿಲ್ಲೆಯ ಸ್ಥಾನವನ್ನು ಪರಿಶೀಲಿಸಿದರೆ, ಇಲ್ಲಿ ಜೈನಧರ್ಮವು ವ್ಯಾಪಕವಾಗಿರಲಿಲ್ಲವೆಂದು ಹೇಳಬಹುದು.

ಜೈನಧರ್ಮವು ಕರ್ನಾಟಕದಲ್ಲಿ ಗಂಗರ ಕಾಲಕ್ಕೇ ಪ್ರಚಾರಕ್ಕೆ ಬಂದರೂ ಗಂಗರ ಕಾಲದ ಯಾವುದೇ ಜೈನ ಧರ್ಮದ ಕುರುಹು ತುಮಕೂರು ಜಿಲ್ಲೆಯಲ್ಲಿ ನಮಗೆ ಕಂಡುಬರುವುದಿಲ್ಲ. ತುಮಕೂರು ಜಿಲ್ಲೆಯಲ್ಲಿ ನಮಗೆ ದೊರಕುವ ಜೈನ ಉಲ್ಲೇಖವಿರುವ ಮೊಟ್ಟಮೊದಲ ಶಾಸನವು ರಾಷ್ಟ್ರಕೂಟರ ಕಾಲದ್ದು. ಗುಬ್ಬಿ ತಾಲ್ಲೂಕಿನ ಕಡಬದ ತಾಮ್ರಶಾಸನದಿಂದ[1] ರಾಷ್ಟ್ರಕೂಟ ಅರಸ ವಲ್ಲಭನ ಆಳ್ವಿಕೆಯ ಕಾಲದಲ್ಲಿ, ಅರ್ಕಕೀರ್ತಿ ಎಂಬ ಜೈನ ಮುನಿಯು ವಿಮಳಾದಿತ್ಯನಿಗೆ ಬಂದ ಶನಿಕಾಟವನ್ನು ಹೋಗಲಾಡಿಸಿದ ಕಾರಣಕ್ಕಾಗಿ ಮಾನ್ಯಪುರದ ಜಿನೇಂದ್ರ ಭವನಕ್ಕೆ ಜಾಲಮಂಗಲ ಎಂಬ ಗ್ರಾಮವನ್ನು ದಾನ ಮಾಡಿದ ಸಂಗತಿ ತಿಳಿದುಬರುತ್ತದೆ.

ಈಗ ಆಂಧ್ರಕ್ಕೆ ಸೇರಿಹೋಗಿರುವ ಹೇಮಾವತಿಯ ದೊಡ್ಡಪ್ಪನ ದೇವಸ್ಥಾನದ ಬಳಿ ಸಿಕ್ಕಿರುವ ಶಿಲಾಶಾಸನವೊಂದು,[2] ಬಿಜಅಮ್ಮಾದೇವಿ, ಪರಮ ಮಹಾದೇವಿ, ಅಕ್ಕಬ್ಬೆ ಮತ್ತು ದೊಮ್ಮಬ್ಬೆ ಅವರುಗಳು ಬಸದಿಗಾಗಿ ದಾನವನ್ನು ನೀಡಿದರೆಂಬುದನ್ನು ತಿಳಿಸುತ್ತದೆ. ಕ್ರಿ.ಶ. ೯೦೦ರ ಹೇಮಾವತೀ ಶಾಸನದ ನಂತರ ನಮಗೆ ದೊರಕುವ ಪ್ರಾಚೀನ ಶಾಸನವೆಂದರೆ, ಕ್ರಿ.ಶ. ೧೧೫೧ರ ಹೊಯ್ಸಳರ ಕಾಲದ ಶಾಸನ.[3] ತುಮಕೂರು ತಾಲ್ಲೂಕಿನ ಕೈದಾಳದ ಪ್ರಸನ್ನಗಂಗಾಧರೇಶ್ವರ ದೇವಸ್ಥಾನದೊಳಗೆ ಎರಡು ಕಲ್ಲುಗಳಲ್ಲಿ ದೊರೆತಿರುವ ಈ ಶಿಲಾಶಾಸನವು ಒಂದನೇ ನರಸಿಂಹನ ಕಾಲಕ್ಕೆ ಸೇರುತ್ತದೆ.

"ಜಯನ್ತಿಯಸ್ಯಾವದತೋಪಿ ಭಾರತೀವಿಭೂತಯಸ್ತೀರ್ಥ್ಥ ಕೃತೋಪಿ ನೈಹ್ರಿತೇ, ಶಿವಾಯಧಾತ್ರೇ ಸುಗ

1. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೨, ಗುಬ್ಬಿ ೬೧, ಕ್ರಿ.ಶ. ೮೧೨
2. ಅದೇ, ಸಿರಾ ೨೪, ಕ್ರಿ.ಶ. ೯೦೦
3. ಅದೇ, ತುಮಕೂರು ೯

ತಾಯು ವಿಷ್ಣುವೇ,ಜಿನಾಯು ತಸ್ಮೈ ಸಕಳಾತ್ಮನೇ ನಮಃ" ಎಂದು ಶಾಸನದ ಪ್ರಾರಂಭದಲ್ಲಿಯೇ ಶಾಸನಕವಿಯು ನಾಲ್ಕು ಧರ್ಮಗಳ ದೇವತೆಗಳನ್ನೂ ಸ್ತುತಿಸಿದ್ದಾನೆ. ಇದರಿಂದ ಈ ಶಾಸನದಲ್ಲಿ ಸರ್ವಧರ್ಮ ಸಮನ್ವಯ ಮನೋಧರ್ಮವನ್ನು ಕಾಣಬಹುದು. ಹಾಗೆಯೇ, ಕೈದಾಳದ ವರ್ಣನೆಯನ್ನೂ ಶಾಸನಕವಿಯು ಬಹಳ ಕಾವ್ಯಮಯವಾಗಿ ಮಾಡಿದ್ದಾನೆ. ಇಲ್ಲಿ ಒಂದನೆಯ ನರಸಿಂಹನ ದಂಡನಾಯಕ ಮರುಗೆರೆನಾಡಿನ ಗೂಳಿ ಬಾಚಿಯು ಜೈನಮಂದಿರಗಳನ್ನೂ ಶಿವ ಮತ್ತು ವಿಷ್ಣು ದೇವಾಲಯಗಳನ್ನೂ ಉದ್ಧರಿಸಿದ ವಿಷಯ ತಿಳಿದುಬರುತ್ತದೆ. "ಉದ್ಧರಿಸಿ ಜೈನಭವನವನುದ್ಧರಿಸಿದನಲ್ತೆ ಶಿವಾಲಯಂಗಳಂ ಮುದದಿಂದನ್ತುದ್ಧರಿಸಿ ವಿಷ್ಣುಗೇಹಮನುದ್ಧರಿಸಿದನಲ್ತೆ ಬಾಚಿ ಜಗದುನ್ನತಿಯಂ"ಎಂದು ಬಾಚಿಯ ಗುಣವನ್ನು ಕೊಂಡಾಡಲಾಗಿದೆ. "ಭರತದೊಳಾದುದೀಗ ಸುರಶೈಳವಿಡಂಬ ಮನೋರಾಗದಿಂ ಧರೆ ಪೊಗಳ್ವಂತು ಸಂದದಳವಂಶ ಶಿಖಾಮಣಿ ಬಾಚಿದೇವಂ ತಾಂ ವರಜಿನ ಮಂದಿರಗಳನೆ ಮಾಡಿಸಿ ಲೋಕದೊಳ್ದು ಕೀರ್ತಿಗಾ ಭರತನಾಗುತನೋ ಶಿಖಿಯೋ ಖೇಚರನೋ ಬಲಿ ಚಾರುದತ್ತನೋ" ಎಂದಿದ್ದಾನೆ. ಅಲ್ಲದೆ, ಗೂಳಿಬಾಚಿ ದೇವನು ತನ್ನ ತಂದೆ ಗಂಗಯ್ಯನಿಗೆ ಪರೋಕ್ಷವಿನಯವಾಗಿ ಶ್ರೀ ಗಂಗೇಶ್ವರ ಮತ್ತು ಶ್ರೀ ಕೇಶವದೇವಾಲಯಗಳನ್ನೂ ತನ್ನ ಮುತ್ತಜ್ಜನಾದ ಚಲುವಜಿವಂಗೆ ಪರೋಕ್ಷವಿನಯವಾಗಿ ಚಲವರಿವೇಶ್ವರ ದೇವಾಲಯವನ್ನೂ ತನ್ನ ಮಗಳಾದ ಕುಮಾರಿ ಚಂನಲೆನಾಯಕಿತಿಗೆ ಶ್ರೀ ರಾಮೇಶ್ವರ ದೇವಾಲಯವನ್ನೂ ಕಟ್ಟಿಸಿ, ಇವುಗಳ ಜೀರ್ಣೋದ್ಧಾರಕ್ಕಾಗಿ ಕೆರೆಯ ಬಳಿ ಗದ್ದೆಯನ್ನು ದಾನಮಾಡುತ್ತಾನೆ. ಇಷ್ಟಲ್ಲದೆ, ತನ್ನ ಸತಿ ಭೀಮವ್ವೆನಾಯಿಕಿತಿಗೆ ಪರೋಕ್ಷ ವಿನಯವಾಗಿ ಭೀಮ ಜಿನಾಲಯವನ್ನೂ ಭೀಮಸಮುದ್ರ ಎಂಬ ಕೆರೆಯನ್ನು ಕಟ್ಟಿಸುತ್ತಾನೆ. ಈ ಭೀಮಜಿನಾಲಯದ ರಂಗಭೋಗಕ್ಕೆ, ಅಷ್ಟವಿಧಾರ್ಚನೆಗೆ, ರಿಷಿಯಾಹಾರದಾನಕ್ಕೆ ಮತ್ತು ಮಂದಿರದ ಜೀರ್ಣೋದ್ಧಾರಕ್ಕಾಗಿ ಹೊಲಗದ್ದೆಗಳನ್ನೂ ದಾನಮಾಡುತ್ತಾನೆ. ಈತನ ಬಳಿ ದಾನವನ್ನು ತೆಗೆದುಕೊಂಡ ಮಾರಿಮಯ್ಯನು ಮುದುಗೆರೆಯ ಬಳಿ ಮಾರಸಮುದ್ರವೆಂಬ ಕೆರೆಯನ್ನು ಕಟ್ಟಿಸಿ ಅದನ್ನು ಭೀಮಜಿನಾಲಯದ ಜೀರ್ಣೋದ್ಧಾರಕ್ಕಾಗಿ ಬಿಡುತ್ತಾನೆ.

ಮೇಲಿನ ಅಂಶಗಳಿಂದ ತಿಳಿದುಬರುವ ಸಂಗತಿಯೆಂದರೆ, ಇಲ್ಲಿ ಈ ಹಿಂದೆಯೂ ಅನೇಕ ಜೈನಾಲಯಗಳಿದ್ದುವು ಮತ್ತು ಅದಕ್ಕಾಗಿ ಅನೇಕರು ದಾನ-ದತ್ತಿಗಳನ್ನು ಬಿಡುತ್ತಿದ್ದರು. ಇಲ್ಲಿ ಬಳಸಲ್ಪಟ್ಟಿರುವ 'ಪರೋಕ್ಷ ವಿನಯ' ಎಂಬುದು, 'ವ್ಯಕ್ತಿಯ ಸಾವಿನ ನಂತರ ಆತನಿಗೆ ಸದ್ಗತಿ ದೊರೆಯಲಿ'[4] ಎಂಬ ಅರ್ಥದಲ್ಲಿಯಾಗಲೀ 'ಸತ್ತ ವ್ಯಕ್ತಿಗಳ ಮರಣೋತ್ತರ ಜೀವನದ ಶ್ರೇಯಸ್ಸಿಗಾಗಿ ಮಾಡುವ ಕರ್ತವ್ಯಗಳು'[5] ಎಂಬ ಅರ್ಥದಲ್ಲಿಯಾಗಲೀ ಬಳಕೆಯಾಗಿರದೆ, ವ್ಯಕ್ತಿಯ ಸಾವಿನ ನಂತರ ಆತನ ಹೆಸರು ಅಳಿದು ಹೋಗದಂತೆ ಶಾಶ್ವತವಾಗಿರಲಿ ಎಂಬ ಉದ್ದೇಶದಿಂದ ಸ್ಮಾರಕವಾಗಿ ಹಾಗೂ ಸತ್ತ ವ್ಯಕ್ತಿಗೆ ಗೌರವಾರ್ಥವಾಗಿ ಮಾಡಿದ ಕೆಲಸವಾಗಿದೆ.

ಹೊಯ್ಸಳ ಒಂದನೆಯ ನರಸಿಂಹನ ಕಾಲದ ಪಂಡಿತರಹಳ್ಳಿಯ ಮಂದರಗಿರಿ ಬೆಟ್ಟದ ಬಸ್ತಿಯ ಪ್ರಾಕಾರದಲ್ಲಿ ದೊರೆತಿರುವ ಶಾಸನವು[6] ಜಿನಮಂದಿರವೊಂದರ ನಿರ್ಮಾಣವನ್ನು ಕುರಿತು ಹೇಳುತ್ತದೆ. ಈ ಶಾಸನದಲ್ಲಿ ಹೇಳಿರುವಂತೆ, ಹೆಗ್ಗಡತಿ ಮಾಚಿಯಕ್ಕಳು ಮಯ್ದುವೊಳಲಲ್ಲಿ ಸದ್ಧರ್ಮಾಪೇಕ್ಷೆಯಿಂದ ಒಂದು ಜಿನ ಮಂದಿರವನ್ನೂ ಪದ್ಮಾವತಿ ಎಂಬ ಕೆರೆಯನ್ನೂ ಕಟ್ಟಿಸುತ್ತಾಳೆ. ಈಕೆಯ ಪತಿ ಈಶ್ವರದೇವನು ಹಳೆಯ ಜಿನ ಮಂದಿರಗಳನ್ನು ಜೀರ್ಣೋದ್ಧಾರ ಮಾಡಿಸಿ, ತನ್ನ ಸತಿ ಮಾಚಿಯಕ್ಕಳು ಕಟ್ಟಿಸಿದ ಬಸದಿಗೆ ದೇವರ 'ಚರುಗಿ'ಗಾಗಿ, ರಿಷಿಯಾಹಾರದಾನಕ್ಕಾಗಿ ಭೂಮಿಯನ್ನು ದಾನ ಮಾಡುತ್ತಾನೆ. ಈ ಶಾಸನದಲ್ಲಿ ಬರುವ 'ಮಯ್ದುವೊಳಲ್' ಈಗಿನ 'ಮೈದಾಳ'. ಈಗ ಪಂಡಿತರಹಳ್ಳಿಗೆ ಸೇರಿರುವ ಮಂದರಗಿರಿ ಬೆಟ್ಟದ ಮೇಲಿನ ಬಸದಿಯೇ ಮಾಚಿಯಕ್ಕ ಕಟ್ಟಿಸಿದಳೆನ್ನಲಾದ ಮೈದಾಳದ ಬಸದಿ ; ಅವಳು ಕಟ್ಟಿಸಿ

---

4. ಡಾ॥ ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪು. ೨೧೦ : ಅಡಿಟಿಪ್ಪಣಿ ೭೭
5. ಡಾ॥ ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು, ಪು. ೭೫
6. ಎ.ಕ., ಸಂಪುಟ ೧೨, ತುಮಕೂರು ೩೮

ರುವ ಪದ್ಮಾವತಿಕೆರೆಯೇ ಇಂದಿನ ಪ್ರಸಿದ್ಧವಾದ ಮೈದಾಳದ ಕೆರೆ.

ಮಾಳಿವೆಯ ಮಲಯ ಎಂಬುವನು ನಿಟ್ಟೂರಿನಲ್ಲಿ ಒಂದು ಜಿನಪ್ರತಿಮೆಯನ್ನು ಕೆತ್ತಿದ ಸಂಗತಿಯು ಅಲ್ಲಿಯ ಶಾಂತೀಶ್ವರ ಬಸದಿಯ ಮೇಲುಗಡೆ ಇರುವ ಶಾಸನದಿಂದ ತಿಳಿದುಬರುತ್ತದೆ.[7] ಅದೇ ಬಸದಿಯಲ್ಲಿಯ ಪದ್ಮಾವತಿ ಅಮ್ಮನಿಗೆ ಪದುಮಣಸೆಟಿ ಎಂಬುವನು ಪೀಠವನ್ನು ದಾನಮಾಡಿದ ವಿಷಯವೂ ಉಲ್ಲೇಖಿತವಾಗಿದೆ.[8] ಬಸದಿಯ ವಾಯುವ್ಯ ಪ್ರಾಕಾರದಲ್ಲಿ ಜೈನಧರ್ಮೀಯನೊಬ್ಬನ ನಿಸಿದಿಕಲ್ಲು ಇದೆ.[9] ಇದರ ಕಾಲ ಕ್ರಿ.ಶ. ೧೧೫೦.

ಕ್ರಿಸ್ತಶಕ ೧೧೬೦ರ ಕಲ್ಯಾಣ ಚಾಲುಕ್ಯರ ಕಾಲದ ಒಂದು ಶಾಸನವು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹೆಗ್ಗೆರೆಯಲ್ಲಿ ದೊರೆತಿದೆ.[10] ಇಲ್ಲಿಯ ಗೋಪಿದೇವನು ತನ್ನ ಸತಿ ಮಹಾದೇವಿ ನಾಯಕಿತಿಗೆ ಪರೋಕ್ಷವಿನಯವಾಗಿ ಕಟ್ಟಿಸಿದ ಚೆನ್ನಪಾರ್ಶ್ವದೇವರ ಬಸದಿಯನ್ನು ಶ್ರೀ ಮಾಣಿಕನಂದಿಸಿದ್ಧಾಂತ ದೇವರಿಗೆ ದಾನಮಾಡುತ್ತಾನೆ. ಇದರ ಅಷ್ಟವಿಧಾರ್ಚನೆಗೆ ಮತ್ತು ರಿಷಿಯಾಹಾರದಾನಕ್ಕೆ ಹೊಯ್ಸಳ ಬಿಟ್ಟಿದೇವನು ಸ್ವಲ್ಪಭೂಮಿಯನ್ನೂ ಹೂದೋಟವನ್ನೂ ಬಿಟ್ಟುಕೊಡುತ್ತಾನೆ. ಅಲ್ಲದೆ, ಹೆಗ್ಗಡೆ ಜಕ್ಕಣನು ತನ್ನ ಅತ್ತೆ ಮಹಾದೇವಿ ನಾಯಕಿತಿಗೆ ಪರೋಕ್ಷವಿನಯವಾಗಿ ತನ್ನ ಮಲ್ಲಿಗೆರೆಯ ಗದ್ದೆಯನ್ನು ಬಸದಿಗಾಗಿ ದಾನಮಾಡಿದ ಉಲ್ಲೇಖವಿದೆ. ಈ ಶಾಸನದ ಕವಿಯ ಹೆಸರು ದೇವಭದ್ರಮುನಿಪೋತ್ತಂಸ.

ನಿಲುಭಂಗಿಯಲ್ಲಿಯ ಶಾಂತಿನಾಥ ವಿಗ್ರಹವಿರುವ ಮತ್ತೊಂದು ಜೈನಬಸದಿಯು ಇದೇ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕಂದಿಕೆರೆಯಲ್ಲಿದೆ. ಇದರ ಎತ್ತರ ಸುಮಾರು ೪ ಅಡಿ.[11]

ಕುಣಿಗಲ್ಲು ತಾಲ್ಲೂಕಿನ ಕೊತ್ತಗೆರೆಯಲ್ಲಿ ಜಿನಚಿತ್ರಗಳಿಂದ ಕೂಡಿದ ೧೨ನೇ ಶತಮಾನದ ಒಂದು ಪಾಳುಬಸದಿಯಿದೆ.[12]

ಮತ್ತೊಂದು ಮುಖ್ಯವಾದ ಶಾಸನವೆಂದರೆ ಕ್ರಿ.ಶ. ೧೧೭೮(?)ರ ತಿಪಟೂರು ತಾಲ್ಲೂಕಿನ ಕರಡಾಳುವಿನಲ್ಲಿ ಪಾಳುಬಸದಿಯೊಳಗೆ ಬಿದ್ದಿರುವ ಕಂಭ.[13] ಉತ್ತಮ ಕಾವ್ಯಗುಣದಿಂದ ಕೂಡಿದ ಈ ಶಾಸನವು ಧರ್ಮವನ್ನು ಕುರಿತು ಹೇಳುತ್ತದೆ. ಹರ್ಯಲೆ ಎಂಬ ಮಹಾಸತಿಯು ತನ್ನವಸಾನಕಾಲದಲ್ಲಿ ಮಗ ಬೂವಯನಾಯಕನನ್ನು ಕರೆದು ಹೇಳಿದ ಮಾತುಗಳಿವು : "ಬೂವಯನಾಯಕ ಕೆಮ್ಮಗೆನ್ನಂ ನೀಂ ಕನಸಿನೊಳಪ್ಪತಂ ನೆನೆಯದಿರ್ನ್ನೆನೆ ಶಾಶ್ವತಮಪ್ಪ ಧರ್ಮಮಂ। ಧರ್ಮ್ಮಮನಾಗಳುಂ ಮುದದೆ ಮಾಳ್ಪುದು....ಮನಮೊಸೆದು ಮಾಡಿಸೊಂದ ಜಿನಗೃಹಮಂ....ಬೂವಿದೇವಾ ಧರ್ಮಧುರಿಣಾ ಎಂದೆಂದಳೆನ್ನ ದೇವರ ನೆಂಟಂಗಂ ನೀನೆ ಪೂಜಿಸಿ ಚಿಕ್ಕಯಸಂಕುಂದಿ ಕಲಿಗಂಧದನ್ತಾನಂದದೆ ರಕ್ಷಿಪುದಪೇಕ್ಷೆಗೆಯ್ವೊಡೆ ದೋಷಂ". ಹೀಗೆ ಧರ್ಮದ ಬಗೆಗಿನ ಅವಳ ಕಾಳಜಿ ಅಪಾರವಾದುದು. ಬೂವಯನಾಯಕನಿಗೆ ಧರ್ಮಾಚರಣೆಯನ್ನು ಬೋಧಿಸಿದ ಹರ್ಯಲೆಯು ಸಮಾಧಿವಿಧಿಯಿಂದ ಮಡಿದಳು. ಅದೇ ಕಂಡಾಳುವಿನ ಕಂಭದ ಹಿಂಭಾಗದ ಶಾಸನದಿಂದ (ಸಂಖ್ಯೆ ೯೩) "ಶ್ರೀ ಚಾಂದ್ರಾಯಣದೇವರ .... ಹರಿಹರದೇವಿ .... ಸಮಾಧಿಯಂ ವಿಶನಿಬುಧಸುತೆಯೆಯ್ದಿದಳಿಂನ್ದ್ರಲೋಕಮಂ...." ಇತ್ಯಾದಿ ವಿವರಗಳು ದೊರಕುತ್ತವೆ. ಆದುದರಿಂದ ಈ ಎರಡು ಶಾಸನಗಳ ಆಧಾರದಿಂದ ಹರ್ಯಲೆ ಮತ್ತು ಹರಿಹರದೇವಿಯರಿಬ್ಬರೂ ಒಬ್ಬರೇ ಎಂಬುದಾಗಿ ತಿಳಿಯುತ್ತದೆ.

ಈ ಶಾಸನಗಳಲ್ಲಿ ನಾವು ಗಮನಿಸಬಹುದಾದ ಬಹು ಮುಖ್ಯ ಸಂಗತಿ ಎಂದರೆ ತುಮಕೂರು ಜಿಲ್ಲೆಯ

7. ಅದೇ, ಸಂಪುಟ ೧೬ (ಸಪ್ಲಿಮೆಂಟರಿ), ಗುಬ್ಬಿ ೬೬
8. ಅದೇ, ಗುಬ್ಬಿ ೬೭
9. ಅದೇ, ಗುಬ್ಬಿ ೬೮
10. ಅದೇ, ಸಂಪುಟ ೧೩, ಚಿಕ್ಕನಾಯಕನಹಳ್ಳಿ ೨೧
11. ಸಿ. ಹಯವದನರಾವ್ : ಮೈಸೂರು ಗೆಜೆಟಿಯರ್, ಸಂಪುಟ ೫, ಬೆಂಗಳೂರು
12. ಅದೇ, ಪು. ೪೯೯
13. ಎ. ಕ., ಸಂಪುಟ ೧೨, ತಿಪಟೂರು ೯೩ ಮತ್ತು ೯೪

ಜೈನಧರ್ಮದ ಇತಿಹಾಸಕ್ಕೆ ಕೊಟ್ಟಿರುವ ಕೊಡುಗೆಗಳಲ್ಲಿ ಸ್ತ್ರೀಯರದೇ ಸಿಂಹಪಾಲು. ಕಾರಣ, ಇಲ್ಲಿನ ಬಹುತೇಕ ಜೈನಬಸದಿಗಳು ಸ್ತ್ರೀಯರಿಗಾಗಿ ಮತ್ತು ಅವರಿಂದಲೇ ನಿರ್ಮಾಣಗೊಂಡವುಗಳು. ಕರಡಾಳುವಿನ ಬಸದಿ ನಿರ್ಮಾಣಕ್ಕೆ ಹರ್ಯಲೆ ಕಾರಣಳಾದರೆ, ಹೇಮಾವತಿಯಲ್ಲಿ ಬಸದಿಗೆ ನಾಲ್ಕುಜನ ಮಹಿಳೆಯರೇ ದಾನಮಾಡಿದ್ದಾರೆ. ಕೈದಾಳದ ಶಾಸನದಲ್ಲಿ ಗೂಳಿಬಾಚಿಯು ತನ್ನ ಹೆಂಡತಿಗಾಗಿ ಭೀಮಜಿನಾಲಯ ಮತ್ತು ಭೀಮಸಮುದ್ರಕೆರೆಗಳನ್ನು ಕಟ್ಟಿಸಿ ಅದಕ್ಕಾಗಿ ದಾನನೀಡಿದ ಉಲ್ಲೇಖವಿದೆ. ಪಂಡಿತರಹಳ್ಳಿಯ ಬಸ್ತಿಯನ್ನು ಮಾಚಿಯಕ್ಕಳು ಕಟ್ಟಿಸಿದರೆ, ಅವಳ ಗಂಡ ಈಶ್ವರದೇವನು 'ದೇವರ ಚರುಗಿ'ಗಾಗಿ ದಾನ ಮಾಡಿದ್ದಾನೆ. ಹೆಗ್ಗೆರೆಯ ಜೈನಬಸದಿಯನ್ನು ಗೋವಿದೇವ ತನ್ನ ಸತಿ ಮಹಾದೇವಿನಾಯಕಿತಿಗೆ ಕಟ್ಟಿಸಿ ಕೊಟ್ಟರೆ, ಹೆಗ್ಗಡೆ ಜಕ್ಕಣನು ಈ ಬಸದಿಗೆ ತನ್ನ ಅತ್ತೆಗೋಸ್ಕರ ದಾನ ನೀಡುತ್ತಾನೆ. ಒಟ್ಟಿನಲ್ಲಿ ಬಸದಿಗಳನ್ನು ಬಹುತೇಕ ಅಧಿಕಾರಿವರ್ಗದವರೇ ಕಟ್ಟಿಸುತ್ತಿದ್ದರು ಮತ್ತು ಈ ಬಸದಿಗಳಿಗೆ ಬೇರೆಯವರಿಂದ ದಾನ–ದತ್ತಿಗಳೂ ದೊರಕುತ್ತಿದ್ದವು. ಇದರಿಂದ ಜೈನಧರ್ಮವು ಅಂದು ಸಾಮಾನ್ಯ ಜನತೆಯನ್ನು ತಲುಪಿರಲಿಲ್ಲವೆಂಬುದು ಈ ಶಾಸನಗಳಿಂದ ವ್ಯಕ್ತಪಡುತ್ತದೆ.

ಪ್ರಾರಂಭದಿಂದಲೂ ರಾಜಾಶ್ರಯ ಪಡೆದು ಲಕ್ಷ್ಮೇಶ್ವರ, ಕೊಪ್ಪಳ, ಶ್ರವಣಬೆಳಗೊಳ ಮುಂತಾದೆಡೆಗಳಲ್ಲಿ ಆಳವಾಗಿ ನೆಲೆಯೂರಿದ್ದ ಜೈನಧರ್ಮವು ರಾಜ್ಯದ ಎಲ್ಲೆಡೆಯೂ ಸಮರ್ಪಕವಾಗಿ ಹಬ್ಬಲಿಲ್ಲವೆಂಬುದು ತುಮಕೂರು ಜಿಲ್ಲೆಯ ಜೈನಶಾಸನಗಳ ಅಧ್ಯಯನದಿಂದ ತಿಳಿದುಬರುವ ಸಂಗತಿ. ಅಲ್ಲದೆ, ಈ ಜಿಲ್ಲೆಯಲ್ಲಿ ಎಲ್ಲೋ ಕೆಲವೆಡೆ ಮಾತ್ರ ಜೈನಬಸದಿಗಳು ಕಂಡುಬಂದಿವೆ. ಆದುದರಿಂದ ಜೈನರು ಬಹುಶಃ ತಮ್ಮ ಧರ್ಮದ ವಿಸ್ತಾರವಾದ ಪ್ರಚಾರಕ್ಕೆ ಎಂದೂ ಪ್ರಯತ್ನಪಟ್ಟಿರಲಿಲ್ಲವೆಂದೂ ವ್ಯಾಪಾರಕ್ಕಾಗಿ ಬಂದ ಆ ಧರ್ಮಕ್ಕೆ ಸೇರಿದ ಕೆಲವರು ಅಲ್ಲಲ್ಲೇ ನಿರ್ಮಿಸಿದ ಬಸದಿಗಳು ಇತಿಹಾಸಕ್ಕೆ ಸಾಕ್ಷಿಗಳಾಗಿವೆಯೆಂದೂ ಹೇಳಬಹುದು. ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯಲ್ಲಿಯೂ ಜೈನಧರ್ಮವು ವ್ಯಾಪಕವಾಗಿರಲಿಲ್ಲವೆಂಬುದನ್ನು ಪುನರುಚ್ಚರಿಸಬಹುದು.

ಎಂ. ಪಿ. ಮಹದೇವಯ್ಯ

# ದಂಡನಾಯಕರ ಸ್ಥಾನಮಾನ

ಕರ್ನಾಟಕದ ರಾಜ್ಯಾಡಳಿತದಲ್ಲಿ ದಂಡನಾಯಕ ಎಂಬ ಅಧಿಕಾರಿಯ ಪಾತ್ರವು ಗಮನಾರ್ಹವಾದುದು. ಬಹುಶಃ ಈ ಅಧಿಕಾರಿಯಷ್ಟು ವ್ಯಾಪಕ ಅಧಿಕಾರವನ್ನುಳ್ಳವರು ಕರ್ನಾಟಕ ರಾಜ್ಯಾಡಳಿತದಲ್ಲಿ ಕಾಣಬರುವುದಿಲ್ಲವೆನ್ನಬಹುದು. ಸಂಖ್ಯೆಯ ದೃಷ್ಟಿಯಿಂದಲೂ ಇದು ನಿಜವೆನ್ನಿಸುತ್ತದೆ. ಪ್ರಾಚೀನ ಕರ್ನಾಟಕ ರಾಜ್ಯಾಡಳಿತದ ಅಧಿಕಾರಿಗಳಲ್ಲಿ ಅರ್ಧದಷ್ಟು ಜನರಾದರೂ ದಂಡನಾಯಕರ ಗುಂಪಿಗೆ ಸೇರಿದವರು. ಈ ಬಗೆಯ ಹೆಚ್ಚಿನ ಪಾತ್ರ ವಹಿಸಿದ್ದ ಈ ಅಧಿಕಾರಿಗಳ ಸ್ಥಾನಮಾನ, ಅಧಿಕಾರ ಮುಂತಾದವುಗಳ ಬಗೆಗೆ ವಿಪುಲ ಮತ್ತು ಖಚಿತವಾದ ಮಾಹಿತಿ ದೊರಕಿಲ್ಲದೇ ಇರುವುದು ಆಶ್ಚರ್ಯದ ಸಂಗತಿ.

ದಂಡನಾಯಕನು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿದ್ದ ಅಧಿಕಾರಿಯಲ್ಲವೆಂಬುದನ್ನು ಮೊದಲು ಗಮನಿಸಬೇಕು. ಸಾಮಾನ್ಯವಾದ ಅರ್ಥದಲ್ಲಿ 'ದಂಡವನ್ನು ಹಿಡಿದಿರುವ ನಾಯಕ' ಎಂದು ಹೇಳಬಹುದಾದರೂ ಈ 'ದಂಡ' ಎನ್ನುವ ಪದವು ಸಾಂಕೇತಿಕವಾಗಿ 'ಆಡಳಿತ' ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ. ರಾಜನನ್ನು 'ದಂಡಧರ' ಎನ್ನುವುದರಿಂದ, ದಂಡನಾಯಕನು ದಂಡವನ್ನು ಪ್ರವರ್ತಿಸುವುದರಲ್ಲಿ ಸಹಾಯ ಮಾಡುವ ಅಧಿಕಾರಿ; ಅಂದರೆ ಈ ಕಾರ್ಯವನ್ನು ನಿರ್ವಹಿಸುವ ಅಧಿಕಾರಿ ಎನ್ನುವ ಅರ್ಥವೂ ಬರುತ್ತದೆ. ಮಹಾದಂಡನಾಯಕ, ಮಹಾಪ್ರಚಂಡ ದಂಡನಾಯಕ ಎನ್ನುವ ಅಧಿಕಾರಿಗಳನ್ನೂ ಶಾಸನಗಳು ಹೆಸರಿಸುತ್ತವೆ. ಆದರೆ ಇವುಗಳ ಖಚಿತವಾದ ಅರ್ಥವೇನು ಎನ್ನುವುದು ಮಾತ್ರ ತಿಳಿದುಬಂದಿಲ್ಲ ಹಾಗೂ ಇವರು ದಂಡನಾಯಕನಿಗಿಂತ ಮೇಲಿನ ಅಧಿಕಾರಿಗಳೇ ಎನ್ನುವುದೂ ಖಚಿತವಿಲ್ಲ. ಸಾಮಾನ್ಯವಾಗಿ ಇದೇ ಅರ್ಥದಲ್ಲಿ ಬಳಕೆಯಾಗಿರುವ ಪದಗಳೆಂದರೆ ದಂಡನಾಥ ಮತ್ತು ದಂಡಾಧಿನಾಥ. ಕನ್ನಡ ಶಾಸನಗಳಲ್ಲಿ ದಂಡನಾಯಕ ಮತ್ತು ದಣ್ಣಾಯಕ ಎನ್ನುವ ರೂಪಗಳನ್ನು ಕಾಣುತ್ತೇವೆ.

ಗುಪ್ತರ ಕಾಲದಲ್ಲಿಯೂ ದಂಡನಾಯಕ ಎನ್ನುವ ಪದದ ಬಳಕೆಯಾಗಿದೆ. ಇದನ್ನು ವಿಶ್ಲೇಷಿಸುವಾಗ ಜೆ. ಎಫ್. ಫ್ಲೀಟರು ಅವನು ಸೇನೆಯ ವರಿಷ್ಠ ಅಧಿಕಾರಿ ಎಂದು ಅಭಿಪ್ರಾಯಪಟ್ಟಿದ್ದಾರೆ.[1] ಆದರೆ ಕೆ. ಪಿ. ಜಯಸ್ವಾಲ್ ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಅವರ ಪ್ರಕಾರ, ದಂಡನಾಯಕನು ಸೇನಾ ಅಧಿಕಾರಿಯಲ್ಲ; ಸೇನೆಗೂ ಅವನಿಗೂ ಯಾವ ಸಂಬಂಧವೂ ಇಲ್ಲ ; ಇದರಲ್ಲಿ ದಂಡ ಎನ್ನುವುದು ಸೇನೆಯನ್ನು ಸೂಚಿಸುವುದಿಲ್ಲ ; ಅದು ಆಡಳಿತ ಸೂಚಕವಾದ ಪದ ; ಆದುದರಿಂದ ದಂಡನಾಯಕನು ನಾಗರಿಕ(ಸಿವಿಲ್) ಆಡಳಿತದ ವರಿಷ್ಠ ಅಧಿಕಾರಿ; ಒಂದು ಅರ್ಥದಲ್ಲಿ ಅದು ಬಿರುದು ಇದ್ದಂತೆ; ಆಡಳಿತದ ವರಿಷ್ಠ ಅಧಿಕಾರಿಗಳನ್ನು ದಂಡನಾಯಕ ಎನ್ನುವ ಬಿರುದಿನಿಂದ ಸೂಚಿಸುತ್ತಿದ್ದರು.[2]

1. ಗುಪ್ತರ ಶಾಸನಗಳು, ಪು. ೧೬
2. ಹಿಂದೂ ಪಾಲಿಟಿ, ಪು. ೩೭೦

ಕರ್ನಾಟಕದಲ್ಲಿ ಇವರ ಸ್ಥಾನವನ್ನು ಗಮನಿಸುವಾಗ, ಒಂದು ವಿಷಯುವು ನಮ್ಮ ಗಮನವನ್ನು ಸೆಳೆಯುತ್ತದೆ. ಕದಂಬ ಮತ್ತು ಗಂಗರ ಕಾಲದ ಶಾಸನಗಳಲ್ಲಿ ದಂಡನಾಯಕರು ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ. ಅವರ ಪ್ರಾಮುಖ್ಯತೆ ಹೆಚ್ಚಾಗುವುದು ಕಲ್ಯಾಣದ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರಗಳ ಕಾಲದಲ್ಲಿ. ಈ ಕಾಲದಲ್ಲಿ ದಂಡನಾಯಕರು ಬಹಳಷ್ಟು ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವುದು ಮಾತ್ರವಲ್ಲದೆ, ಆಡಳಿತದ ಎಲ್ಲ ಪ್ರಕಾರಗಳಲ್ಲಿಯೂ ಕಾಣಸಿಗುತ್ತಾರೆ. ಕಂದಾಯ, ನ್ಯಾಯ, ಸಾಮಾನ್ಯ ಆಡಳಿತ, ಜಿಲ್ಲಾ ಆಡಳಿತ, ತಾಲ್ಲೂಕು ಆಡಳಿತ–ಹೀಗೆ ವಿವಿಧ ಸ್ತರದ, ವಿವಿಧ ಹಂತದ ಆಡಳಿತ ವ್ಯವಸ್ಥೆಯಲ್ಲಿ ಕಾಣಿಸಿಕೊಳ್ಳುತ್ತಾರೆ.

ತಲಕಾಡಿನ ಗಂಗರ ಕಾಲದಲ್ಲಿ ಹತ್ತಾರು ಜನ ದಂಡನಾಯಕರು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಸಿಯುಗಲ್ಲ, ಮಣಲೇರ. ಶೂದ್ರಕಯ್ಯ, ಗೋಗಿಮಯ್ಯ, ಚಾಮುಂಡರಾಯ ಮುಂತಾದ ದಂಡನಾಯಕರುಗಳು ಗಂಗರ ಕಾಲದಲ್ಲಿ ಪ್ರಮುಖರಾಗಿದ್ದವರು. ಇವರು ಗಂಗರು ಮಾಡಿದ ಮುಖ್ಯ ಯುದ್ಧಗಳಲ್ಲಿ ಭಾಗವಹಿಸಿದವರಾದುದರಿಂದ, ಇವರನ್ನು ಸೇನಾಪತಿಗಳೊಡನೆ ಸಮನಾದವರೆಂದು ಭಾವಿಸಲಾಗಿದೆ. ಏಕೆಂದರೆ ಈ ಕಾಲದ ಸಿವಿಲ್ ಅಧಿಕಾರಿಗಳಿಗೂ ಮಿಲಿಟರಿ ಅಧಿಕಾರಿಗಳಿಗೂ ವ್ಯತ್ಯಾಸವನ್ನು ಕಲ್ಪಿಸುವುದು ಕಷ್ಟ. ಈ ದಂಡನಾಯಕರು ಯುದ್ಧಗಳಲ್ಲಿ ಸೇನಾಧಿಪತ್ಯವನ್ನು ವಹಿಸುವುದರ ಜೊತೆಗೆ ಸಾಮಂತ ರಾಜರ ಮೇಲೂ ಅಧಿಕಾರವನ್ನು ಹೊಂದಿದ್ದರು. ಇಲ್ಲವಾದರೆ ಬಹುತೇಕ ಸಂದರ್ಭಗಳಲ್ಲಿ ಸಾಮಂತರಾಜರು ಹತೋಟಿಯಲ್ಲಿ ಇಲ್ಲದೇ ರಾಜ್ಯದ ಭದ್ರತೆಗೆ ಧಕ್ಕೆ ಬರುವ ಸಂಭವವಿರುತ್ತಿದ್ದಿತು. ಈ ಕೆಲವು ದಂಡನಾಯಕರು ವರಿಷ್ಠ ಅಧಿಕಾರಿಗಳಾಗಿದ್ದರೆನ್ನುವುದು ನಿರ್ವಿವಾದದ ಸಂಗತಿ. ಕೆಲವು ದಂಡನಾಯಕರಿಗೆ 'ಸರ್ವಾಧಿಕಾರಿ' ಎಂಬ ಬಿರುದೂ ಇದ್ದಿತು. ರಾಜನಿಗೆ ಅತ್ಯಂತ ಪ್ರಿಯನಾದ ಸಚಿವನೆಂದರೆ ದಂಡಾಧಿಕಾರಿ ಎನ್ನುವ ಅಂಶವನ್ನು ಹೇಳಲಾಗಿದೆ. 'ನಾಗತ್ತರಪಟ್ಟ' ಎಂಬ ಗೌರವಸೂಚಕ ಚಿನ್ನದ ಫಲಕವನ್ನೂ ಅವರಿಗೆ ಕೊಡಲಾಗಿದ್ದಿತು. ಒಟ್ಟಿನಲ್ಲಿ, ಗಂಗರ ಕಾಲದಲ್ಲಿ ದಂಡನಾಯಕರು ವರಿಷ್ಠ ಸೇನಾಧಿಕಾರಿಗಳಾಗಿದ್ದರು ಎನ್ನುತ್ತಾರೆ ಬಿ. ಷೇಕ್‌ಅಲಿ ಅವರು.[3]

ರಾಷ್ಟ್ರಕೂಟರ ಆಡಳಿತವನ್ನು ವಿವರಿಸುವಾಗ ಎ. ಎಸ್. ಅಳತೇಕರ್ ಅವರು, ಬಲಾಧಿಕೃತ, ದಂಡನಾಯಕ ಮತ್ತು ಮಹಾಪ್ರಚಂಡ ದಂಡನಾಯಕ ಎನ್ನುವವರು ಮಿಲಿಟರಿ ಅಧಿಕಾರಿಗಳಾಗಿದ್ದರೆಂಬುದನ್ನು ಸ್ಪಷ್ಟಪಡಿಸುತ್ತಾರೆ.[4] ಆದರೆ ಈ ಅಧಿಕಾರಿಗಳ ಕಾರ್ಯವ್ಯಾಪ್ತಿ ಏನೆಂಬುದು ತಿಳಿದಿಲ್ಲವೆಂತಲೂ ಹೇಳುತ್ತಾರೆ. ಅಂದರೆ ಅವರು 'ದಂಡ' ಎನ್ನುವ ಪದವನ್ನು 'ಸೇನೆ' ಎನ್ನುವ ಅರ್ಥದಲ್ಲಿ ಪರಿಗಣಿಸಿರುವರು. ಬಾದಾಮಿ ಚಾಲುಕ್ಯರ ಕಾಲದಲ್ಲಿಯೂ ಇದೇ ಪರಿಸ್ಥಿತಿಯೇ ಮುಂದುವರಿದಿದ್ದಂತೆ ತೋರುತ್ತದೆ. ನೊಳಂಬರ ಸೇನಾ ಆಡಳಿತ ವ್ಯವಸ್ಥೆಯನ್ನು ಗಮನಿಸುವಾಗ, ಪ್ರಚಂಡ ದಂಡನಾಯಕ ಮತ್ತು ದಂಡನಾಯಕ ಎನ್ನುವ ಪದಗಳ ಆಧಾರದ ಮೇಲೆ ಇವರು ಸೇನಾಧಿಕಾರಿಗಳೆಂದು ಎಂ. ಎಸ್. ಕೃಷ್ಣಮೂರ್ತಿ ಅವರು ಭಾವಿಸಿದ್ದಾರೆ.[5] ಆದರೆ ಅವರ ಸ್ಥಾನಮಾನವನ್ನು ಇವರು ವಿವರಿಸಿಲ್ಲ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಬಹಳಷ್ಟು ಜನ ದಂಡನಾಯಕರು ಕಾಣಿಸಿಕೊಳ್ಳುತ್ತಾರೆ. ಆದುದರಿಂದ ಇವರೆಲ್ಲರೂ ಸೇನಾಧಿಕಾರಿಗಳಾಗಿದ್ದರೆ ಎನ್ನುವ ವಾದವು ಸಮಂಜಸವಾಗಿ ಕಾಣುವುದಿಲ್ಲ. ಕೇಂದ್ರ ಆಡಳಿತದಲ್ಲಿ ಅಧಿಕಾರಿಗಳಾಗಿದ್ದ ಅನೇಕ ಮಂತ್ರಿಗಳಿಗೆ ದಂಡನಾಯಕ ಎನ್ನುವ ಬಿರುದು ಇದ್ದುದನ್ನು ನಾವು ಗಮನಿಸುತ್ತೇವೆ. ಉದಾಹರಣೆಗೆ, ಮಹಾಪ್ರಧಾನನನ್ನೂ ದಂಡನಾಯಕ ಎಂದು ಕರೆದಾಗ, ಇವನಿಗೂ ಎರಡು ಅಧಿಕಾರಗಳು ಒಟ್ಟಿಗೆ ಇದ್ದುವೇ ಎಂಬ ಸಂದೇಹ ತೋರುತ್ತದೆ. ಇವುಗಳಲ್ಲಿ ಯಾವುದು ಮುಖ್ಯವಾದ ಅಧಿಕಾರ ಎನ್ನುವುದನ್ನೂ ನಾವು ತಿಳಿಯಬೇಕಾಗುತ್ತದೆ. ಇದರಿಂದ ತಿಳಿಯುವ ಸಂಗತಿಯೆಂದರೆ, ಪ್ರಾಚೀನ ಕಾಲದಲ್ಲಿ ಸೇನಾ

3. ದಿ ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್, ಮೈಸೂರು, ೧೯೭೬, ಪು. ೧೦೮
4. ರಾಷ್ಟ್ರಕೂಟಾಸ್ ಅಂಡ್ ದೇರ್ ಟೈಮ್ಸ್, ಪೂನಾ, ೧೯೬೭, ಪು. ೨೫೩
5. ದಿ ನೊಳಂಬಾಸ್, ಮೈಸೂರು, ೧೯೮೦, ಪು. ೧೪೭

ನಾಯಕತ್ವವನ್ನು ವಹಿಸುವ ಅರ್ಹತೆಯು ಬಹು ಮುಖ್ಯವಾಗಿದ್ದಿತು. ರಾಜ್ಯದ ಅಳಿವು–ಉಳಿವು ಸೇನೆಯನ್ನೇ ಅವಲಂಬಿಸಿದ್ದುದರಿಂದ, ಸೇನಾ ಆಡಳಿತಕ್ಕೆ ಹೆಚ್ಚು ಗಮನವನ್ನು ಕೊಡುತ್ತಿದ್ದರು. ಆದುದರಿಂದ ಸೇನಾ ಆಡಳಿತದಲ್ಲಿ ಅಂದರೆ ಯುದ್ಧಗಳಲ್ಲಿ ಪಾಲ್ಗೊಂಡು ಶತ್ರುಗಳನ್ನು ಸೋಲಿಸಿ, ರಾಜ್ಯವಿಸ್ತರಣೆಯಲ್ಲಿ ಸಹಾಯ ಮಾಡಿದ ವೀರರನ್ನು, ಮಂತ್ರಿಗಳನ್ನು, ಅಧಿಕಾರಿಗಳನ್ನು ರಾಜನು ಗಮನಿಸಿ, ಅವರಿಗೆ ವಿಶೇಷವಾದ ಅಧಿಕಾರವನ್ನು ಕೊಟ್ಟು, ಕೇಂದ್ರ ಆಡಳಿತಕ್ಕೆ ತೆಗೆದುಕೊಳ್ಳುತ್ತಿದ್ದನೆಂದು ತಿಳಿಯಬಹುದು. ಇದರಿಂದ ಯುದ್ಧದಲ್ಲಿ ಭಾಗವಹಿಸುವುದು ಅತಿ ಮುಖ್ಯವಾದ ಅಂಗವಾಗಿದ್ದಿತೆಂಬುದು ನಿರ್ವಿವಾದದ ವಿಷಯ. ಈ ದೃಷ್ಟಿಯಿಂದ ನೋಡಿದಾಗ, ದಂಡನಾಯಕ ಎನ್ನುವುದು ಒಂದು ಬಿರುದು ; ಇದೊಂದು ಅಧಿಕಾರವಲ್ಲ ; ಯುದ್ಧ ಕೌಶಲವನ್ನು ಪ್ರದರ್ಶಿಸಿದ ಯಾರಾದರೂ ದಂಡನಾಯಕರಾಗಬಹುದು ; ಇಂತಹ ವ್ಯಕ್ತಿಗಳನ್ನು ರಾಜನು ಪುರಸ್ಕರಿಸಿ, ಇವರಿಗೆ ಬೇರೆ ಬೇರೆ ಹುದ್ದೆಗಳನ್ನು ಕೊಟ್ಟು ಇವರ ಪ್ರಯೋಜನವನ್ನು ಪಡೆಯುತ್ತಿದ್ದನು.[6] ಆದುದರಿಂದಲೇ ದಂಡನಾಯಕರು, ಪ್ರಧಾನಿಯಾಗಿಯೋ ಸರ್ವಾಧಿಕಾರಿಯಾಗಿಯೋ ಸಂಧಿವಿಗ್ರಹಿಯಾಗಿಯೋ ಅಥವಾ ಇನ್ನಾವ ಹುದ್ದೆಯನ್ನೋ ಅಲಂಕರಿಸಿದವರಾಗಿ ಕಾಣಬರುವುದು. ಅಂದರೆ ಯುದ್ಧಕಾಲ ಬಂದರೆ ಸರ್ವಾಧಿಕಾರಿಯೂ ಹೋರಾಡಲು ಹೋಗಬೇಕಾಗುತ್ತಿತ್ತು.

ಇದೇ ಪದ್ಧತಿಯು ಹೊಯ್ಸಳರ ಕಾಲದಲ್ಲಿ ಮುಂದುವರೆದಿದ್ದಿತೆಂಬುದು ನೂರಾರು ಶಾಸನಗಳಿಂದ ತಿಳಿದುಬರುತ್ತದೆ. ಜೆ. ಡಿ. ಎಂ. ಡೆರೆಟ್ ಅವರ ಪ್ರಕಾರ, ದಂಡನಾಯಕನು ಜಿಲ್ಲೆಯಲ್ಲಿ ಅತ್ಯಂತ ವರಿಷ್ಠ ಅಧಿಕಾರಿಯಾಗಿದ್ದನು.[7] ಹರಿಹರ ದಂಡನಾಯಕನು ಅಸಂಧಿನಾಡನ್ನು ಕ್ರಿ.ಶ. ೧೨೧೬ ರಿಂದ ೧೨೩೮ರವರೆಗೆ ನಾಡಾಧಿಕಾರಿಯಾಗಿ ಆಳುತ್ತಿದ್ದನು. ಅವನು ಇಲ್ಲಿ ನಾಡಧಿಕಾರಿಯಾಗಿದ್ದರೂ ಯುದ್ಧಗಳಲ್ಲಿ ಪಾಲ್ಗೊಂಡು ತನ್ನ ನಾಡಿನ ರಕ್ಷಣೆಗೆ ನೆರವಾಗಿದ್ದನು. ಇವನ ಸಹಾಯಕ್ಕಾಗಿ ಇವನ ಕೈಕೆಳಗೆ ಮಹಾಪ್ರಧಾನಿ, ಭಂಡಾರಿ, ಸೇನಬೋವ, ಹೆಗ್ಗಡೆ ಮುಂತಾದ ಅಧಿಕಾರಿಗಳಿದ್ದರು. ದಂಡನಾಯಕರು ಕಂದಾಯ ಆಡಳಿತದಲ್ಲಿಯೂ ವರಿಷ್ಠರಾಗಿದ್ದು ತೆರಿಗೆಗಳ ವಸೂಲಿಯನ್ನು ಮಾಡುತ್ತಿದ್ದರು. ಅನೇಕ ವೇಳೆ ದಂಡನಾಯಕನು ನ್ಯಾಯತೀರ್ಮಾನದಲ್ಲಿಯೂ ಪಾತ್ರವಹಿಸುತ್ತಿದ್ದನು. ಆದುದರಿಂದ, ದಂಡನಾಯಕನಿಗೆ ನಿರ್ದಿಷ್ಟವಾದ ಕರ್ತವ್ಯವಿರಲಿಲ್ಲ. ಅವನು ನಾಡಾಧಿಕಾರಿಯಾಗಿರುವಾಗ, ಯುದ್ಧದಿಂದ ಮೊದಲ್ಗೊಂಡು ಕಂದಾಯ, ನ್ಯಾಯತೀರ್ಮಾನ, ದೇವಾಲಯ ನಿರ್ಮಾಣ, ವಿದ್ಯಾಭ್ಯಾಸ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ಕೆಲಸ ನಿರ್ವಹಿಸುತ್ತಿದ್ದನು. ದಂಡನಾಯಕನು ತನ್ನ ಅಧಿಕಾರದ ದುರುಪಯೋಗ ಮಾಡಿಕೊಳ್ಳದೇ ಇರುವಂತೆ ಅವನ ಮೇಲೆ ಕೇಂದ್ರದ ಮಂತ್ರಿಗಳು ಗಮನವಿಡುತ್ತಿದ್ದರು. ಹೊಯ್ಸಳರ ಕಾಲದಲ್ಲಿ ಸ್ವೇಚ್ಛಾಚಾರದಿಂದ ವರ್ತಿಸಿ ಜನಗಳಿಗೆ ಅದರಲ್ಲಿಯೂ ನೇಯ್ಗೆಯವರಿಗೆ ತೊಂದರೆಯಾಗುತ್ತಿದ್ದುದನ್ನು ದಂಡನಾಯಕನು ರಾಜನ ಗಮನಕ್ಕೆ ತಂದಾಗ, ರಾಜನು ಒಂದು ಮಗ್ಗಕ್ಕೆ ಎಂಟು ಕಾಸಿನಂತೆ ತೆರಿಗೆಯನ್ನು ಕಡಿಮೆ ಮಾಡಿದನು ಎಂದೂ ತಿಳಿದು ಬಂದಿದೆ.[8] ಈ ಎಲ್ಲಾ ಅಂಶಗಳನ್ನೂ ಗಮನಿಸಿದಾಗ ದಂಡನಾಯಕ ಎನ್ನುವುದು ಒಂದು ಗೌರವ ಸೂಚಕವಾದ ಹುದ್ದೆ ; ಅದನ್ನು ರಾಜನು ತನ್ನ ಅಧಿಕಾರಿಗಳಿಗೆ ಅವರವರ ಕಾರ್ಯಕ್ಕೆ ತಕ್ಕಂತೆ ಕೊಡುತ್ತಿದ್ದನೆಂಬುದಾಗಿ ಡೆರೆಟ್ ಅವರು ಖಚಿತವಾಗಿ ಹೇಳುತ್ತಾರೆ. ಅವರೇ ಹೇಳಿರುವ ಗಮನಾರ್ಹ ಸಂಗತಿಯೆಂದರೆ, ಮುಮ್ಮಡಿ ಬಲ್ಲಾಳನ ಕಾಲದಲ್ಲಿದ್ದ ಐವತ್ತು ದಂಡನಾಯಕರಲ್ಲಿ ಕೇವಲ ಇಪ್ಪತ್ತು ಮಂದಿ ಮಾತ್ರ ಸೇನಾ ನಾಯಕತ್ವದ ಕಾರ್ಯವನ್ನು ನೋಡಿಕೊಳ್ಳುತ್ತಿದ್ದರು; ಮಿಕ್ಕ ಮೂವತ್ತು ಮಂದಿ ಸಿವಿಲ್ ಆಡಳಿತದಲ್ಲಿ ಭಾಗಿಯಾಗಿದ್ದರು.

ದೇವಗಿರಿಯ ಸೇವುಣರ ಕಾಲದಲ್ಲಿಯೂ ಸುಮಾರಾಗಿ ಇದೇ ಪದ್ಧತಿಯೇ ಮುಂದುವರೆಯಿತು. ಈ

---

6. ಬಿ. ಆರ್. ಗೋಪಾಲ್: ಕಲ್ಯಾಣಿ ಚಾಲುಕ್ಯರು, ಪು. ೩೯೨
7. ದಿ ಹೊಯ್ಸಳಾಸ್, ಮದರಾಸು, ೧೯೫೭, ಪು. ೧೮೮
8. ಅದೇ, ಪು. ೧೯೦

ಕಾಲದಲ್ಲಿಯೂ ಬಹಳಷ್ಟು ಮಂದಿ ದಂಡನಾಯಕರು ಕಾಣಬರುತ್ತಾರೆ.[9] ಇವರು ಸೇನಾಕಾರ್ಯದಲ್ಲಿಯೂ ಸಿವಿಲ್ ಆಡಳಿತದಲ್ಲಿಯೂ ಒಟ್ಟೊಟ್ಟಿಗೆ ಇದ್ದುದು ಗಮನಾರ್ಹ. ದಂಡನಾಯಕರುಗಳಾದ ಬೀಚ ಮತ್ತು ಮಾಯಿದೇವ ಅವರುಗಳು ಬನವಾಸಿ ರಾಜ್ಯದ ರಾಜ್ಯಪಾಲರಾಗಿ ಕೆಲಸ ನಿರ್ವಹಿಸುತ್ತಿದ್ದರು. ಇವರಿಬ್ಬರೂ ಯುದ್ಧಕೌಶಲವನ್ನು ಮೆರೆದು ಸೇವುಣರ ಹತ್ತಾರು ಯುದ್ಧಗಳಲ್ಲಿ ಪಾತ್ರವಹಿಸಿ ಜಯಶಾಲಿಯಾದ ವೀರರು. ಬೀಚನಂತೂ ಸಿಂಘಣನ ಬಲಗೈಯಂತಿದ್ದವನು. ಆದುದರಿಂದ ನರಸಿಂಹಮೂರ್ತಿ ಅವರು ಹೇಳುವಂತೆ, ದಂಡನಾಯಕರುಗಳು ಯುದ್ಧ ಸಮಯದಲ್ಲಿ ಸೇನಾಧಿಪತಿಗಳಾಗಿಯೂ ಮಿಕ್ಕ ಸಮಯದಲ್ಲಿ ಸಾಮಾನ್ಯ ಆಡಳಿತಗಾರರಾಗಿಯೂ ಕೆಲಸ ನಿರ್ವಹಿಸುತ್ತಿದ್ದರು. ಇವರ ಜೊತೆಗೆ ಮಹಾಪ್ರಚಂಡ ದಂಡನಾಯಕ, ರಾಯದಂಡಾಧೀಶ ಮತ್ತು ದಂಡನಾಥ ಎನ್ನುವ ಪದಗಳೂ ಸೇವುಣರ ಶಾಸನಗಳಲ್ಲಿ ಸಿಗುತ್ತವೆ. ಆದರೆ ಇವುಗಳ ಖಚಿತವಾದ ಅರ್ಥವೇನೆಂಬುದು ತಿಳಿದುಬಂದಿಲ್ಲ. ಮಲ್ಲಿದೇವ ಮತ್ತು ಆತನ ತಮ್ಮ ಸಹದೇವರು ಜೈತುಗಿಯ ಕಾಲದಲ್ಲಿ ದಂಡನಾಥರಾಗಿದ್ದರು. ಚವುಂಡಿಸೆಟ್ಟಿಯು ದೊರೆ ಕೃಷ್ಣನ ಕಾಲದಲ್ಲಿ ರಾಯದಂಡಾಧೀಶನಾಗಿದ್ದನು.[10]

ವಿಜಯನಗರ ಕಾಲದ ಪದ್ಧತಿಯನ್ನು ಕುರಿತು ಮಹಾಲಿಂಗಂ ಅವರು ಹೇಳುವಂತೆ, ಪ್ರಧಾನಿಯು ರಾಜ್ಯದ ವರಿಷ್ಠ ಅಧಿಕಾರಿಯಾಗಿದ್ದು ದಂಡನಾಯಕನೆಂಬ ಬಿರುದನ್ನು ಹೊಂದಿದ್ದನು.[11] ಸೇನಾಧಿಪತಿಗೆ ವಿಜಯನಗರ ಕಾಲದಲ್ಲಿ ದಳಾಧಿಕಾರಿ ಅಥವಾ ದಳವಾಯಿ ಎನ್ನುವ ಹೆಸರೂ ಇದ್ದಿತು. ಕೆಲವು ಕಡೆ ಅವನನ್ನು ಸರ್ವಸೈನ್ಯಾಧಿಪತಿ ಅಥವಾ ಸರ್ವಸೈನ್ಯಾಧಿಕಾರಿ ಎಂದಿರುವುದೂ ಉಂಟು. ಉದಾಹರಣೆಗೆ ನಾಗಣ್ಣ ದಂಡನಾಯಕನನ್ನು ವೀರಪ್ರತಾಪ ದೇವರಾಯ ಮಹಾರಾಜರ ಮಹಾಪ್ರಧಾನನೆಂದು ಕರೆಯಲಾಗಿದೆ.[12] ಅಂದರೆ ನಾಗಣ್ಣನು ದಂಡನಾಯಕನೂ ಮಹಾಪ್ರಧಾನಿಯೂ ಆಗಿದ್ದನು. ಚಾಮನೃಪಾಲನೆಂಬುವನು ವೀರಪ್ರತಾಪ ದೇವರಾಯನ ಸರ್ವಸೈನ್ಯಾಧಿಕಾರಿಯಾಗಿದ್ದನು. ಒಬ್ಬನೇ ರಾಜನಿಗೆ, ಒಂದೇ ಕಾಲದಲ್ಲಿ ಇಬ್ಬರು ಸೈನ್ಯಾಧಿಕಾರಿಗಳಿರುವುದು ಅಸಂಭವ. ಆದುದರಿಂದ ದಂಡನಾಯಕ ನಾಗಣ್ಣನು ಮಹಾಪ್ರಧಾನಿಯ ಕಾರ್ಯವನ್ನು ಮಾಡುತ್ತಿದ್ದರೆ, ಚಾಮನೃಪಾಲನು ಸೈನ್ಯಾಧಿಕಾರಿಯ ಕೆಲಸವನ್ನು ನಿರ್ವಹಿಸುತ್ತಿದ್ದನೆಂದು ಖಚಿತವಾಗುತ್ತದೆ. ಇದೇ ಕಾಲದಲ್ಲಿ ದಂಡನಾಯಕರು ರಾಜ್ಯಪಾಲರಾಗಿ ಕಾರ್ಯವನ್ನೂ ನಿರ್ವಹಿಸುತ್ತಿದ್ದರು. ಲಕ್ಕಣ್ಣ ದಂಡನಾಯಕನು ಇಮ್ಮಡಿ ದೇವರಾಯನ ಕಾಲದಲ್ಲಿ ದಕ್ಷಿಣ ಸಮುದ್ರಾಧಿಪತಿಯಾಗಿ ಮಧುರೆಯಲ್ಲಿ ಆಳುತ್ತಿದ್ದನು. ಇದೇ ರೀತಿಯಲ್ಲಿ ಈರಣ್ಣ ದಂಡನಾಯಕನು ದಕ್ಷಿಣ ಸಮುದ್ರಾಧಿಪತಿಯಾಗಿದ್ದನು.[13]

ಈ ವಿಷಯದಲ್ಲಿ ಅಬ್ದುಲ್ ರಜಾಕನ ಬರವಣಿಗೆಯು ಕೆಲವು ಮಾಹಿತಿಗಳನ್ನು ನೀಡುತ್ತದೆ. ಅವನ ಪ್ರಕಾರ, ದಣಾಯಕನು (ದಣ್ಣಾಯಕ–ದಂಡನಾಯಕ) ಎತ್ತರವಾದ ಪೀಠದ ಮೇಲೆ ಕುಳಿತುಕೊಳ್ಳುತ್ತಾನೆ. ಅಕ್ಕಪಕ್ಕದಲ್ಲಿ ಲಾಂಛನವನ್ನು ಹಿಡಿದಿರುವವರು ನಿಲ್ಲುತ್ತಾರೆ. ಇತರ ಅಧಿಕಾರಿಗಳು ಪಕ್ಕದಲ್ಲಿರುತ್ತಾರೆ. ದಣಾಯಕನು ಜನಗಳ ಅಹವಾಲುಗಳನ್ನು ಕೇಳಿ ನ್ಯಾಯ ತೀರ್ಮಾನವನ್ನು ಮಾಡುತ್ತಾನೆ.[14] ಇದರ ಬಗ್ಗೆ ಬರೆಯುವಾಗ ಬಿ. ಎ. ಸಾಲತೊರೆಯವರು ಇದನ್ನು ಖಂಡಿಸಿ, ಒಬ್ಬ ಸೈನ್ಯಾಧಿಕಾರಿಯು ನ್ಯಾಯ ತೀರ್ಮಾನವನ್ನು ಮಾಡುವುದು ಪ್ರಾಚೀನ ದಂಡನೀತಿಗೆ ವಿರುದ್ಧವಾದುದು ; ಇದೊಂದು ವಿಷಯದಲ್ಲಿ ವಿಜಯನಗರದ ಅರಸರು ದೊಡ್ಡ ತಪ್ಪನ್ನು ಮಾಡಿದ್ದಾರೆನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[15] ಇದನ್ನು ಗಮನಿಸಿದರೆ, ಸಾಲ

9. ಎ. ವಿ. ನರಸಿಂಹಮೂರ್ತಿ : ದೇವಗಿರಿಯ ಸೇವುಣರು, ಮೈಸೂರು, ಪು. ೧೪೮
10. ಅದೇ, ಪು. ೧೪೯
11. ಅಡ್ಮಿನಿಸ್ಟ್ರೇಷನ್ ಅಂಡ್ ಸೋಶಿಯಲ್ ಲೈಫ್ ಅಂಡರ್ ವಿಜಯನಗರ, ಮದರಾಸು, ೧೯೪೦, ಪು. ೩೩
12. ಅದೇ, ಪು. ೩೫
13. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೯, ಸಂಖ್ಯೆ ೮೫
14. ಅಡ್ಮಿನಿಸ್ಟ್ರೇಷನ್ ಅಂಡ್ ಸೋಶಿಯಲ್ ಲೈಫ್ ಅಂಡರ್ ವಿಜಯನಗರ, ಪು. ೧೧೬
15. ಸೋಶಿಯಲ್ ಅಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ, ಸಂಪುಟ ೧, ಪು. ೩೬೯

ತೋರೆಯುವವರು ದಂಡನಾಯಕನನ್ನು ಕೇವಲ ಮಿಲಿಟರಿ ಅಧಿಕಾರಿಯಾಗಿ ಪರಿಗಣಿಸಿದ್ದಾರೆನ್ನುವುದು ಖಚಿತವಾಗುತ್ತದೆ. ಆದರೆ ಮೇಲೆ ಪ್ರಸ್ತಾಪಿಸಿರುವ ವಿಜಯನಗರ ಕಾಲದ ಮಾಹಿತಿಯ ಪ್ರಕಾರ, ದಂಡನಾಯಕನು ಕೇವಲ ಸೈನ್ಯಾಧಿಕಾರಿಯಾಗಿರಲಿಲ್ಲವೆಂಬುದು ಮನದಟ್ಟಾಗುತ್ತದೆ.

ಒಟ್ಟಿನಲ್ಲಿ, ಈ ಮೇಲೆ ಹೇಳಿದ ಎಲ್ಲ ಮಾಹಿತಿಗಳನ್ನೂ ಸಂಪೂರ್ಣವಾಗಿ ಪರಿಶೀಲಿಸಿದರೆ ಕೆಲವು ಅಂಶಗಳು ತಿಳಿಯುಬರುತ್ತವೆ : ೧. ಪ್ರಾಚೀನಕಾಲದಿಂದ ಅಂದರೆ ಗುಪ್ತರ ಕಾಲದಿಂದಲೂ 'ದಂಡನಾಯಕ' ಎನ್ನುವ ಪದವು ಬಳಕೆಯಲ್ಲಿದೆ. ೨. ಕೇವಲ 'ದಂಡ' ಎನ್ನುವ ಪದದ ಅರ್ಥವನ್ನು ಆಧರಿಸಿ, ಅವನನ್ನು ಸೇನಾಧಿಕಾರಿಯನ್ನಾಗಿ ಪರಿಗಣಿಸಲಾಗಿದೆ. ೩. ದಂಡನಾಯಕನು ಮೊದಮೊದಲು ಸೇನಾಧಿಕಾರಿಯಾಗಿದ್ದು, ನಂತರ ರಾಜ್ಯಾಡಳಿತದ ಎಲ್ಲ ಅಂಗಗಳಲ್ಲಿಯೂ ಆದ್ಯತೆ ಪಡೆದಿರಬೇಕು. ೪. 'ದಂಡನಾಯಕ' ಎನ್ನುವುದು ಒಂದು ಬಿರುದು ಅಥವಾ ಗೌರವಸೂಚಕ ಪದ.[16] ೫. ಕರ್ನಾಟಕ ಆಡಳಿತ ವ್ಯವಸ್ಥೆಯಲ್ಲಿ ದಂಡನಾಯಕನ ಪಾತ್ರ ಮಾತ್ರ ಹಿರಿದಾದುದು.

---

16. ದಂಡನಾಯಕನ ಹೆಂಡತಿಯನ್ನು ದಂಡನಾಯಕಿತಿ ಎಂದು ಕರೆಯುವುದು ರೂಢಿಗೆ ಬಂದು ಎಷ್ಟೋ ಜನ ಸ್ತ್ರೀಯರ ಹೆಸರುಗಳು ದೊರಕಿವೆ. ಉದಾಹರಣೆ : ದಂಡನಾಯಕಿತ್ತಿ ರೆಬ್ಬಲದೇವಿ, ದಂಡನಾಯಕಿತ್ತಿ ಜಕ್ಕಿಯವ್ವೆ, ಲಕ್ಷ್ಮೀಮತಿ ದಂಡನಾಯಕಿತಿ, ದಂಡನಾಯಕಿತಿ ಸಾಹಳಿ, ಇತ್ಯಾದಿ.

ಕೆ. ಜಗನ್ನಾಥಶಾಸ್ತ್ರಿ

# ಹೊಳೆಹೊನ್ನೂರು: ಒಂದು ಐತಿಹಾಸಿಕ ನಾಡು

ಹೊಳೆಹೊನ್ನೂರು, ಶಿವಮೊಗ್ಗ ಜಿಲ್ಲೆಯಲ್ಲಿರುವ ಒಂದು ದೊಡ್ಡ ಗ್ರಾಮ. ಇದು ಶಿವಮೊಗ್ಗದಿಂದ ಪೂರ್ವಕ್ಕೆ ೧೬ ಕಿಲೋಮೀಟರ್ ದೂರದಲ್ಲಿ, ಭದ್ರಾ ನದಿಯ ಬಲದಡೆಯ ಮೇಲಿದೆ. ಇದು ಪ್ರಾಚೀನ ಕಾಲದಿಂದಲೂ ಪುಣ್ಯಕ್ಷೇತ್ರವೆನಿಸಿಕೊಂಡಿದೆ. ಐತಿಹಾಸಿಕ ಸಂಶೋಧನೆಯಿಂದ ಇದು ಒಂದು ನಾಡಾಗಿದ್ದಿತೆಂಬುದೂ ಈ ಗ್ರಾಮವು ನಾಡಧಾನಿಯಾಗಿದ್ದಿತೆಂಬುದೂ ತಿಳಿದುಬರುತ್ತದೆ. ಸ್ಕಂದಪುರಾಣದ ತುಂಗಭದ್ರಾ ಮಹಾತ್ಮೆಯ ಹದಿನೆಂಟನೆಯ ಅಧ್ಯಾಯದಲ್ಲಿ ಈ ಊರಿನ ಉಲ್ಲೇಖವಿದ್ದು, ಆಗ ಇದನ್ನು ಸುಪರ್ಣಾಲಯ ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಹೊಳೆಹೊನ್ನೂರಿನ ಚಾರಿತ್ರಿಕ ಹಿನ್ನೆಲೆ ಇಂತಿದೆ: ಕ್ರಿ. ಶ. ೧೦೪೭ ರಿಂದ ೧೦೯೮ರವರೆಗೆ ದೋರಸಮುದ್ರ ರಾಜ್ಯವನ್ನು ಆಳಿದವನು ಹೊಯ್ಸಳ ರಾಜನಾದ ಒಂದನೆಯ ವಿನಯಾದಿತ್ಯ. ಅವನಿಗೆ ಜನ್ಮತಃ ಕುಷ್ಠರೋಗವಿತ್ತು. ಅದರ ನಿವಾರಣೆಗಾಗಿ ರಾಜಧಾನಿಯಿಂದ ಹೊರಟು ಅನೇಕ ಪುಣ್ಯಕ್ಷೇತ್ರಗಳಲ್ಲಿ ಸ್ನಾನ ಮಾಡುತ್ತಾ, ಅಲ್ಲಿರುವ ದೈವೀರೂಪಗಳನ್ನು ಅರ್ಚಿಸುತ್ತಾ ಕ್ರಿ. ಶ. ೧೦೬೯ರಲ್ಲಿ ಸುಪರ್ಣಾಲಯ ಕ್ಷೇತ್ರಕ್ಕೆ ಬಂದನು. ಇಲ್ಲಿ ಮೂರುದಿನಗಳಿದ್ದು ಭದ್ರಾನದಿಯಲ್ಲಿ ಸ್ನಾನ ಮಾಡಿ ಕ್ಷೇತ್ರಾಧಿಪತಿಯಾದ ಸುಪರ್ಣೇಶ್ವರನನ್ನು ಪೂಜಿಸಿದನು. ಅವನ ರೋಗವು ಗುಣವಾಗುತ್ತಾ ಬಂದಿತು. ಆಗ ಇದು ಒಂದು ಕಾರುಣಿಕ ಸ್ಥಳವೆಂದು ತಿಳಿದು ಅವನು ಕ್ರಿ. ಶ. ೧೦೬೯ನೆಯ ಸಾಧಾರಣ ಸಂವತ್ಸರದಲ್ಲಿ ಇಲ್ಲಿ ಸಣ್ಣ ಮಣ್ಣಿನಕೋಟೆಯನ್ನು ಕಟ್ಟಿಸಿ, ಕಾಡನ್ನು ಕಡಿದು ಅಗ್ರಹಾರವನ್ನು ರಚಿಸಿ, ಸುಪರ್ಣೇಶ್ವರನ ಪೂಜೆಯು ನಿರಂತರವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದನು. ಆದರೆ ಅವನ ರೋಗವು ಪೂರ್ಣವಾಗಿ ವಾಸಿಯಾಗದೆ, ಹಣೆಯ ಮೇಲೆ ಹೊನ್ನಿನ ಅಗಲದಷ್ಟು ಮಾತ್ರ ಉಳಿಯಿತು. ಅವನು ಚಿಂತಿತನಾಗಿ, ಭಕ್ತಿಯಿಂದ ಸುಪರ್ಣೇಶ್ವರನನ್ನು ಪೂಜಿಸಿ, ರೋಗವು ಪೂರ್ಣವಾಗಿ ವಾಸಿಯಾಗುವಂತೆ ಪ್ರಾರ್ಥಿಸಿದನು. ಸುಪರ್ಣೇಶ್ವರನು ಅವನ ಕನಸಿನಲ್ಲಿ ಕಾಣಿಸಿಕೊಂಡು ಇದು ಅವನ ಜನ್ಮಾಂತರೀಯ ಪಾಪದ ಫಲವೆಂದೂ ಈ ಜನ್ಮದಲ್ಲಿ ವಾಸಿಯಾಗುವುದಿಲ್ಲವೆಂದೂ ತಿಳಿಸಿದನು. ಅನಂತರ ಮಂತ್ರಿಗಳ ಸಲಹೆಯಂತೆ ರಾಜನು ಆ ರೋಗ ಚಿಹ್ನೆಯನ್ನು ಮರೆಮಾಡಲು ಹೊನ್ನಿನ ಅಗಲದಷ್ಟು ಚಿನ್ನದ ತಗಡನ್ನು ಮಾಡಿಸಿ, ಅದರ ಮೇಲೆ ಅಂಟಿಸಿಕೊಂಡನು. ಅನಂತರ ಈ ಹೊಸ ಅಗ್ರಹಾರವನ್ನು ಹೊಳೆಹೊನ್ನೂರು ಎಂದು ನಾಮಕರಣ ಮಾಡಿದನು.

ಈ ಒಂದನೆಯ ವಿನಯಾದಿತ್ಯ ರಾಜನು ಕ್ರಿ. ಶ. ೧೦೭೪ರಲ್ಲಿ ದೇಶಸಂಚಾರ ಹೊರಟು, ಈ ಕ್ಷೇತ್ರದ ಸಮೀಪಕ್ಕೆ ಬಂದು ಬಿಡಾರ ಹೂಡಿದನು. ಆಗ ಇವನ ಬೇಟೆಯ ನಾಯಿಗಳನ್ನು ಈ ಕ್ಷೇತ್ರದ ಮೊಲಗಳು ಅಟ್ಟಿಸಿಕೊಂಡು ಬಂದವು. ಈ ವಿಷಯವನ್ನು ತಿಳಿದ ವಿನಯಾದಿತ್ಯನು, ಇದು ಗಂಡುನೆಲವೆಂದು ತೀರ್ಮಾನಿಸಿ, ಕ್ರಿ. ಶ. ೧೦೭೪ರ ತಾರಣ ಸಂವತ್ಸರದ ಆಶ್ವಿಜ ಶುದ್ಧ ದಶಮಿ ಒಂದು ಕೋಟೆಯನ್ನು ಕಟ್ಟಿ ಇದನ್ನು ಪಟ್ಟಣ ಮಾಡಿದನು. ಪುರಾಣ ಪ್ರಸಿದ್ಧವೂ ಕಾರಣಿಕ ಸ್ಥಳವೂ ಆದ ಈ ಪಟ್ಟಣವನ್ನು ಮುಖ್ಯ ಸ್ಥಳ ಮಾಡಿ, ಇದಕ್ಕೆ

ಬೇರೆ ಬೇರೆ ಪ್ರದೇಶಗಳನ್ನು ಸೇರಿಸಿ ಒಂದು ಹೊಸ ನಾಡನ್ನು ರಚಿಸಿದನು.

ಈ ಹೊಸನಾಡಿನ ವಿವರ ಈ ರೀತಿ ಇದೆ :

೧. ಕಸಬೆ ಹೊಳೆಹೊನ್ನೂರುನಾಡು ೧ಕ್ಕೆ ಗ್ರಾಮಗಳು ೫೮
೨. ಆನವೇರಿನಾಡು ೧ಕ್ಕೆ ಗ್ರಾಮಗಳು ೨೨
೩. ಹನಗವಾಡಿನಾಡು ೧ಕ್ಕೆ ಗ್ರಾಮಗಳು ೭
೪. ಗಂಗೆಮಂಡಲದ ಎಡತೊರೆನಾಡು ೧ಕ್ಕೆ ಗ್ರಾಮಗಳು ೭೭
೫. ಗುಡ್ಡಮಲೆನಾಡು ೧ಕ್ಕೆ ಗ್ರಾಮಗಳು ೧೩
೬. ಬೆಂಕಿಪುರನಾಡು ೧ಕ್ಕೆ ಗ್ರಾಮಗಳು ೫೭

ಇಂತು ನಾಡು ೬ಕ್ಕೆ ಗ್ರಾಮಗಳು ೨೩೪

ಈ ಮೇರೆಗೆ ಮೊಹರು ಮಾಡಿ ಕಸಬೆ ಹೊಳೆ ಹೊನ್ನೂರುಪಟ್ನಕ್ಕೆ ಸೇರಿಸಿದನು.

ಅನಂತರ ದೋರಸಮುದ್ರವನ್ನು ಕ್ರಿ. ಶ. ೧೧೭೦ ರಿಂದ ೧೨೨೦ರವರೆಗೆ ಆಳಿದ ವೀರಬಲ್ಲಾಳನು ಸಂಚಾರ ಬಂದಾಗ, ಹೊಳೆಹೊನ್ನೂರಿನಲ್ಲಿ ೧೫ ದಿನಗಳವರೆಗೆ ವಾಸ್ತವ್ಯ ಮಾಡಿದನು. ಈ ನಾಡಿನ ಪ್ರಾಮುಖ್ಯ ವನ್ನು ಅರಿತ ಅವನು ಹೊಳೆಹೊನ್ನೂರು ಕೋಟೆಯನ್ನು ಬಲಪಡಿಸಿದನು.

ಅನಂತರ ಹೊಯ್ಸಳ ರಾಜ್ಯವು ವಿಜಯನಗರ ದವರ ವಶಕ್ಕೆ ಹೋದಾಗ, ಹೊಳೆಹೊನ್ನೂರುನಾಡು ಸಹಾ ಅವರ ಅಧೀನಕ್ಕೆ ಒಳಪಟ್ಟಿತು. ವಿಜಯನಗರದ ಅರಸನಾದ ಹರಿಹರನು, ಹೊಳೆಹೊನ್ನೂರಿನ ಹಳೆಯ ಕೋಟೆಯ ಹತ್ತಿರದಲ್ಲಿ ಮತ್ತೊಂದು ಬಲವಾದ ಕೋಟೆ ಕಟ್ಟಿಸಿ, ನಾಡನ್ನು ವ್ಯವಸ್ಥೆಗೊಳಿಸಿ, ಈ ನಾಡಿನ ಆಡಳಿತಕ್ಕೆ ಒಬ್ಬ ನಾಡಿಗನನ್ನು ನೇಮಿಸಿದನು. ಕ್ರಿ. ಶ. ೧೫೫೪ರಲ್ಲಿ ವಿಜಯನಗರದ ಸದಾಶಿವರಾಯನು ಕೆಳದಿ ರಾಜ್ಯದ ಅರಸನಾದ ಸದಾಶಿವನಾಯಕನ ಮಗನಾದ ಹಿರೇ ಸಂಕಣ್ಣನಾಯಕನ ಹಾಲುಬೆಣ್ಣೆಯ ವೆಚ್ಚಕ್ಕಾಗಿ ಹುಲ್ಲುಕೆರೆ, ಚನ್ನಗಿರಿ, ಉಡುಗಣಿ, ಅಜ್ಜಂಪುರ–ಈ ಸೀಮೆಗಳೊಂದಿಗೆ ಹೊಳೆಹೊನ್ನೂರು ಸೀಮೆಯನ್ನೂ ಸದಾಶಿವನಾಯಕನಿಗೆ ದಾನವಾಗಿ ಕೊಟ್ಟನು. ಅಂದಿನಿಂದ ಹೊಳೆಹೊನ್ನೂರುನಾಡು ಕೆಳದಿ ಅರಸರ ಅಧೀನಕ್ಕೆ ಒಳಪಟ್ಟಿತು.

ಸದಾಶಿವನಾಯಕನ ನಂತರ ಕೆಳದಿ ರಾಜ್ಯವನ್ನು ಹಿರೇ ಸಂಕಣ್ಣನಾಯಕನು ಆಳಿದನು. ಪಟ್ಟಕ್ಕೆ ಬಂದಾಗ ಹಿರೇ ಸಂಕಣ್ಣನಾಯಕನು ಇನ್ನೂ ಚಿಕ್ಕವನಾಗಿದ್ದನು. ಈ ಸಮಯವನ್ನು ಸಾಧಿಸಿ, ಸಂತೇಬೆನ್ನೂರಿನ ಪಾಳೆಯ ಗಾರನಾಗಿದ್ದ ಹನುಮಪ್ಪನಾಯಕನು ಕ್ರಿ. ಶ. ೧೫೬೮ ರಲ್ಲಿ ಹೊಳೆಹೊನ್ನೂರುನಾಡನ್ನು ಗೆದ್ದು ತನ್ನ ಸೀಮೆಗೆ ಸೇರಿಸಿಕೊಂಡನು. ಅನಂತರ ಕೆಳದಿ ರಾಜ್ಯವನ್ನು ಕ್ರಿ.ಶ. ೧೬೨೯ರಲ್ಲಿ ಹಿರಿಯ ವೆಂಕಟಪ್ಪನಾಯಕನು ಆಳಿದನು. ಆಗ ಇವನು ಸಂತೇಬೆನ್ನೂರು ಪಾಳೆಯಗಾರನು ಆಕ್ರಮಿಸಿ ಕೊಂಡಿದ್ದ ಹೊಳೆಹೊನ್ನೂರುನಾಡನ್ನು ಗೆದ್ದು, ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

ಹಿರಿಯ ವೆಂಕಟಪ್ಪನಾಯಕನು ತರೀಕೆರೆ ಪಾಳೆಯ ಗಾರರ ಹಾವಳಿಯನ್ನು ತಡೆಗಟ್ಟುವ ಉದ್ದೇಶದಿಂದ, ನಾಡಿನ ಗಡಿಭಾಗವಾದ ಲಕ್ಕವಳ್ಳಿನಾಡನ್ನು ಬಲಪಡಿಸಿದನು. ಆಗ ಹೊಳೆಹೊನ್ನೂರುನಾಡಿನಿಂದ ವಡಿ, ತಾವರಗೇರಿ, ಯಾನಹಳ್ಳಿ, ಸಿಂಗನಮನೆ, ಬೇಹಾರ ಕೊಪ್ಪ, ಹಳೆಬೀಡು, ಸಂಕರಗುತ್ತಿ, ನಲ್ಲೂರು–ಈ ಗ್ರಾಮಗಳನ್ನೂ ಗಂಗಮಂಡಲದ ನಾಡನ್ನೂ ಬೆಂಕಿಪುರ ಸೀಮೆಯ ಗ್ರಾಮಗಳನ್ನೂ ಲಕ್ಕವಳ್ಳಿನಾಡಿಗೆ ಸೇರಿಸಿದನು. ಹಾಗೆಯೇ, ಮೊಗಲರ ಆಕ್ರಮಣವನ್ನು ಎದುರಿಸಲು ಸಮರ್ಥವಾಗುವಂತೆ ಹೊಳೆಹೊನ್ನೂರುನಾಡಿಗೆ ಖರೀದಿ ಹೋಬಳಿಯನ್ನು ಸೇರಿಸಿ ಈ ನಾಡನ್ನು ಭದ್ರಗೊಳಿಸಿದನು. ಖರೀದಿ ಹೋಬಳಿ ಎಂದರೆ ಉಗ್ರಾಣಕ್ಕೆ ಧಾನ್ಯ ಗಳನ್ನು ಕ್ರಯಕ್ಕೆ ತೆಗೆದುಕೊಳ್ಳುವಂತಹ ಗ್ರಾಮಗಳು. ಆ ಗ್ರಾಮಗಳನ್ನು ಸೇರಿಸಿ ಒಂದು ಹೋಬಳಿ ಎಂದು ಕರೆದಿದ್ದರು. ಈ ಗ್ರಾಮಗಳು ಯಾವುವೆಂದರೆ, ಕುಮಶಿ, ಹಾರನಹಳ್ಳಿ, ಅಯ್ಯನೂರು, ಗಾಜನೂರು, ಲಕ್ಕೊಳ್ಳಿ, ದಾನಿವಾಸ, ಅಜಂಪುರ ಮತ್ತು ಹುಲ್ಲಿಗೆರೆ. ಹೀಗೆ ಸೇರಿಸಿಯಾದ ಮೇಲೆ, ಹೊಳೆಹೊನ್ನೂರುನಾಡನ್ನು ಒಂದು ತಾಲ್ಲೂಕು ಮಾಡಿ ಅಲ್ಲಿಯ ಮೇಲ್ವಿಚಾರಣೆಗೆ ಒಬ್ಬ ಕಿಲ್ಲೆದಾರನನ್ನು ನೇಮಿಸಿದನು.

ಶಿವಪ್ಪನಾಯಕನು ಕೆಳದಿ ರಾಜ್ಯವನ್ನು ಆಳುತ್ತಿದ್ದಾಗ (ಕ್ರಿ. ಶ. ೧೬೪೮), ವಿಜಾಪುರದ ಸುಲ್ತಾನನ ಕಡೆಯವರಾದ ಅಹಮದ್‌ಖಾನ್ ಮತ್ತು ಮಹಮದ್

ಖಾನ್ ಎಂಬುವರು ದಂಡೆತ್ತಿ ಬಂದು ಹೊಳೆಹೊನ್ನೂರು ತಾಲ್ಲೂಕನ್ನು ವಶಮಾಡಿಕೊಂಡು ಇದರ ಮೇಲ್ವಿಚಾರಣೆಗೆ ರಾಮಾಜಿಪಂತ್ ಖೇಮಾಜಿಪಂತ್ ಎಂಬುವವನನ್ನು ಕಿಲ್ಲೇದಾರನನ್ನಾಗಿ ನೇಮಿಸಿದರು. ಅನಂತರ ವಿಜಾಪುರದ ಸುಲ್ತಾನನ ಕಡೆಯವರು ಈ ನಾಡನ್ನು ಕ್ರಿ.ಶ. ೧೬೫೬ರವರೆಗೆ ಏಳು ವರ್ಷಗಳ ಕಾಲ ಆಳಿದರು. ಕ್ರಿ.ಶ. ೧೬೫೬ರ ದುರ್ಮುಖಿ ಸಂವತ್ಸರದಲ್ಲಿ ಶಿವಪ್ಪನಾಯಕನು ದಂಡೆತ್ತಿ ಬಂದು ಹೊಳೆಹೊನ್ನೂರು ಕೋಟೆಯನ್ನು ವಶಮಾಡಿಕೊಂಡು ಈ ನಾಡನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಇದರ ಮೇಲ್ವಿಚಾರಣೆಗೆ ತನ್ನ ಮಗ ಹಿರೇ ಭದ್ರಪ್ಪನಾಯಕನನ್ನು ನೇಮಿಸಿದನು. ಈ ಕೋಟೆಯೊಳಗೆ 'ಗಂಜಿರಾಜಿ' ಎಂಬ ಫಿರಂಗಿಯನ್ನೂ ಕೆಲವು ಮಂದಿ ಸೈನಿಕರನ್ನೂ ಇಟ್ಟನು. ಅಲ್ಲದೆ, ಕಿಲ್ಲೆದಾರನಿಗಾಗಿ ಒಂದು ಅರಮನೆಯನ್ನೂ ಮದ್ದಿನಮನೆ, ಉಗ್ರಾಣ, ತುಪ್ಪದಗಚ್ಚು, ಎಣ್ಣೆಗಚ್ಚು–ಮೊದಲಾದುವನ್ನೂ ಕಟ್ಟಿಸಿದನು. ಪಶ್ಚಿಮದಿಕ್ಕಿನ ಕೋಟೆಗೋಡೆಯನ್ನು ಬಲಗೊಳಿಸಿದನು. ಒಂದು ಪಣತವನ್ನೂ ಕಟ್ಟಿಸಿದನು. ಈ ಎಲ್ಲದರ ಪಾರುಪತ್ತೆಗಾಗಿ ಅರಳಿಕೊಪ್ಪದ ನರಸಣ್ಣ ಎಂಬುವನನ್ನು ನೇಮಿಸಿದನು.

ಭದ್ರಪ್ಪನಾಯಕನು ಕೆಳದಿ ಸಿಂಹಾಸನವನ್ನು ಏರಿದಾಗ, ವಿಜಾಪುರದ ಬಾದಶಹನ ಕಡೆಯಿಂದ ಕುಲ್ಲಿಖಾನ್ ಎಂಬುವನ ನಾಯಕತ್ವದಲ್ಲಿ ದಂಡು ಬಂದು, ಕೋಟೆಯನ್ನು ಮುತ್ತಿ, ಹದಿನೈದು ದಿನಗಳವರೆಗೆ ಹೋರಾಟ ನಡೆಸಿ ಗೆಲುವನ್ನು ಪಡೆಯಿತು (ಕ್ರಿ. ಶ. ೧೬೬೬). ಹಾಗಾಗಿ ಈ ಹೊಳೆಹೊನ್ನೂರು ತಾಲ್ಲೂಕು ಎರಡನೆಯ ಬಾರಿಗೆ ವಿಜಾಪುರದ ಬಾದಶಹನ ವಶಕ್ಕೆ ಒಳಪಟ್ಟಿತು. ಅನಂತರ ಈ ನಾಡು ಕ್ರಿ. ಶ. ೧೭೨೪ರ ವರೆಗೆ ೫೭ ವರ್ಷಗಳ ಕಾಲ ವಿಜಾಪುರದ ಬಾದಶಹರ ಆಡಳಿತಕ್ಕೆ ಒಳಪಟ್ಟಿದ್ದಿತು. ಈ ಅವಧಿಯಲ್ಲಿ ಇದರ ಆಡಳಿತವನ್ನು ಸಿರಿಯಾ(ಸಿರಾ)ದ ಸುಬೇದಾರರು ನೋಡಿಕೊಳ್ಳುತ್ತಿದ್ದರು.

ಕ್ರಿಸ್ತಶಕ ೧೭೨೪ರಲ್ಲಿ ಕೆಳದಿ ರಾಜ್ಯವನ್ನು ಇಮ್ಮಡಿ ಸೋಮಶೇಖರನಾಯಕನು ಆಳುತ್ತಿದ್ದಾಗ, ಇವನು ಸಿರಿಯಾದ ಸುಬೇದಾರನಿಗೆ ಸುಮಾರು ಒಂದು ಲಕ್ಷದಷ್ಟು ಹಣವನ್ನು ಕೊಟ್ಟು ಹೊಳೆಹೊನ್ನೂರುನಾಡನ್ನು ಕ್ರಯಕ್ಕೆ ಕೊಂಡು, ಅಲ್ಲಿ ತನ್ನ ಸೈನ್ಯವನ್ನು ಇಟ್ಟನು. ಆಮೇಲೆ ವೀರಪ್ಪಯ್ಯ ಎಂಬವವನನ್ನು ಈ ನಾಡಿನ ಪಾರುಪತ್ತೆಗಾರನನ್ನಾಗಿ ನೇಮಿಸಿದನು.

ಅನಂತರ ಬಸಪ್ಪನಾಯಕನು ಕೆಳದಿ ರಾಜ್ಯವನ್ನು ಆಳತೊಡಗಿದನು. ಇವನ ಅವಧಿಯಲ್ಲಿ ಹೊಳೆಹೊನ್ನೂರು ತಾಲ್ಲೂಕಿನ ಕಿಲ್ಲೇದಾರನಾಗಿ ಲಿಂಗಪ್ಪನಾಯಕನೂ ಪಾರುಪತ್ತೆಗಾರನಾಗಿ ಹೊನ್ನಪ್ಪಯ್ಯ ಎಂಬುವನೂ ಕಾರ್ಯ ನಿರ್ವಹಿಸುತ್ತಿದ್ದರು.

ಮುಮ್ಮಡಿ ಸೋಮಶೇಖರನಾಯಕನು ತನ್ನ ಆಳ್ವಿಕೆಯ ಅವಧಿಯಲ್ಲಿ (ಕ್ರಿ. ಶ. ೧೭೫೮) ಹೊಳೆಹೊನ್ನೂರುನಾಡಿಗೆ ಸೇರಿದ್ದ ಕೆಲವು ಗ್ರಾಮಗಳನ್ನು ಸೇರಿಸಿ ಬೆಂಕಿಪುರ ತಾಲ್ಲೂಕನ್ನು ರಚಿಸಿದನಲ್ಲದೆ, ಅಲ್ಲಿಗೆ ಪ್ರತ್ಯೇಕವಾದ ಕಿಲ್ಲೇದಾರನನ್ನೂ ನೇಮಿಸಿದನು.

ಕ್ರಿಸ್ತಶಕ ೧೭೭೩ರಲ್ಲಿ ಹೈದರಾಲಿಯು ಕೆಳದಿ ರಾಜ್ಯವನ್ನು ಗೆದ್ದುಕೊಂಡ ನಂತರ ಈ ನಾಡು ಮೈಸೂರು ರಾಜ್ಯದಲ್ಲಿ ಸೇರಿಹೋಯಿತು. ಹೈದರಾಲಿಯು ನಗರವನ್ನು ಕೇಂದ್ರವಾಗಿಟ್ಟು ಒಂದು ಫೌಜುದಾರಿಯನ್ನು ನೇಮಿಸಿದನು. ಈ ಫೌಜುದಾರಿಯಲ್ಲಿ ಈಗಿನ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳು ಸೇರಿದ್ದುವು. ಹೊಳೆಹೊನ್ನೂರು ನಾಡು ಈ ನಗರ ಫೌಜುದಾರಿಯ ಮುಖ್ಯ ತಾಲ್ಲೂಕುಗಳಲ್ಲಿ ಒಂದಾಗಿದ್ದಿತು. ಕ್ರಿ. ಶ. ೧೮೩೦ರವರೆಗೆ ಶಿವಮೊಗ್ಗೆಯೂ ಒಂದು ತಾಲ್ಲೂಕಾಗಿದ್ದಿತು. ಆಗ ಹೊಳೆಹೊನ್ನೂರು ಸಹಾ ಸ್ವತಂತ್ರವಾದ ತಾಲ್ಲೂಕಾಗಿದ್ದಿತು. ಈ ಎರಡು ತಾಲ್ಲೂಕುಗಳಿಗೂ ಕಟ್ಟೆತಿಮ್ಮಯ್ಯ ಎಂಬುವನು ಆಡಳಿತಾಧಿಕಾರಿಯಾಗಿದ್ದನು.

ಕ್ರಿಸ್ತಶಕ ೧೮೬೨ರಲ್ಲಿ ನಗರ ಫೌಜುದಾರಿಯಲ್ಲಿ ಆಡಳಿತಾತ್ಮಕ ಬದಲಾವಣೆಗಳಾದುವು. ಶಿವಮೊಗ್ಗ, ಕಡೂರು, ಚಿತ್ರದುರ್ಗ–ಈ ಮೂರು ಜಿಲ್ಲೆಗಳ ರಚನೆಯಾಯಿತು. ಈ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆಯ ಪ್ರದೇಶದಲ್ಲಿದ್ದ ಕೆಲವು ತಾಲ್ಲೂಕುಗಳ ರಚನೆಯಲ್ಲಿಯೂ ಬದಲಾವಣೆಗಳಾದುವು. ಆಗ ಬೆಂಕಿಪುರ ಹಾಗೂ ಹೊಳೆಹೊನ್ನೂರು ತಾಲ್ಲೂಕುಗಳನ್ನು ತೆಗೆದು

ಹಾಕಿ, ಆ ಪ್ರದೇಶವನ್ನು ಶಿವಮೊಗ್ಗ ತಾಲ್ಲೂಕಿಗೆ ಸೇರಿಸಿದರೆಂದು ಕಾಣುತ್ತದೆ. ಅನಂತರ ಬೆಂಕಿಪುರ ಮತ್ತು ಹೊಳೆಹೊನ್ನೂರು ಪಟ್ಟಣಗಳು ಹೋಬಳಿಯ ಮುಖ್ಯಸ್ಥಳಗಳಾಗಿ ಮುಂದುವರೆದವು.

ಈ ಶತಮಾನದ ಮಧ್ಯಭಾಗದಲ್ಲಿ, ಅಂದರೆ ೧೯೪೧-೧೯೫೦ರ ಅವಧಿಯಲ್ಲಿ ಭದ್ರಾವತಿ ತಾಲ್ಲೂಕಿನ ರಚನೆಯಾದ ನಂತರ, ಇದರಲ್ಲಿ ಭದ್ರಾವತಿ ಹೋಬಳಿ, ಕೂಡ್ಲಿಗೆರೆ ಹೋಬಳಿ ಮತ್ತು ಹೊಳೆಹೊನ್ನೂರು ಹೋಬಳಿ ಪ್ರದೇಶಗಳು ಸೇರಿಹೋದವು. ಈಚೆಗೆ ೧೯೮೭ರಲ್ಲಿ ಕರ್ನಾಟಕ ರಾಜ್ಯದಲ್ಲಿ ನಡೆದ ಆಡಳಿತಾತ್ಮಕ ವಿಕೇಂದ್ರೀಕರಣದ ಕ್ರಾಂತಿಯ ಕಾಲದಲ್ಲಿ, ಹೊಳೆಹೊನ್ನೂರು ಮಂಡಲ ಪಂಚಾಯತ್‌ನ ಮುಖ್ಯಸ್ಥಳವಾಗಿ ಪರಿಗಣಿಸಲ್ಪಟ್ಟಿದೆ.

ಸಿ. ಎಸ್. ರಮೇಶ್

# ಮಧುಗಿರಿ ಪಾಳೆಯಗಾರರು : ಇಣುಕುನೋಟ

ವಿಜಯನಗರೋತ್ತರ ಕಾಲದಲ್ಲಿ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಕೆಲವು ಪಾಳೆಯಗಾರ ಮನೆತನಗಳವರು ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತಿದ್ದರು. ಅವರಲ್ಲಿ ಕೆಳದಿ ನಾಯಕರು, ಚಿತ್ರದುರ್ಗದ ನಾಯಕರು, ಯಲಹಂಕ ಪ್ರಭುಗಳು, ಕೊಡಗಿನ ಹಾಲೇರಿ ರಾಜರು, ದಕ್ಷಿಣಕನ್ನಡದ ಭೈರರಸರು ಮತ್ತು ಮೈಸೂರಿನ ಒಡೆಯರು ಪ್ರಸಿದ್ಧರು. ಇವರಲ್ಲದೆ ನಿಡುಗಲ್ಲು, ಕಳಲೆ, ಉಮ್ಮತ್ತೂರು, ಮಧುಗಿರಿ, ಮಿಡಿಗೇಶಿ, ಹೊಸಕೋಟೆ, ಗೇರುಸೊಪ್ಪೆ ಮೊದಲಾದ ಅನೇಕ ಸಣ್ಣಪುಟ್ಟ ಪಾಳೆಯಗಾರರೂ ಕೆಲವು ಕಾಲ ತಮ್ಮ ಆಳ್ವಿಕೆ ನಡೆಸಿದರು. ಅಂತಿಮವಾಗಿ, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರನ್ನು ಪ್ರಬಲ ರಾಜ್ಯವಾಗಿ ಪರಿವರ್ತಿಸಿ, ಎಲ್ಲ ಪಾಳೆಯಗಾರ ಮನೆತನಗಳನ್ನೂ ಕೊನೆಗಾಣಿಸಿದರು. ಪ್ರಸ್ತುತ ಪ್ರಬಂಧದಲ್ಲಿ, ಮಧುಗಿರಿ ಪಾಳೆಯಗಾರರನ್ನು ಕುರಿತ ಕೆಲವು ವಿಚಾರಗಳನ್ನು ಸಂಗ್ರಹಿಸಿದೆ.

ಮಧುಗಿರಿಯು ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಇದರ ಮೊದಲ ಹೆಸರು ಮದ್ದಗಿರಿ. 'ಮಧು' ಎಂಬ ಹೆಸರಿನ ಎತ್ತರದ ಬುಡದಲ್ಲಿ ಈ ಊರು ಇದ್ದುದರಿಂದ ಮದ್ದಗಿರಿ ಎಂದು ಹೆಸರು ಬಂದಿತಂತೆ. ಇದನ್ನು ದಾಳಿಂಬೆಪಟ್ಟವೆಂತಲೂ ಕರೆಯಲಾಗುತ್ತಿದ್ದಿತು. ೧೯೨೭ರಿಂದ ಮಧುಗಿರಿ ಎಂಬ ಹೆಸರು ರೂಢಿಗೆ ಬಂದಿದೆ.

ಮಧುಗಿರಿ ಪಾಳೆಯಗಾರರ ಇತಿಹಾಸ ತಿಳಿಯಲು ಲಭ್ಯವಿರುವ ಆಧಾರಗಳು ಕಡಿಮೆ. ಆದರೆ ಈವರೆಗೆ ಸಿಕ್ಕಿರುವ ಆಧಾರಗಳಲ್ಲಿ, ೧. ಮಿಡಿಗೇಶಿಯ ರಾಯರೇಖಾ, ೨. ಮಿಡಿಗೇಶಿ ಮತ್ತು ಮಧುಗಿರಿಗಳಲ್ಲಿ ಸಿಕ್ಕಿರುವ ದಾಖಲೆಗಳು, ೩. ಶಾಸನಗಳು ಇತ್ಯಾದಿಗಳು ಮಧುಗಿರಿ ಪಾಳೆಯಗಾರ ವಂಶದವರ ಬಗ್ಗೆ ಕೆಲವು ವಿಚಾರಗಳನ್ನು ತಿಳಿಸುತ್ತವೆ. ಆದರೂ ಈ ಪಾಳೆಯಪಟ್ಟಿನ ಚರಿತ್ರೆ ಅಸ್ಪಷ್ಟವಾಗಿದ್ದು, ಇದರ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

ದಾಖಲೆಗಳು ತಿಳಿಸುವಂತೆ, ಮಧುಗಿರಿ ಪಾಳೆಯಗಾರರ ಮೂಲವಂಶದವರು ಮೊದಲು ಸೊನ್ನಲಾಪುರ (ಈಗಿನ ಸೊಲ್ಲಾಪುರ)ದಲ್ಲಿ ಇದ್ದು, ಅನಂತರ ದಕ್ಷಿಣಕ್ಕೆ ಬಂದು ವಿಜಯನಗರದ ಅರಸರ ಸೇವೆಗೆ ಸೇರಿದರು. ಈ ಅವಧಿಯಲ್ಲಿ ದೆಹಲಿಯಿಂದ ಬಂದಿದ್ದ ದಾಳಿಕಾರ ಮಲ್ಲಾಖಾನನನ್ನು ಸೋಲಿಸಿ ವಿಜಯನಗರದ ಅರಸರಿಂದ ಆಸ್ಥಾನ ಗೌರವವನ್ನು ಪಡೆದು ಅಶ್ವಾಧಿಕಾರಿಗಳಾದರು. ಈ ಪಾಳೆಗಾರರ ಮೂಲದವನೆಂದರೆ ಆದ್ಯವೀರಪ್ಪ ಗೌಡ. ಇವನು ಕೋರ ಎಂಬ ಊರನ್ನು ಕಟ್ಟಿಸಿದನು.

ವೀರಪ್ಪಗೌಡನ ನಂತರ ಹಿರೇಗೌಡನು ಪಟ್ಟಕ್ಕೆ ಬಂದನು. ಈತನೇ ಮಧುಗಿರಿ ಪಟ್ಟಣ ಮತ್ತು ಕೋಟೆಗಳನ್ನು ನಿರ್ಮಿಸಿದವನು. ಈತನು ಸುತ್ತಮುತ್ತಲಿನ ರಾಜ್ಯಗಳನ್ನು ಸ್ವಾಧೀನ ಮಾಡಿಕೊಂಡು 'ರಾಜಾ' ಎಂಬ ಬಿರುದನ್ನು ಧರಿಸಿದನು. 'ಮಿಡಗೇಶಿ ಕೈಫಿಯತ್' ಪ್ರಕಾರ ಈತನು ಎರಡನೆಯ ಪಾಳೆಯಗಾರನೆಂದು ತಿಳಿದು ಬಂದರೂ ಈತನೇ ಮಧುಗಿರಿ ಪಾಳೆಯಪಟ್ಟಿನ ಸ್ಥಾಪಕನೆಂದೂ ತಿಳಿದುಬರುತ್ತದೆ. ಈತನ ನಂತರವೇ ವೀರಪ್ಪಗೌಡನು ಪಟ್ಟಕ್ಕೆ ಬಂದನೆಂದು ಕೆಲವರ ಅಭಿಪ್ರಾಯವಿದೆ.

ವೀರಪ್ಪಗೌಡನ ನಂತರ ಆತನ ಮಗ ಕಾಳ ಚಿಕ್ಕಪ್ಪ ಗೌಡ(ಮೂರನೆಯ ಚಿಕ್ಕಪ್ಪಗೌಡ)ನು ಪಟ್ಟಕ್ಕೆ ಬಂದನು. ಈತನು ವಿಜಯನಗರದ ಅರಸನಾಗಿದ್ದ ಶ್ರೀರಂಗರಾಯನ ಅನುಮತಿ ಪಡೆದು ತನ್ನ ಕೋಟೆಯನ್ನು ಮತ್ತಷ್ಟು ಭದ್ರ ಪಡಿಸಿಕೊಂಡನು. ತನ್ನ ರಾಜ್ಯದ ಪ್ರತಿಯೊಂದು ಗ್ರಾಮದ ಗಡಿಗಳನ್ನೂ ನಿರ್ಧರಿಸಿದನು. ಕೆಲವು ಕೆರೆ ಮತ್ತು ದೇವಾಲಯಗಳನ್ನೂ ಕಟ್ಟಿಸಿದನು. ಈತನ ಕಾಲದಲ್ಲಿ ದುರ್ಗಕ್ಕೆ ಮದ್ದಗಿರಿ ಎಂಬ ಹೆಸರಿದ್ದಿತು. ಈತನ ಪ್ರಾಬಲ್ಯವನ್ನು ನಿಜಗಲ್ಲು, ಶಿರಾ ಇವರೇ ಮೊದಲಾದ ನೆರೆಹೊರೆಯ ಪಾಳೆಯಗಾರರು ಸಹಿಸಲಿಲ್ಲ. ಕೊರಟಗೆರೆ ನಾಯಕನು ಆರಂಭಿಸಿದ ಯುದ್ಧದಲ್ಲಿ ಚಿಕ್ಕಪ್ಪ ಗೌಡನು ಮೃತನಾದನು. ಈತನ ಮಗ ಮುಮ್ಮಡಿ ಚನ್ನಪ್ಪಗೌಡನಿಂದ ತನ್ನ ತಂದೆಯ ಪ್ರಖ್ಯಾತಿಯನ್ನು ಉಳಿಸಲು ಸಾಧ್ಯವಾಗಲಿಲ್ಲ. ಇವನೊಬ್ಬ ದುರ್ಬಲ ಅರಸ. ಈತನ ಕಾಲದಲ್ಲೇ ಮೈಸೂರಿನ ದಳವಾಯಿ ದೇವರಾಜಯ್ಯನು ಯುದ್ಧವನು ಪ್ರಾರಂಭಿಸಿದನು.

ಮುಮ್ಮಡಿ ಚಿಕ್ಕಪ್ಪಗೌಡನ ನಂತರ ರಂಗೇಗೌಡ, ರಾಮೇಗೌಡ ಮತ್ತು ತಿಮ್ಮೆಗೌಡರು ಆಳ್ವಿಕೆ ಮಾಡಿದರು. ಮೈಸೂರಿನ ದಳವಾಯಿ ದೇವರಾಜಯ್ಯನು ಮಧುಗಿರಿ ಪಾಳೆಯಗಾರ ತಿಮ್ಮೇಗೌಡನನ್ನು ಸೋಲಿಸಿ (ಕ್ರಿ.ಶ. ೧೬೭೮) ಶ್ರೀರಂಗಪಟ್ಟಣದ ಸೆರೆಮನೆಗೆ ಕಳುಹಿಸಿದನು. ಕೆಲವು ವರ್ಷಗಳ ನಂತರ ಮೈಸೂರು ಒಡೆಯರು ತಿಮ್ಮೇಗೌಡನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ಮಿಡಿಗೇಶಿಗೆ ಕಳುಹಿಸಿದರು ಹಾಗೂ ಆ ಊರನ್ನೇ ಅವನಿಗೆ ಜಹಗೀರಿಯಾಗಿ ಕೊಟ್ಟರು.

ಹೈದರ್‌ಅಲಿಯು ತನ್ನ ಆಳ್ವಿಕೆ ಪ್ರಾರಂಭಿಸಿದ ಮೇಲೆ ಮೈಸೂರನ್ನು ಪ್ರಬಲ ರಾಜ್ಯವಾಗಿ ಪರಿವರ್ತಿಸುವ ಉದ್ದೇಶ ಹೊಂದಿದನು. ಅವನು ಕರ್ನಾಟಕದ ಎಲ್ಲಾ ಪಾಳೆಯಗಾರರನ್ನೂ ಅವಕಾಶ ದೊರೆತಂತೆ ಸೋಲಿಸುತ್ತಾ ಬಂದನು. ಮಧುಗಿರಿ ಪಾಳೆಯಗಾರರೂ ಇದಕ್ಕೆ ಹೊರತಾಗಿರಲಿಲ್ಲ. ಅವನು ಅವರನ್ನು ಹತ್ತಿಕ್ಕಿ ಮಧುಗಿರಿ ಪ್ರಾಂತ್ಯವನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡನು. ಆದರೆ ಕ್ರಿ. ಶ. ೧೭೯೯ರಲ್ಲಿ, ಬ್ರಿಟಿಷರು ಟಿಪ್ಪುವಿನ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ, ಮಧುಗಿರಿ ಪಾಳೆಯಗಾರರ ವಂಶಸ್ಥರು ಬ್ರಿಟಿಷರಿಗೆ ಸಹಾಯಮಾಡಿ ತಮ್ಮ ಪಾಳೆಯಪಟ್ಟನ್ನು ಪುನಃ ಪಡೆದುಕೊಳ್ಳಲು ಪ್ರಯತ್ನ ನಡೆಸಿ ವಿಫಲರಾದರು.

ಹದಿನಾರು ಮತ್ತು ಹದಿನೆಂಟನೆಯ ಶತಮಾನಗಳ ಅವಧಿಯಲ್ಲಿ ಮಧುಗಿರಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ ಈ ಪಾಳೆಯಗಾರರು ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಅನೇಕ ಪಾಳೆಯಗಾರರಲ್ಲಿ ಪ್ರಸಿದ್ಧರಾಗಿದ್ದರು. ಇವರ ಆಳ್ವಿಕೆ ಕಾಲದಲ್ಲಿ ಮಿಡಿಗೇಶಿ, ಮಧುಗಿರಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕ ದೇವಾಲಯಗಳೂ ಬಸದಿಗಳೂ ಕೋಟೆ ಕೊತ್ತಲಗಳೂ ನಿರ್ಮಾಣವಾದವು. ಹೈದರ್‌ಅಲಿಯು ಸಹಾ ಭಸ್ಮಾಂಗಿ ಎಂಬಲ್ಲಿ ಕಲ್ಲಿನಕೋಟೆಯನ್ನೂ ಅರಮನೆಯನ್ನೂ ಕಟ್ಟಿಸಿದನು.

ಈ ಪಾಳೆಯಗಾರರ ಬಗ್ಗೆ ಈವರೆಗೆ ಪ್ರಕಟಗೊಂಡಿರುವ ಸಾಹಿತ್ಯವಿದ್ದರೂ ನಿಖರ ಮಾಹಿತಿಯನ್ನೊಳಗೊಂಡ ಅಧಿಕೃತ ಚರಿತ್ರಗ್ರಂಥವನು ಹೊರತರುವ ಅಗತ್ಯ ತೋರುತ್ತದೆ. ಹಾಗೆಯೇ, ಹೈದರ್‌ಅಲಿಗೂ ಪಾಳೆಯಗಾರರಿಗೂ ಇದ್ದ ಸಂಬಂಧ ಮತ್ತು ಈ ಪಾಳೆಯಗಾರರು ಇಂಗ್ಲೀಷರೊಡನೆ ಹೊಂದಿದ್ದ ಸಂಬಂಧಗಳ ಬಗ್ಗೆ ಸಂಶೋಧನೆ ನಡೆಸಲು ಅವಕಾಶವಿದೆ.

ಮಧುಗಿರಿ ತಾಲ್ಲೂಕಿನಲ್ಲಿ ಕೆಲವಾರು ಪ್ರಸಿದ್ಧ ಸ್ಥಳಗಳಿದ್ದು, ಈ ಪಾಳೆಯಗಾರರೊಡನೆ ಚಾರಿತ್ರಿಕ ಸಂಬಂಧ ಪಡೆದಿವೆ. ಉದಾಹರಣೆಗೆ, ಭಸ್ಮಾಂಗಿಯು ಕೋಟೆಯುಳ್ಳ ಒಂದು ಬೆಟ್ಟ. ಹೈದರ್‌ಅಲಿಯು ಇಲ್ಲಿ ಹಿಂದೆ ಬೂದಿಬಸಪ್ಪನು ಕಟ್ಟಿಸಿದ ಮಣ್ಣಿನಕೋಟೆಯನ್ನು ಕೆಡವಿಸಿ, ಇಟ್ಟಿಗೆ ಮತ್ತು ಕಲ್ಲಿನಿಂದ ಕೂಡಿದ ಕೋಟೆ ಮತ್ತು ಅರಮನೆಗಳನ್ನು ಕಟ್ಟಿಸಿದನಂತೆ. ಬಿಜವರವು ತೋಟದ ಸಿದ್ಧಲಿಂಗಭೂಪಾಲ ಮತ್ತು ಮುಮ್ಮಡಿ ಭೂಪಾಲರೆಂದು ಪ್ರಸಿದ್ಧಿ ಪಡೆದ ದೊರೆಗಳ ಕೇಂದ್ರವಾಗಿದ್ದಿತು. ಏಳುಸುತ್ತಿನಕೋಟೆಯು ಮಧುಗಿರಿಗೆ ೨೧ ಕಿಲೋಮೀಟರ್ ದೂರದಲ್ಲಿದೆ. ಹಿಂದೆ ಇಲ್ಲಿ ಪಾಂಡವರು ಇದ್ದರೆಂದು ಪ್ರತೀತಿ. ಮಿಡಿಗೇಶಿಯು ಮಧುಗಿರಿ ಪಾಳೆಯಪಟ್ಟಿನ ಕೇಂದ್ರವಾಗಿದ್ದಿತು.

ಸಿದ್ಧಾಪುರದಲ್ಲಿ ಒಂದು ಉತ್ತಮವಾದ ಹಳೆಯ ಕೋಟೆ ಇದೆ. ದೊಡ್ಡದಾಳಿವಟ್ಟದಲ್ಲಿ ಪ್ರಸಿದ್ಧವಾಗಿರುವ ದೊಡ್ಡ ಲಕ್ಷ್ಮೀನರಸಿಂಹ ದೇವಾಲಯವಿದೆ. ಬೆಟ್ಟದ ಬುಡದಲ್ಲಿರುವ ಕುಡುವತ್ತಿಯು ಈಗ ಜನವಸತಿಇಲ್ಲದ ಗ್ರಾಮವೆನಿಸಿದೆ. ಇಲ್ಲಿ ಕಂಬದರಾಯ ದೇವಾಲಯವಿದ್ದು, ಸೊಗಸಾಗಿದೆ. ಜರಲೆ ಮಲ್ಲಮ್ಮ ಎಂಬುವಳು ಕಟ್ಟಿಸಿದಳೆಂದು ಹೇಳಲಾಗಿರುವ ಗೋಪಾಲಕೃಷ್ಣ ಮತ್ತು ಲಕ್ಷ್ಮೀ ದೇವಾಲಯಗಳೂ ಮಜ್ಜನದಬಾವಿಯೆಂಬ ಕೊಳವೂ ಇವೆ.

ಡಾ॥ ರಾಧಾ ಕೃಷ್ಣಮೂರ್ತಿ

# ಕರ್ನಾಟಕ : ವಿಶ್ವಜ್ಞಾನಕೋಶಗಳ ತವರು

ಸುಂದರ ಪ್ರಾಕೃತಿಕ ದೃಶ್ಯಗಳಿಂದ ಶ್ರೀಮಂತವಾದ ಮೋಹಕನಾಡು ಕರ್ನಾಟಕವು ಭಾರತೀಯ ನಾಗರಿಕತೆ ಮತ್ತು ಸಂಸ್ಕೃತಿಗಳ ತೊಟ್ಟಿಲಾಗಿದೆ. ಪ್ರಾಚೀನಕಾಲದಿಂದಲೂ ಕರ್ನಾಟಕವನ್ನು ಆಳಿದ ವಿವಿಧ ರಾಜವಂಶಗಳ ರಾಜರು ಮತ್ತು ರಾಜಗಣ್ಯರು ಕಲೆ ಮತ್ತು ಸಾಹಿತ್ಯಗಳ ಪೋಷಕರಾಗಿದ್ದರು. ಅವರಲ್ಲಿ ಅನೇಕರು ಸ್ವತಃ ಶ್ರೇಷ್ಠ ಕವಿಗಳೂ ಲೇಖಕರೂ ಆಗಿದ್ದರು. ಭಾರತೀಯ ಸಾಹಿತ್ಯಕ್ಕೆ, ಅದರಲ್ಲೂ ವಿಶೇಷವಾಗಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳಿಗೆ ಅಂತಹವರ ಕಾಣಿಕೆಯು ಅತ್ಯಮೂಲ್ಯವಾದುದಾಗಿದೆ. ಸಾಹಿತ್ಯದ ವಿವಿಧ ಶಾಖೆಗಳಾದ ಪದ್ಯ, ಗದ್ಯ, ನಾಟಕ ಮತ್ತು ಚಂಪೂಗಳಿಗೆ ಕರ್ನಾಟಕವನ್ನು ಆಳಿದ ವರ್ಗಗಳ ಕಾಣಿಕೆಯು ಸುಪರಿಚಿತವಾಗಿದ್ದು ವ್ಯಾಪಕ ಮೆಚ್ಚುಗೆ ಪಡೆದಿದ್ದರೂ ವಿಶ್ವಜ್ಞಾನಕೋಶ ಅಥವಾ ವಿಶ್ವಕೋಶದಂತಹ ಸಾಹಿತ್ಯದ ನಿರ್ದಿಷ್ಟ ಪ್ರಕಾರಕ್ಕೆ ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭಗಳಲ್ಲಿದ್ದ ಸಾಹಿತ್ಯದ ವಿಶೇಷ ಕಾಣಿಕೆಯು ಈಗಲೂ ಅಜ್ಞಾತವಾಗಿಯೇ ಇದೆ. ವಿಶೇಷವಾಗಿ ಕರ್ನಾಟಕವನ್ನು ಆಳಿದ ವರ್ಗದ ಸದಸ್ಯರು ಸಂಗ್ರಹಿಸಿದ ಮತ್ತು ರಚಿಸಿದ ಪ್ರಮುಖ ವಿಶ್ವಜ್ಞಾನಕೋಶ ಕೆಲಸಗಳ ಮೇಲೆ ಬೆಳಕು ಬೀರುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪ್ರಾಚೀನ ಮತ್ತು ಮಧ್ಯಯುಗೀನ ಭಾರತದ ವಿದ್ಯಾಭ್ಯಾಸದ ಪ್ರಮುಖ ಗುರಿಯು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಫಲ ಪುರುಷಾರ್ಥಗಳನ್ನು ಸಾಧಿಸುವುದೇ ಆಗಿತ್ತು. ಆದ್ದರಿಂದ ವಿದ್ಯಾರ್ಥಿಗಳು ಮತ್ತು ವಿದ್ವಾಂಸರು ತತ್ವಶಾಸ್ತ್ರದ ವಿಷಯಗಳನ್ನು ಮಾತ್ರವೇ ಅಲ್ಲದೆ, ಜ್ಞಾನದ ಇನ್ನಿತರ ಶಾಖೆಗಳಾದ ಇತಿಹಾಸ, ಭೂಗೋಳ, ಕಾನೂನು, ಆಡಳಿತ, ವೈದ್ಯ ಮತ್ತಿತರ ವಿಜ್ಞಾನಗಳು, ಖಗೋಳಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಕಲೆಯ ವಿವಿಧ ಪ್ರಕಾರಗಳು ಮತ್ತು ಹೆಚ್ಚಿನ ಸಂಖ್ಯೆಯ ಇನ್ನೂ ಇತರ ವಿಷಯಗಳನ್ನು ಅಭ್ಯಾಸಮಾಡುವುದನ್ನು ನಿರೀಕ್ಷಿಸಲಾಗುತ್ತಿತ್ತು. ವಿಶೇಷವಾಗಿ ರಾಜರು, ರಾಜಕುಮಾರರು, ಮಂತ್ರಿಗಳು ಮತ್ತಿತರ ಗಣ್ಯರು ಜ್ಞಾನದ ಎಲ್ಲ ಶಾಖೆಗಳನ್ನೂ ಚೆನ್ನಾಗಿ ತಿಳಿದಿರಬೇಕೆಂದು ಅಪೇಕ್ಷಿಸಲಾಗುತ್ತಿತ್ತು. ಇದರಿಂದಾಗಿ ಎಲ್ಲ ಜ್ಞಾನಶಾಖೆಗಳನ್ನೂ ಕ್ರಮಬದ್ಧಗೊಳಿಸುವುದು ಆವಶ್ಯಕವೆನಿಸಿತು. ಸಂಸ್ಕೃತದಲ್ಲಿ ಜ್ಞಾನದ ಶಾಖೆಗಳ ಮೇಲೆ ಬೆಳಕು ಬೀರುವ ಅಥವಾ ಒಂದು ವಿಷಯದ ಮೇಲೆ ಅಥವಾ ಜ್ಞಾನಶಾಖೆಯ ಬಗೆಗೆ ವ್ಯಾಪಕ ಮಾಹಿತಿ ಹೊಂದಿರುವ ಸಾಹಿತ್ಯ ಪ್ರಕಾರದ ಪ್ರವೇಶಕ್ಕೆ ಕಾರಣವಾಯಿತು.

ವಿಶ್ವಜ್ಞಾನಕೋಶವನ್ನು ಸಾಮಾನ್ಯವಾಗಿ ಅಕ್ಷರಾನುಕ್ರಮದಲ್ಲಿ ಜೋಡಿಸಲ್ಪಟ್ಟ ಜ್ಞಾನದ ಎಲ್ಲ ಶಾಖೆಗಳ ಬಗೆಗೆ ವ್ಯಾಪಕ ಮಾಹಿತಿಯನ್ನು ಹೊಂದಿರುವ ಸಾಹಿತ್ಯ ಕೃತಿಯೆಂದು ನಿರ್ದೇಶಿಸಲಾಗುತ್ತದೆ. ಅದನ್ನು ಕೆಲವು ನಿರ್ದಿಷ್ಟ ಕಲೆಯ ಅಥವಾ ಜ್ಞಾನವಿಭಾಗದ ಎಲ್ಲ ಶಾಖೆಗಳ ಬಗೆಗಿನ ವಿಸ್ತಾರವಾದ ಮತ್ತು ವ್ಯಾಪಕವಾದ ಮಾಹಿತಿಗಳ ಭಂಡಾರವೆಂದೂ ನಿರ್ದೇಶಿಸಲಾಗುತ್ತದೆ. ಇದರಿಂದ ಜ್ಞಾನದ ಎಲ್ಲ ಶಾಖೆಗಳ ಬಗೆಗೂ ವ್ಯವಸ್ಥಿತವಾಗಿ ಜೋಡಿಸಲ್ಪಟ್ಟ ಮಾಹಿತಿಯನ್ನು ಒದಗಿಸುವ ಕೃತಿ

ಅಥವಾ ಕೃತಿಶ್ರೇಣಿಗಳೆಲ್ಲವೂ ಅಥವಾ ಒಂದು ಕಲೆ ಅಥವಾ ಒಂದು ಜ್ಞಾನಕ್ಷೇತ್ರದ ಬಗೆಗೆ ವ್ಯಾಪಕ ಮಾಹಿತಿ ನೀಡುವ ಕೃತಿಯು ವಿಶ್ವಜ್ಞಾನಕೋಶ ಎಂಬ ಹೆಸರನ್ನು ಪಡೆಯುತ್ತದೆಯೆಂಬುದು ಸ್ಪಷ್ಟವಾಗುತ್ತದೆ. ಇವೆಲ್ಲದರಿಂದಾಗಿ ವಿಶ್ವಜ್ಞಾನಕೋಶವು ಎಲ್ಲ ವಿಷಯಗಳ ಬಗೆಗೆ ಕೆಲವು ವಿಷಯಗಳನ್ನು ಅಥವಾ ಕೆಲವು ವಿಷಯಗಳ ಬಗೆಗೆ ಎಲ್ಲ ವಿಷಯಗಳನ್ನು ತಿಳಿಸುವ ಗುರಿಯನ್ನು ಹೊಂದಿದೆಯೆಂದು ತಿಳಿಯಬಹುದು. ಅದರಂತೆಯೇ, ಪ್ರಾಚೀನ ಭಾರತದ ವಿಸ್ತಾರವಾದ ಆಲೋಚನೆಗಳ ಸಂಕ್ಷಿಪ್ತ ರೂಪವನ್ನು ಪ್ರತಿನಿಧಿಸುವ ಹಲವು ವಿಶ್ವಜ್ಞಾನಕೋಶಗಳನ್ನು ಸಂಸ್ಕೃತದಲ್ಲೂ ಕೆಲವನ್ನು ಇತರ ಭಾಷೆಗಳಲ್ಲೂ ಕಾಣುತ್ತೇವೆ. ಅಂತಹ ಕೃತಿಗಳ ದೇಣಿಗೆಯಲ್ಲಿ ಕರ್ನಾಟಕವು ಅಗ್ರಪಂಕ್ತಿಯಲ್ಲಿ ನಿಲ್ಲುತ್ತದೆ.

ಪ್ರಾಚೀನ ಕಾಲದಿಂದಲೂ ಮೂರು ವರ್ಗದ ಸಂಗ್ರಹಣೆಯನ್ನು ಕಾಣಬಹುದು. ಅವುಗಳೆಂದರೆ, ಕೋಶ (ನಿರುಕ್ತ, ವೈಜಯಂತಿ ಇತ್ಯಾದಿಗಳಂತೆ), ಜ್ಞಾನಕೋಶ (ಸರ್ವದರ್ಶನಸಂಗ್ರಹ ಇತ್ಯಾದಿಗಳಂತೆ) ಮತ್ತು ವಿಜ್ಞಾನಕೋಶ ಅಥವಾ ವಿಶ್ವಕೋಶ (ಬೃಹತ್ ಸಂಹಿತಾ, ಯುಕ್ತಿಕಲ್ಪತರು ಇತ್ಯಾದಿಗಳಂತೆ). ಇವುಗಳಲ್ಲಿ ಕೋಶವು ಶಬ್ದಕೋಶ ಅಥವಾ ಪದಗಳ ಮತ್ತು ಅವುಗಳ ಸಮಾನಾರ್ಥಕ ಪದಗಳ ಸಂಗ್ರಹ. ಜ್ಞಾನಕೋಶವು ಒಂದು ಪ್ರಮುಖ ವಿಷಯ ಮತ್ತು ಅದರ ನೂರಾರು ಶಾಖೆಗಳ ಬಗೆಗೆ ವ್ಯಾಪಕವಾಗಿ ವ್ಯವಹರಿಸುತ್ತದೆ. ಅದನ್ನು ಒಂದು ಮುಖ್ಯವಿಷಯಕ್ಕೆ ಸಂಬಂಧಿಸಿದ ಎಲ್ಲ ವಿವರಗಳ ಸಂಗ್ರಹ ಅಥವಾ ವಿಷಯ ವಿಶ್ವಕೋಶವೆಂದು ಕರೆಯಬಹುದು. ವಿಜ್ಞಾನಕೋಶವು, ಹೆಸರೇ ಸೂಚಿಸುವಂತೆ, ಜ್ಞಾನದ ಎಲ್ಲ ಶಾಖೆಗಳಿಗೂ ಸಂಬಂಧಿಸಿದ ಮಾಹಿತಿಯನ್ನು ಒಳಗೊಂಡಿರುತ್ತದೆ. ಈ ವಿಜ್ಞಾನಕೋಶ ಅಥವಾ ಯಾವುದೇ ಸಾರ್ವತ್ರಿಕ ವಿಶ್ವಜ್ಞಾನಕೋಶದಲ್ಲಿಯೂ ಭಾರತೀಯ ಸಂಸ್ಕೃತಿ, ತತ್ವಶಾಸ್ತ್ರ, ಧರ್ಮ, ವಿಜ್ಞಾನ, ಕಲೆ ಇತ್ಯಾದಿಗಳಿಗೆ ಸಂಬಂಧಿಸಿದ ಸಾರತತ್ವವನ್ನು ಗ್ರಹಿಸಬಹುದು. ಕರ್ನಾಟಕದ ಅಂತಹ ಸಾರ್ವತ್ರಿಕ ವಿಶ್ವಜ್ಞಾನಕೋಶಗಳ ಒಂದು ಸಂಕ್ಷಿಪ್ತ ಅವಲೋಕನವು ಇಂತಹ ಸಾಹಿತ್ಯಪ್ರಕಾರಕ್ಕೆ ಕರ್ನಾಟಕದ ಕೊಡುಗೆಯ ಸಂಖ್ಯಾವಿಸ್ತಾರ ಮತ್ತು ಅಮೂಲ್ಯತೆಗಳ ಬಗೆಗೆ ಬೆಳಕು ಬೀರುತ್ತದೆ.

ಅಭಿಲಷಿತಾರ್ಥ ಚಿಂತಾಮಣಿ ಅಥವಾ ಮಾನಸೋಲ್ಲಾಸ : ಇದು ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಮಗ ಭೂಲೋಕಮಲ್ಲ ಮೂರನೆಯ ಸೋಮೇಶ್ವರನಿಂದ ಸಂಸ್ಕೃತ ಭಾಷೆಯಲ್ಲಿ ರಚಿತವಾದ ಮಹತ್ವದ ವಿಶ್ವಜ್ಞಾನಕೋಶಕೃತಿ. ಇದು ಐದು ವಿಂಶತಿ ಅಥವಾ ಭಾಗಗಳಾಗಿಯೂ ಪ್ರತಿ ವಿಂಶತಿಯಲ್ಲಿ ೨೦ ಅಸಮಾನ ಉದ್ದದ ಅಧ್ಯಾಯಗಳನ್ನುಳ್ಳದ್ದಾಗಿಯೂ ರಚಿತವಾಗಿದೆ. ಇಲ್ಲಿಯ ಕೆಲವು ಅಧ್ಯಾಯಗಳು ಮತ್ತೆ ಹಲವು ಉಪವಿಭಾಗಗಳನ್ನು ಹೊಂದಿವೆ. ಹೀಗೆ ಈ ಕೃತಿಯು ಜನತೆಯ ಮತ್ತು ವಿಶೇಷವಾಗಿ ರಾಜಕುಮಾರರ ಶೀಲಸುಧಾರಣೆಗಾಗಿ ನೂರು ವಿವಿಧ ವಿಷಯಗಳ ಬಗೆಗೆ ನೂರು ಅಧ್ಯಾಯಗಳನ್ನು ಹೊಂದಿದೆ.

ರಾಜ್ಯಪ್ರಾಪ್ತೀಕರಣ ವಿಂಶತಿ ಎಂಬ ಮೊದಲನೆಯ ವಿಂಶತಿಯಲ್ಲಿ ಸಾರ್ವತ್ರಿಕ ನೀತಿಶಾಸ್ತ್ರ, ತನ್ನ ಸಾಮ್ರಾಜ್ಯ ವಿಸ್ತರಣೆಗಾಗಿ ಆಶಿಸುವ ರಾಜನ ಅಪೇಕ್ಷಿತ ಅರ್ಹತೆಗಳು ಮತ್ತು ಅವಶ್ಯಕತೆಗಳನ್ನು ವಿವರಿಸಲಾಗಿದೆ. ಪ್ರಾಪ್ತರಾಜ್ಯಸ್ಥೈರೀಕರಣ ವಿಂಶತಿ ಎಂಬ ಎರಡನೆಯ ವಿಂಶತಿಯಲ್ಲಿ ರಾಜ್ಯಾಡಳಿತವನ್ನು ಕುರಿತು ವಿವರಿಸಲಾಗಿದೆ. ಈ ವಿಭಾಗದಲ್ಲಿ ರಾಜನ ಸ್ಥಾನವನ್ನು ಸುರಕ್ಷಿತವಾಗಿಡಲು ಬೇಕಾಗುವ ವಿಧಿ–ವಿಧಾನಗಳನ್ನು ವಿವರಿಸಲಾಗಿದೆ. ಉಪಭೋಗ ವಿಂಶತಿ ಎಂಬ ಮೂರನೆಯ ವಿಂಶತಿಯಲ್ಲಿ ರಾಜನು ಅನುಭವಿಸಲು ಅರ್ಹವಾದ ಎಲ್ಲ ರೀತಿಯ ಅನುಭೋಗಗಳ ಬಗೆಗೂ ತಿಳಿಸಲಾಗಿದೆ. ಇಲ್ಲಿ ತಿಳಿಸಲಾಗಿರುವ ಹಲವಾರು ಅನುಭೋಗಗಳಲ್ಲಿ ಅರಮನೆಗಳನ್ನು ಹೊಂದುವುದು, ಅನುಲೇಪನ, ಚದುರಂಗ, ಆಭರಣಗಳು, ಮಕ್ಕಳು, ಆಹಾರ, ವಾಹನ ಇತ್ಯಾದಿಗಳೂ ಸೇರಿವೆ. ನಾಲ್ಕನೆಯ ವಿನೋದವಿಂಶತಿಯು ಆಯುಧಗಳ ಕಲಿಕೆ ಮತ್ತು ಬಳಕೆಯಲ್ಲಿಯ ಕೌಶಲ್ಯ, ಆನೆ ಮತ್ತು ಕುದುರೆಗಳನ್ನು ಪಳಗಿಸುವುದು, ಕುಸ್ತಿ, ಹುಂಜದ ಕಾಳಗ, ಮುದ್ದಿನ ಪ್ರಾಣಿಗಳು ಮತ್ತು ಪಕ್ಷಿಗಳ ಪಾಲನೆ, ಕಾವ್ಯ, ಸಂಗೀತ, ನೃತ್ಯ, ಹಾಸ್ಯ ಸಂಭಾಷಣೆ ಇತ್ಯಾದಿ ವಿನೋದಗಳನ್ನು ಕುರಿತದ್ದಾಗಿದೆ. ಕೊನೆಯ ಕ್ರೀಡಾ ವಿಂಶತಿ ಅಧ್ಯಾಯವು ಇಪ್ಪತ್ತು ಬಗೆಯ ಕ್ರೀಡೆಗಳ ಬಗೆಗೆ ವಿವರಣೆ ನೀಡುತ್ತದೆ. ಹೀಗೆ ಗ್ರಂಥಕರ್ತೃವು ಜ್ಞಾನದ ಎಲ್ಲ ಶಾಖೆಗಳನ್ನೂ ವಿಶೇಷವಾಗಿ ಲೌಕಿಕ ಆಸಕ್ತಿಯ

ಎಲ್ಲ ವಿಷಯಗಳನ್ನೂ ಜಾಣತನದಿಂದ ಸಂಗ್ರಹಿಸಿದ್ದಾನೆ. ಈ ಕೃತಿಯು ಎಲ್ಲರಿಗೂ ಉಪಯೋಗವಾಗಬಲ್ಲ (ಶಾಸ್ತ್ರಂ ವಿಶ್ವೋಪಕಾರಕಮ್) ಜ್ಞಾನದ ಗ್ರಂಥವಾಗಿ ಮತ್ತು ಸಾರ್ವತ್ರಿಕ ಗುರು(ಜಗದಾಚಾರ್ಯ ಪುಸ್ತಕ) ವಾಗಿ ಸ್ವಯಂವ್ಯಕ್ತವಾಗುತ್ತದೆ.

ಈ ಕೃತಿಯ ಕಾಲವು ಶಕ ಸು. ೧೦೫೧-೫೨ (ಕ್ರಿ. ಶ. ಸು. ೧೧೨೯-೧೧೩೦) ಇರಬಹುದೆಂದು ತೋರುತ್ತದೆ. ಕೆಳದಿಯ ಬಸವರಾಜನಂತಹ ಇನ್ನೂ ಹಲವಾರು ನಂತರದ ಲೇಖಕರು ತಮ್ಮ ಕೃತಿಗಳಲ್ಲಿ ಅನೇಕ ವಿಷಯಗಳ ಪರಿಶೀಲನೆಗೆ ಅಧಿಕ ಪ್ರಮಾಣದಲ್ಲಿಯೇ ಸೋಮೇಶ್ವರನಿಗೆ ಋಣಿಗಳಾಗಿದ್ದಾರೆ.

**ಲೋಕೋಪಕಾರ :** ಕ್ರಿ. ಶ. ಸು. ೧೦೨೫ರಲ್ಲಿ ಚಾವುಂಡರಾಯನಿಂದ ರಚಿತವಾದ ಈ ವಿಶ್ವಜ್ಞಾನ ಕೋಶವು ಕನ್ನಡ ಭಾಷೆಯಲ್ಲಿದೆ. ಗ್ರಂಥಕರ್ತೃವು ಬ್ರಾಹ್ಮಣನಾಗಿದ್ದು, ಚಾಲುಕ್ಯ ಚಕ್ರವರ್ತಿ ಎರಡನೆಯ ಜಯಸಿಂಹನ ಸೇವೆಯಲ್ಲಿ ಅಧಿಕಾರಿಯಾಗಿದ್ದನೆಂದು ತಿಳಿಯಲಾಗಿದೆ. ಲೋಕೋಪಕಾರವು ಬದುಕಿನ ಕಲೆ ಮತ್ತು ವಿಜ್ಞಾನಗಳ ಕೈಪಿಡಿಯಾಗಿದೆ. ಗ್ರಂಥಕರ್ತೃವು ಗೃಹನಿರ್ಮಾಣ, ವಿವಿಧ ವೃಕ್ಷ, ಪ್ರಾಸಾದನ, ಪಾಕವಿಜ್ಞಾನ, ವಿವಿಧ ಖಾದ್ಯಗಳ ರುಚಿ, ಆಹಾರ ಸಂರಕ್ಷಣೆ, ಜ್ಯೋತಿಷ್ಯಶಾಸ್ತ್ರ, ವೈದ್ಯ ಇತ್ಯಾದಿ ವಿವಿಧ ವಿಷಯಗಳ ಬಗ್ಗೆ ಬರೆದಿದ್ದಾನೆ.

**ಸಾಮ್ರಾಜ್ಯಲಕ್ಷ್ಮೀಪೀಠಿಕಾ :** ಸಾಮಾಜ್ಯಲಕ್ಷ್ಮೀ ಪೀಠಿಕಾ ಅಥವಾ 'ಸಾರ್ವಭೌಮ ಗೆಲುವಿನ ಮೂಲ ತತ್ವಗಳು' ಎಂಬ ಅಜ್ಞಾತಕರ್ತೃವಿನ ಈ ಕೃತಿಯು ಮಹಾಶೈವತಂತ್ರದ ಆಕಾಶಭಾವ್ಯೈವಕಲ್ಪದ ಒಂದು ಭಾಗವಾಗಿದೆ. ಸುಮಾರು ೪೦೦೦ ಸಂಸ್ಕೃತ ಪದ್ಯಗಳಲ್ಲಿ ಕೃತಿಯು, ಒಬ್ಬ ರಾಜಕುಮಾರನು ತನ್ನ ಜಯಕೆಗಳ ಸಾಧನೆಗೆ ಕಲಿಯಬೇಕಾದ ಎಲ್ಲ ವಿಷಯಗಳ ಬಗೆಗೂ ವಿವರಗಳನ್ನು ಹೊಂದಿದೆ. ಪಾಠವು ನಿಕಟವಾಗಿ ಶೈವಾಗಮ ಶೈಲಿಯನ್ನು ಅನುಸರಿಸಿದ್ದು, ಶಿವ-ಪಾರ್ವತಿಯರ ನಡುವೆ ನಡೆದ ಸಂಭಾಷಣಾ ಸ್ವರೂಪದಲ್ಲಿದೆ. ಇದು ರಾಜರುಗಳು ಅಭ್ಯಾಸ ಮಾಡಲೇಬೇಕಾದ ಚಕ್ರವರ್ತಿಗಳ ಕೈಪಿಡಿಯೆಂದು ಜನಾನುರಾಗಿಯಾಗಿದೆ. ಪ್ರಮಾಣಗಳ ಪರಿಶೀಲನೆಯಿಂದ ವಿದ್ವಾಂಸರು ಅಭಿಪ್ರಾಯ ಪಡುವಂತೆ, ಈ ಕೃತಿಯು ಬಹುಶಃ ಕೃಷ್ಣದೇವರಾಯನ (ಕ್ರಿ. ಶ. ೧೫೦೯-೧೫೨೯) ರಾಜಾಶ್ರಯದಲ್ಲಿದ್ದ ಹಾಗೂ ವಿಜಯನಗರದ ಆಸ್ಥಾನದೊಡನೆ ನಿಕಟ ಸಂಪರ್ಕ ಹೊಂದಿದ್ದ ಒಬ್ಬ ವ್ಯಕ್ತಿಯಿಂದ ರಚಿತವಾಗಿರಬೇಕು.

ಸಾಮ್ರಾಜ್ಯಲಕ್ಷ್ಮೀ ಮತ್ತು ಆಕೆಯ ಪರಿವಾರದ ವೈಭವದ ಪಾಸಸ್ಥಾನ, ಜಪ, ಹೋಮ ಇತ್ಯಾದಿ ಪೂಜಾ ವಿಧಾನಗಳೊಂದಿಗೆ ಸಾಮ್ರಾಜ್ಯಲಕ್ಷ್ಮೀಪೀಠಿಕಾ ಕೃತಿಯು ಆರಂಭವಾಗುತ್ತದೆ. ಯುದ್ಧಕಲೆ, ಬಿಲ್ವಿದ್ಯೆ, ಅಶ್ವವಿದ್ಯೆ, ಗಜವಿದ್ಯೆ, ಹಬ್ಬ, ವ್ರತ, ಪೂಜೆ, ಯಾತ್ರೆ, ಶಕುನ, ರಾಜನ ನಿತ್ಯಕರ್ಮ, ಬೇಟೆ, ರಾಜ್ಯಾಧಿಕಾರಿ, ವಾಹನ, ಅರಮನೆ ಇತ್ಯಾದಿಗಳ ಬಗೆಗೂ ಈ ಕೃತಿಯಲ್ಲಿ ವಿವರಗಳಿವೆ. ಸಾಮಾನ್ಯ ಅವಲೋಕನದಿಂದಲೇ ಈ ಕೃತಿಯು ಸಾಮ್ರಾಜ್ಯದ ವಿಸ್ತರಣೆ ಮತ್ತು ನಿರ್ವಹಣೆಯ ದೃಷ್ಟಿಯಿಂದ ವಿವಿಧ ವಿಷಯಗಳ ಬಗೆಗೆ ಮಾಹಿತಿ ಹೊಂದಿರುವ ಒಂದು ವಿಶ್ವಜ್ಞಾನಕೋಶವಾಗಿದೆಯೆಂಬುದನ್ನು ಗ್ರಹಿಸಬಹುದು. ಕರ್ತೃವಿನ ಹೆಸರು ಅಜ್ಞಾತವಾಗಿದ್ದರೂ ವಿದ್ವಾಂಸರು ಈ ಕೃತಿಯಲ್ಲಿ ವಿಜಯನಗರದ ಇತಿಹಾಸದ ಕೆಲವು ಅಂಶಗಳನ್ನು ಗುರುತಿಸಿ, ಇದು ವಿಜಯನಗರದ ಇತಿಹಾಸಕ್ಕೆ ಒಂದು ಆಕರಗ್ರಂಥವಾಗಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಕರ್ತೃವು ರಾಜಾಶ್ರಯ ಪಡೆದಿದ್ದ ಗಣ್ಯನಾಗಿದ್ದನೆಂಬುವುದಕ್ಕೆ ಇದು ನಿದರ್ಶನವಾಗಿದೆ. ಕೃತಿಯ ೨೫ ಅಧ್ಯಾಯಗಳಲ್ಲಿ ವರ್ಣಿಸಲಾಗಿರುವ ನವರಾತ್ರಿಯ ಆಚರಣೆಯ ಸಂದರ್ಭದ ವೈಭವ, ಮೌನನಾಟ್ಯ ಪ್ರದರ್ಶನ, ಬೆಳಕು ಮತ್ತು ಧ್ವನಿಯ ಪ್ರದರ್ಶನ ಇತ್ಯಾದಿ ವಿವರಣಗಳು ವಿಜಯನಗರದ ಕಾಲದಲ್ಲಿ ಅಲ್ಲಿಗೆ ಆಗಮಿಸಿದ್ದ ವಿದೇಶೀ ಪ್ರವಾಸಿಗರ ಅಂತಹುದೇ ವಿವರಣೆಗಳನ್ನು ನೆನಪು ಮಾಡುತ್ತವೆ. ಕೃಷ್ಣದೇವರಾಯನು ನವರಾತ್ರಿಯ ಆಚರಣೆಗೆ ಸಾಂಸ್ಕೃತಿಕ ಮಹತ್ವವನ್ನು ನೀಡಿದ್ದನೆಂಬ ಅಂಶವು ತಿಳಿದುಬರುವುದರಿಂದ ಈ ಕೃತಿಯ ಕರ್ತೃವು ಕರ್ನಾಟಕದ ಮೂಲದವನೆಂಬುದು ಸ್ಪಷ್ಟವಾಗುತ್ತದೆ. ತಂಜಾವೂರಿನ ಸರಸ್ವತೀ ಮಹಲ್ ಗ್ರಂಥಭಂಡಾರದಲ್ಲಿ ಈ ಕೃತಿಯ ಹಲವು ವೈಯಕ್ತಿಕ ಪ್ರತಿಗಳಿದ್ದು, ಅವುಗಳ ಮೇಲೆ ಕೆಲವು ರಾಜಕುಮಾರರ ಹೆಸರುಗಳಿರುವುದರಿಂದ

ಇದನ್ನು ರಾಜಕುಮಾರರು ಅಭ್ಯಾಸ ಮತ್ತು ಅನುಸರಣೆಗಳಿಗೆ ಸದಾ ಒಳಸಿಕೊಳ್ಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಶಿವತತ್ವರತ್ನಾಕರ : ಇದು ಕ್ರಿ.ಶ. ೧೬೯೪ರಿಂದ ೧೭೧೪ರವರೆಗೆ ಕೆಳದಿಯ ರಾಜ್ಯವನ್ನಾಳಿದ ಕರ್ನಾಟಕದ ಪ್ರಖ್ಯಾತ ವಿದ್ವಾಂಸ–ರಾಜ ಒಂದನೆಯ ಬಸವರಾಜನಿಂದ ೧೫,೦೦೦ ಪದ್ಯಗಳನ್ನೊಳಗೊಂಡಂತೆ ಸಂಸ್ಕೃತ ಭಾಷೆಯಲ್ಲಿ ರಚಿತವಾದ ಸೊಗಸಾದ ವಿಶ್ವಜ್ಞಾನಕೋಶ. ಈ ಬೃಹತ್ ಕೃತಿಯಲ್ಲಿ ನಮ್ಮ ಪ್ರಾಚೀನ ಜ್ಞಾನದ ಎಲ್ಲ ಶಾಖೆಗಳೂ ಅಡಕಗೊಂಡಿದ್ದು, ಅಭ್ಯಾಸದ ಪ್ರಮುಖ ವಿಷಯಗಳಾದ ಕಲೆ, ವಾಸ್ತುಶಿಲ್ಪ, ವಿಜ್ಞಾನ, ರಾಜ್ಯಶಾಸ್ತ್ರ, ಕಾನೂನು ಮತ್ತು ನ್ಯಾಯ, ಪಾಠಶಾಸ್ತ್ರ, ಸಾಮಾಜಿಕ ಪದ್ಧತಿ, ಮನರಂಜನೆ, ಧರ್ಮಶಾಸ್ತ್ರ, ತತ್ವಶಾಸ್ತ್ರ ಮತ್ತಿತರ ವಿಷಯಗಳ ಬಗ್ಗೆ ಮಾಹಿತಿ ನೀಡುವ ಉಗ್ರಾಣವೆಂದು ಇದನ್ನು ಪರಿಗಣಿಸಲಾಗಿದೆ. ಇಡೀ ಕೃತಿಯು ೯ ಕಲ್ಲೋಲ(ಭಾಗ)ಗಳಲ್ಲಿ ೧೦೮ ತರಂಗ (ಅಧ್ಯಾಯ)ಗಳನ್ನು ಹೊಂದಿದೆ. ತನಗ ಮತ್ತು ತನ್ನ ಮಗ ಸೋಮಶೇಖರನಿಗೆ ನಡೆದ ಸಂಭಾಷಣೆಯ ರೂಪದಲ್ಲಿ ವಿವಿಧ ವಿಷಯಗಳ ಬಗೆಗಿನ ವಿವರಣೆಗಳನ್ನು ಪುರಾಣದ ಶೈಲಿಯಲ್ಲಿ ಅಳವಡಿಸಿಕೊಂಡಿದ್ದಾನೆ ಕರ್ತೃ. ಕೆಳದಿಯ ವಂಶದ ಇತಿಹಾಸವನ್ನು ಮುಖ್ಯ ಎಳೆಯಾಗಿ ಹಿಡಿದು, ಅದರ ಜೊತೆಗೆ ನೂರಾರು ವಿವಿಧ ವಿಷಯಗಳ ಬಲೆ ಹೆಣೆಯಲಾಗಿದೆ. ಈ ಕೃತಿಯು ರಾಜ್ಯನೀತಿ ಮತ್ತು ಸರ್ಕಾರ, ಕಾನೂನು ಮತ್ತು ಆಡಳಿತ, ನೃತ್ಯ, ಸಂಗೀತ, ಚಿತ್ರಕಲೆ, ನಗರಯೋಜನೆ ಮತ್ತು ವಾಸ್ತುಶಿಲ್ಪ, ದೇವಾಲಯ ನಿರ್ಮಾಣ, ಲಿಂಗ ಸ್ಥಾಪನೆ, ಕಾವ್ಯಶಾಸ್ತ್ರ, ವೈದ್ಯ, ಲೋಹಶಾಸ್ತ್ರ, ವಿಷವೈದ್ಯಶಾಸ್ತ್ರ, ಲವಣಶಾಸ್ತ್ರ (ಹೈಪಾಲಜ), ಗಜಶಾಸ್ತ್ರ, ವಜ್ರವಿಜ್ಞಾನ,ತೋಟಗಾರಿಕೆ, ಬಿಲ್ವಿದ್ಯೆ, ರಾಜಯೋಗ್ಯ ವಿನೋದ,ಸುಗಂಧ, ಶಿಶುರಕ್ಷಣೆ, ಧಾರ್ಮಿಕ ಸಂಸ್ಕಾರ, ವಿಶ್ವಸೃಷ್ಟಿಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಧರ್ಮ, ತತ್ವಶಾಸ್ತ್ರ ಇತ್ಯಾದಿ ಅಸಂಖ್ಯಾತ ವಿವಿಧ ವಿಷಯಗಳನ್ನು ಕುರಿತು ವಿವರಿಸುತ್ತದೆ. ಇವುಗಳಲ್ಲದೆ, ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಸಂಬಂಧಿಸಿದ ಐತಿಹಾಸಿಕ ಅಂಶಗಳು. ವೀರಶೈವ ಶರಣ ಹಾಗೂ ಸುಧಾರಕ ಶ್ರೀ ಬಸವೇಶ್ವರರ ಹುಟ್ಟು, ಬದುಕು ಇತ್ಯಾದಿಗಳನ್ನು ಕುರಿತಂತೆ ಅತ್ಯಂತ ಮೌಲಿಕವಾದ ಮಾಹಿತಿಗಳನ್ನು ಒಳಗೊಂಡಿದೆ. ಇಷ್ಟೇ ಅಲ್ಲದೆ, ಕೆಳದಿ ರಾಜ್ಯದ ಸ್ಥಾಪಕ ಚೌಡಪ್ಪನಿಂದ ಕೃತಿಕಾರ ಒಂದನೆಯ ಬಸವರಾಜನವರೆಗೆ ಕೆಳದಿಯನ್ನು ಆಳಿದ ರಾಜರ ರಾಜಕೀಯ ಚರಿತ್ರೆಗೆ ಸಂಬಂಧಿಸಿದಂತೆಯೂ ಉಪಯುಕ್ತ ಮಾಹಿತಿಯನ್ನು ನೀಡುತ್ತದೆ.

ಶಿವತತ್ವರತ್ನಾಕರದ ರಚನೆಯ ಮುಖ್ಯ ಉದ್ದೇಶವು ರಾಜಕೀಯ ಮತ್ತು ಆಡಳಿತ ಕ್ಷೇತ್ರಗಳಲ್ಲಿ ಕೆಳದಿ ಅರಸರ ಸಾಧನೆಗಳು, ಅವರ ಧರ್ಮಶೀಲತೆ, ದಾನ, ಧಾರ್ಮಿಕ ಸೇವೆ ಇತ್ಯಾದಿಗಳನ್ನು ವ್ಯಕ್ತಪಡಿಸುವುದೇ ಆಗಿತ್ತೆಂದು ತೋರುತ್ತದೆ. ಈ ಅರಸರ ಸಾಧನೆಗಳ ಜೊತೆಗೇ ಕಲೆ, ವಿಜ್ಞಾನ ಇತ್ಯಾದಿ ವಿವಿಧ ವಿಷಯಗಳೂ ಒಂದಲ್ಲ ಒಂದು ರೀತಿಯಲ್ಲಿ ಇಲ್ಲಿ ಅವಕಾಶ ಕಲ್ಪಿಸಿಕೊಂಡಿವೆ. ಇಲ್ಲಿ ವಿಜಯನಗರ ಸಾಮ್ರಾಜ್ಯದ ಮೂಲ ಮತ್ತು ಬೆಳವಣಿಗೆಗಳನ್ನೂ ವಿವರಿಸಲಾಗಿದೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ದಂತಕಥೆಯ ಹಿನ್ನೆಲೆಯಲ್ಲಿ ವಿದ್ಯಾರಣ್ಯರನ್ನೂ ವಿಜಯನಗರ ಸ್ಥಾಪಕರೆಂದೇ ದಾಖಲಿಸಿದೆ ಮತ್ತು ಅನುಕ್ರಮವಾಗಿ ವಿಜಯನಗರ ಅರಸರ ಪಟ್ಟಿಯನ್ನು ನೀಡಲಾಗಿದೆ. ಸ್ವತಹ ನಿಷ್ಠಾವಂತ ವೀರಶೈವನಾದ ಕೃತಿಕಾರನು ಧರ್ಮ ಮತ್ತು ತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಅಧ್ಯಾಯಗಳಲ್ಲಿ ಷಟ್‌ಸ್ಥಲ ಸಿದ್ಧಾಂತ ಮತ್ತು ಸಂಬಂಧಿತ ವಿಷಯಗಳ ಬಗೆಗೆ ವಿವರವಾಗಿ ವಿವರಿಸಿದ್ದಾನೆ. ಕೆಳದಿಯ ಅರಸರು ವೀರಶೈವ ಧರ್ಮಾನುಯಾಯಿಗಳಾದರೂ ದ್ವೈತ, ಅದ್ವೈತ. ಮತ್ತು ಇತರ ತತ್ವಾನುಯಾಯಿಗಳನ್ನೂ ಪ್ರೋತ್ಸಾಹಿಸಿ ಸಹಕರಿಸುತ್ತಿದ್ದರು. ಈ ಕೃತಿಯಲ್ಲಿ ಸಂಪೂರ್ಣವಾಗಿ ಭಾರತೀಯ ಮನಸ್ಸಿನ ಸಂಯೋಜಿತ ಸಹಜ ಪ್ರವೃತ್ತಿಯು ಪ್ರಕಟವಾಗಿದ್ದು, ಎಲ್ಲ ವರ್ಗದ ಜನರ ಅವಶ್ಯಕತೆಗಳನ್ನು ಪೂರೈಸುವಂತಿದೆ. ವಿಶ್ವಜ್ಞಾನಕೋಶದ ಸಾಹಿತ್ಯ ಪ್ರಕಾರಕ್ಕೆ ಬಸವರಾಜನ ಕೊಡುಗೆಯು ಅಪೂರ್ವವೂ ಅಮೂಲ್ಯವೂ ಆದುದು.

ವಿವೇಕಚಿಂತಾಮಣಿ : ಈ ಕೃತಿಯು ಮೈಸೂರಿಗೆ ಸಮೀಪದ ಸ್ಥಳದಲ್ಲಿದ್ದ ಒಬ್ಬ ಮಹಾ ವೀರಶೈವ ಗುರು ನಿಜಗುಣಶಿವಯೋಗಿಯಿಂದ ಗದ್ಯದಲ್ಲಿ ಕನ್ನಡಭಾಷೆಯಲ್ಲಿ ರಚಿತವಾಗಿದೆ. ೧೫ನೆಯ ಶತಮಾನದ ಈ ಕೃತಿಯು ಭಾರತೀಯ ತತ್ವಶಾಸ್ತ್ರ, ಸಂಗೀತ ಇತ್ಯಾದಿ ೭೫೦ಕ್ಕೂ

ಹೆಚ್ಚು ವಿಷಯಗಳನ್ನು ಕುರಿತ ವಿಶ್ವಜ್ಞಾನಕೋಶವೆಂದು ಪರಿಗಣಿತವಾಗಿದೆ. ಹತ್ತು ಭಾಗ ಅಥವಾ ಪರಿಚ್ಛೇದ ಗಳಿರುವ ಈ ಕೃತಿಯು ೧೭ನೆಯ ಶತಮಾನದಲ್ಲಿ ಶಾಂತ ಲಿಂಗ ಶಿವಯೋಗಿಗಳಿಂದ ಮರಾಠೀ ಭಾಷೆಗೆ ಅನುವಾದ ವಾಗಿರುವುದು ಈ ಕೃತಿಯ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಶಿವಪ್ರಕಾಶಸ್ವಾಮಿಗಳಿಂದ ಇದು ತಮಿಳು ಭಾಷೆಗೂ ಅನುವಾದಿತವಾಗಿದೆ. ಕೆಳದಿಯ ಅರಸು ಸೋಮಶೇಖ ರನ ಮಂತ್ರಿಗಳಾಗಿದ್ದ ನಿರ್ವಾಣ ಮಂತ್ರಿ ಮತ್ತು ಲಿಂಗ ರಾಜ ಎಂಬ ವಿದ್ವಾಂಸರು ಈ ಕೃತಿಯನ್ನು ಸಂಸ್ಕೃತ ಭಾಷೆಗೂ ಅನುವಾದಿಸಿದ್ದಾರೆ. ಕೆಳದಿಯ ಅರಸರಿಂದ ವಿವೇಕಚಿಂತಾಮಣಿಯು ಸಂಸ್ಕೃತ ಭಾಷೆಗೂ ಅನು ವಾದಿಸಲ್ಪಟ್ಟಿತ್ತು ಎಂಬ ಅಂಶದಿಂದ ಶಿವತತ್ವರತ್ನಾಕರದ ಕರ್ತೃವನ್ನು ಒಳಗೊಂಡಂತೆ ಕೆಳದಿಯ ಅರಸರು ಅದನ್ನು ಬಹಳ ಅಮೂಲ್ಯವಾಗಿ ಪರಿಗಣಿಸಿದ್ದರೆಂದು ತಿಳಿಯು ತ್ತದೆ. ಇದು ಕರ್ನಾಟಕದ ಅತ್ಯುಚ್ಚ ಸಂಸ್ಕೃತಿಯನ್ನು ಪರಿಚಯಿಸುವ ಮಹಾಮೇರು ಕೃತಿ ಎಂಬುವುದರಲ್ಲಿ ಅನುಮಾನವಿಲ್ಲ.

ಸೌಗಂಧಿಕಾಪರಿಣಯ : ಈ ವಿಶ್ವಜ್ಞಾನ ಕೋಶವು ಕಳೆದ ಶತಮಾನದಲ್ಲಿ ಮೈಸೂರಿನ ಅರಸು ಮುಮ್ಮಡಿ ಕೃಷ್ಣರಾಜೇಂದ್ರರಿಂದ ಕನ್ನಡದಲ್ಲಿ ನಿರೂಪಿತ ವಾಗಿರುವ ಗದ್ಯಗ್ರಂಥ. ದೂರ್ವಾಸರ ಶಾಪದಿಂದ ಕರ್ನಾಟಕದಲ್ಲಿ ಸುಗಂಧರಾಯನಾಗಿ ಹುಟ್ಟಿದ ದೇವೇಂದ್ರ ನಿಗೆ ಸಂಬಂಧಿಸಿದ ಕಥೆಯೇ ಈ ಕೃತಿಯ ಮುಖ್ಯಾಂಶ. ಜೊತೆಗೆ ಧರ್ಮ, ಯೋಗ, ಗಜ ಮತ್ತು ಅಶ್ವಶಾಸ್ತ್ರ, ವಜ್ರಶಾಸ್ತ್ರ, ಬಾವಿ ಮತ್ತು ಕೆರೆಗಳನ್ನು ತೋಡುವುದು, ಶಕುನಗಳು ಇತ್ಯಾದಿ ವಿವಿಧ ವಿಷಯಗಳನ್ನೂ ಕಾಣ ಬಹುದು. ಇದು ಅನೇಕ ಕುತೂಹಲಕಾರೀ ವಿಷಯ ಗಳನ್ನು ಒಳಗೊಂಡಿರುವ ವಿಶ್ವಜ್ಞಾನಕೋಶ ಎಂಬುವುದ ರಲ್ಲಿ ಅನುಮಾನವಿಲ್ಲ. ಈ ಕೃತಿಯು ಇನ್ನೂ ಅಪ್ರಕಟಿತ ವಾಗಿಯೇ ಉಳಿದಿದೆ.

ಸಂಖ್ಯಾರತ್ನಮಾಲಾ : ಇದು ಸೌಗಂಧಿಕಾ ಪರಿಣಯದ ಕರ್ತೃವಾದ ಮುಮ್ಮಡಿ ಕೃಷ್ಣರಾಜೇಂದ್ರರೇ ಸಂಸ್ಕೃತದಲ್ಲಿ ರಚಿಸಿರುವ ವಿಶಿಷ್ಟ ಸ್ವರೂಪದ ವಿಶ್ವ ಜ್ಞಾನಕೋಶವಾಗಿದೆ. ಈ ಪ್ರಪಂಚದಲ್ಲಿ ಏಕ ಅಥವಾ ಬಹುಸಂಖ್ಯೆಯ ಗುಂಪುಗಳ ವಸ್ತುಗಳಿವೆ. ಈ ಕೃತಿಯು ಅವುಗಳೆಲ್ಲವನ್ನೂ ಸಂಖ್ಯಾಕ್ರಮದಲ್ಲಿ ಒಂದೆಡೆ ತಂದಿದೆ. ಆಕಾಶ, ಸೂರ್ಯ ಇತ್ಯಾದಿ ಒಂದೇ ಇರುವ ವಸ್ತುಗಳಿಂದ ಕೃತಿಯು ಆರಂಭವಾಗುತ್ತದೆ. ಅನಂತರ ಆರೋಹಣ ಸಂಖ್ಯಾಕ್ರಮದಲ್ಲಿ ಮುಂದುವರಿದು, ಸಂಗ್ರಹಕಾರನು ೧೨೦ ಸಂಖ್ಯಾ ಗುಂಪಿನ ವಸ್ತುಗಳನ್ನೂ ದಾಖಲಿಸಿದ್ದಾನೆ. ಅಕ್ಷರಾನುಕ್ರಮ ಸೂಚಿಯೊಂದನ್ನೂ ಒದಗಿಸಲಾಗಿದೆ. ವೈದ್ಯ, ಜ್ಯೋತಿಷ್ಯ, ಇತರ ವಿಜ್ಞಾನಗಳು ಇತ್ಯಾದಿ ವಿವಿಧ ವಿಷಯಗಳನ್ನು ಇದು ತನ್ನ ಮಿತಿಯೊಳಗೆ ಅಳ ವಡಿಸಿಕೊಂಡಿದೆ. ಈ ಉಪಯುಕ್ತ ಕೃತಿಯು ಇನ್ನೂ ಪ್ರಕಟವಾಗಿಲ್ಲ.

ಈ ಮೇಲಿನ ವಿವರಣೆಗಳಿಂದ ಭಾರತೀಯ ವಿಶ್ವ ಜ್ಞಾನಕೋಶಗಳ ಸಾಲಿಗೆ ಕರ್ನಾಟಕದ ಕೊಡುಗೆಯು ಅತ್ಯಂತ ಮೌಲಿಕ ಹಾಗೂ ಅನುಪಮವಾದುದು ಎಂಬುದು ಸ್ಪಷ್ಟವಾಗುತ್ತದೆ. ವಿವೇಕಚಿಂತಾಮಣಿ ಯೊಂದನ್ನು ಹೊರತುಪಡಿಸಿ ಉಳಿದ ಎಲ್ಲವೂ ರಾಜರು, ರಾಜಕುಮಾರರು ಮತ್ತು ಗಣ್ಯರಿಂದ ರಚಿತ ಅಥವಾ ಸಂಗ್ರಹಿತವಾಗಿರುವುದೂ ಸ್ಪಷ್ಟವಾಗುತ್ತದೆ. ಇದ ರಿಂದಾಗಿ ಕರ್ನಾಟಕದ ಅನೇಕ ರಾಜಗಣ್ಯರು ಕೇವಲ ಸಾಮ್ರಾಜ್ಯ ವಿಸ್ತರಣೆಗೆ ಮಾತ್ರ ಆಸಕ್ತರಾಗದೆ ಧರ್ಮ ರಕ್ಷಣೆ, ಜನತೆಯ ಉದ್ಧಾರ ಮತ್ತು ಕ್ಷೇಮದ ಬಗೆಗೂ ಆಸಕ್ತರಾಗಿದ್ದರೆಂಬ ಅಂಶವೂ ವ್ಯಕ್ತವಾಗುತ್ತದೆ. ಕರ್ನಾಟಕವು ಅಧಿಕ ಸಂಖ್ಯೆಯಲ್ಲಿ ವಿಶ್ವಜ್ಞಾನಕೋಶಕೃತಿ ಗಳ ಕಾಣಿಕೆ ನೀಡಿರುವುದರಿಂದ ಇದು ವಿಶ್ವಜ್ಞಾನಕೋಶ ಗಳ ತವರು ಎನ್ನುವುದರಲ್ಲಿ ಅನುಮಾನವಿಲ್ಲ. ಪ್ರಾಮಾ ಣಿಕ ಪ್ರಯತ್ನದಿಂದ ಇನ್ನೂ ಹಸ್ತಪ್ರತಿಯ ರೂಪದಲ್ಲೇ ಅಜ್ಞಾತವಾಗಿ ಉಳಿದಿರುವ ಕರ್ನಾಟಕದ ಅಂತಹ ಕೃತಿ ಗಳ ಶೋಧನೆಯೂ ಆಗಬೇಕಾಗಿದೆ.

(ಕನ್ನಡಾನುವಾದ/ಎಚ್. ಎಸ್. ಗೋಪಾಲರಾವ್)

ಪಿ. ವಿ. ಕೃಷ್ಣಮೂರ್ತಿ

# ಕೆಂಪೇಗೌಡನ ಜಯಪ್ರಶಸ್ತಿ : ಒಂದು ಚಾರಿತ್ರಿಕ ಪರಿಶೀಲನೆ

ವಿಜಯನಗರ ಸಾಮ್ರಾಜ್ಯದ ಚರಿತ್ರೆಯೊಡನೆ ಅದರ ಸಮಕಾಲೀನ ರಾಜ್ಯಗಳು ಅವಿರತ ಚಾರಿತ್ರಿಕ ಸಂಬಂಧ ಹೊಂದಿದ್ದವೆಂಬುದು ಸ್ಪಷ್ಟ. ಇವುಗಳಲ್ಲಿ ಎಲಹಂಕ ವಂಶದ ಗೌಡಪ್ರಭುಗಳ ರಾಜ್ಯವು ವಿಜಯನಗರ ಸಾಮ್ರಾಜ್ಯಕ್ಕೆ ಗಮನಾರ್ಹ ಸೇವೆ ಸಲ್ಲಿಸಿದೆ. ಈ ಗೌಡಪ್ರಭುಗಳ ಇತಿಹಾಸವನ್ನು ತಿಳಿಯುವಲ್ಲಿ ಸಹಾಯಕವಾಗುವ ಸಾಹಿತ್ಯಕೃತಿಗಳಲ್ಲಿ 'ಕೆಂಪೇಗೌಡನ ಜಯಪ್ರಶಸ್ತಿ'ಯು ಪ್ರಮುಖವಾದುದು.

ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ರಚಿತವಾದ ಅಜ್ಞಾತ ಕವಿಯೋರ್ವನ ಕೃತಿಯೇ ಈ 'ಕೆಂಪೇಗೌಡನ ಜಯಪ್ರಶಸ್ತಿ'. ಇದು ಎರಡು ಭಾಗಗಳನ್ನು ಒಳಗೊಂಡಿದ್ದು, ಬೇರೆ ಬೇರೆ ಕಾಲದ ಎರಡು ಬೇರೆ ಬೇರೆ ಘಟನಾವಳಿಗಳನ್ನು ಚಿತ್ತರಿಸುತ್ತದೆ. ಶ್ರೀ ಕರ್ಲಮಂಗಲಂ ಶ್ರೀಕಂಠಯ್ಯನವರು ಮೈಸೂರು ಪ್ರಾಚ್ಯ ಸಂಶೋಧನಾಲಯದ ಕೆ. ಬಿ. ೨೮೧ ಎಂಬ ಹಸ್ತಪ್ರತಿಯ ಆಧಾರದ ಮೇಲೆ ಈ ಕೃತಿಯನ್ನು ಸಂಪಾದಿಸಿ 'ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ' (ಬೆಂಗಳೂರು, ೧೯೬೧) ಎಂಬ ಹೆಸರಿನಲ್ಲಿ ಪ್ರಕಟಿಸಿರುತ್ತಾರೆ.[1] ಈ ಕೃತಿಯ ಹಲವಾರು ಹಸ್ತಪ್ರತಿಗಳು 'ಇಮ್ಮಡಿ ತಮ್ಮರಾಯ ಕೆಂಪರಾಯನ ಪದಗಳು', 'ಇಮ್ಮಡಿ ಕೆಂಪರಾಯನ ಪದಗಳು', 'ಕೆಂಪರಾಯನ ಜಯಸ್ತುತಿ' ಇತ್ಯಾದಿ ಹೆಸರುಗಳಿಂದ ಕೂಡಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ[2] ಮತ್ತು ಮದ್ರಾಸಿನ ಪ್ರಾಚ್ಯಸಂಶೋಧನಾಲಯಗಳ[3] ಸಂಗ್ರಹಗಳಲ್ಲಿರುವುದು ಕಂಡುಬರುತ್ತದೆ. ಆರ್,

1. ತಮ್ಮ ಮನೆಯಲ್ಲಿದ್ದ ಹಸ್ತಪ್ರತಿಯ ಹಾಳೆಯೊಂದರಲ್ಲಿ ಪ್ರಸ್ತುತ ಕೃತಿಯ ಹೆಸರು 'ಕೆಂಪೇಗೌಡನ ಜಯಪ್ರಶಸ್ತಿ' ಎಂದಿದ್ದುದರಿಂದ, 'ಗೌಡಕುಲ ವಿಭೂಷಣ' ಎಂಬ ವಿಶೇಷಣವನ್ನು ಅದಕ್ಕೆ ಸೇರಿಸಿ ಪ್ರಕಟಿಸಿರುವುದಾಗಿ ಈ ಕೃತಿಯ ಸಂಪಾದಕರು ಹೇಳಿರುತ್ತಾರೆ (ಮುನ್ನುಡಿ, ಪು. ೭೨). ಅಲ್ಲದೆ, ಅವರು ಸಂಪಾದನೆಗೆ ಬಳಸಿಕೊಂಡಿರುವ ಮೈಸೂರಿನ ಹಸ್ತಪ್ರತಿಯಲ್ಲಿ 'ಕೆಂಪೇಗೌಡನ ಜಯಸ್ತುತಿ' ಎಂದಿರುವುದರಿಂದಲೂ (ಬೇರೆ ಹಸ್ತಪ್ರತಿಗಳಲ್ಲೂ ಭಿನ್ನವಾದ ನಾಮಾಂಕಿತವಿದ್ದಾಗ್ಯೂ) ಕೃತಿಯಲ್ಲಿ ಪ್ರತಿಪಾದಿತವಾಗಿರುವ ವಿಷಯದೃಷ್ಟಿಯಿಂದ ಈ ಹೆಸರು ಅನ್ವರ್ಥವಾಗಿರುವುದರಿಂದಲೂ ಸಂಪಾದಕರು ಅನುಸರಿಸಿರುವ ಹೆಸರನ್ನೇ ನಾವು ಇಲ್ಲಿ ಸ್ವೀಕರಿಸಿದ್ದೇವೆ.
2. ಕೆ. ೩೭೪/೨, ಕೆ. ೫೧೪/೪, ಕೆ. ೮೪೫/೩—ಈ ಸಂಖ್ಯೆಗಳನ್ನುಳ್ಳ ಮೂರೂ ಹಸ್ತಪ್ರತಿಗಳನ್ನು ತಿಪ್ಪಯ್ಯನ ಮಗ ವೆಂಕಟಯ್ಯನೆಂಬುವನು ಪ್ರತಿಮಾಡಿರುವುದಾಗಿ ತಿಳಿದುಬರುತ್ತದೆ. ಕೆ. ೮೪೫/೨ ಮತ್ತು ಕೆ. ಬಿ. ೨೮೧ ಎಂಬುವು ಇನ್ನುಳಿದ ಎರಡು ಹಸ್ತಪ್ರತಿಗಳಾಗಿವೆ–ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಮೈಸೂರು ವಿಶ್ವವಿದ್ಯಾನಿಲಯ, ಸಂಪುಟ ೧ ಮತ್ತು ೫.
3. ೧೨೬೪, ೧೨೬೫ ಮತ್ತು ೧೨೬೬ ಎಂಬ ಸಂಖ್ಯೆಗಳನ್ನುಳ್ಳ ಮೂರು ಹಸ್ತಪ್ರತಿಗಳಿದ್ದು, ಅವುಗಳ ಲಿಪಿಗಾರ ವೆಂಕಟರಾಯನೆಂದು ತಿಳಿದುಬರುತ್ತದೆ.

ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯ ಎರಡನೆಯ ಸಂಪುಟದಲ್ಲಿ 'ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳು' ಎಂಬ ಶೀರ್ಷಿಕೆಯಡಿಯಲ್ಲಿ 'ಇಮ್ಮಡಿ ತಮ್ಮರಾಯ ಕೆಂಪರಾಯನ ಪದಗಳು' ಎಂತಲೇ ಇದನ್ನು ಗುರುತಿಸಿರುತ್ತಾರೆ.[4]

ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿರುವ ಶ್ರೀ ಕೆರ್ಲಮಂಗಲಂ ಶ್ರೀಕಂಠಯ್ಯನವರು, 'ಜಯಪ್ರಶಸ್ತಿ'ಯ ಕರ್ತೃ ಗುಮ್ಮಳಾಪುರದ ಗುರುನಂಜೇಶನೆಂದೂ ಆತನು ಶಿವದ್ವಿಜ ಬ್ರಾಹ್ಮಣನೆಂದೂ ಅಭಿಪ್ರಾಯ ಪಟ್ಟಿರುತ್ತಾರೆ.[5] ವಾಸ್ತವವಾಗಿ, ಅವರ ಈ ಅಭಿಪ್ರಾಯಕ್ಕೆ ದೃಢವಾದ ಆಧಾರಗಳೇನೂ ಇರುವುದಿಲ್ಲ. ಈ ಕೃತಿಯಲ್ಲಿ ಗುರುನಂಜೇಶನ ಹೆಸರು ಪ್ರಸ್ತಾಪಿಸಲ್ಪಟ್ಟಿದೆಯಾದರೂ ಅದು ಇಮ್ಮಡಿ ಕೆಂಪೇಗೌಡನ ಗುರು ಎಂಬ ಅರ್ಥದಲ್ಲಿಯೇ ಇದೆಯೆಂಬುದು ಸ್ಪಷ್ಟವಾಗಿಯೇ ಇದೆ. ಗುರುನಂಜೇಶನು ನಿರ್ವಿವಾದವಾಗಿಯೂ ಕೆಂಪೇಗೌಡನಿಗೆ ಗುರುವಿನ ಸ್ಥಾನದಲ್ಲಿದ್ದನೆಂಬುದನ್ನು ಗುಮ್ಮಳಾಪುರ ಗ್ರಾಮದ ಕ್ರಿ. ಶ. ೧೬೦೬ರ ಶಾಸನದಲ್ಲಿಯ[6] "ಎಲಹಂಕನಾಡ ಪ್ರಭುವಾದ ಕೆಂಪೇಗೌಡನು ಭಾರದ್ವಜ ಗೋತ್ರದ ಪರಿವಿಡಿ–ವರ್ಗದ ಕೊಲ್ಲಿಪಾಕಿ ರೇವಣ್ಣ ಸಿದ್ಧೇಶ್ವರ ಸಂಪ್ರದಾಯಸ್ಥರಾದ ಗುಂಮಳಾಪುರದ ಸಿಂಹಾಸನಕ್ಕೆ ಕರ್ತರಾದ ನಂಜೇದೇವರು ಅಯ್ಯನವರು ಪೌತ್ರರಾದ ಚೆನ್ನಮಲ್ಲಿಕಾರ್ಜುನದೇವರ ಪುತ್ರರಾದ ನಂಜೇದೇವಪ್ಪ ಅಯ್ಯನವರು" ಎಂಬ ಉಲ್ಲೇಖವು ಸಮರ್ಥಿಸುತ್ತದೆ ; ಕೆಂಪೇಗೌಡನು ಈತನಲ್ಲಿ ಭಕ್ತಿಯುಳ್ಳವನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಸುತ್ತ 'ಜಯಪ್ರಶಸ್ತಿ'ಯಲ್ಲಿ ಉಕ್ತನಾಗಿರುವ ಗುರುನಂಜೇಶನೇ ಈ ಶಾಸನದ ನಂಜೇದೇವಪ್ಪ ಅಯ್ಯನವರು. ಈತನು ಇಮ್ಮಡಿ ಕೆಂಪೇಗೌಡನಿಗೆ ಮಾತ್ರವಲ್ಲದೆ, ಸಮಕಾಲೀನ ಹೊಸಕೋಟೆಯ ಪಾಳೆಯಗಾರನಾದ ಸುಗಟೂರು ಮುಮ್ಮಡಿ ತಮ್ಮೇಗೌಡನಿಗೂ ಗುರುವಿನ ಸ್ಥಾನದಲ್ಲಿದ್ದನೆಂಬುದನ್ನು ಆನೇಕಲ್ ತಾಲ್ಲೂಕಿನ ಸರ್ಜಾಪುರದ ಶಾಸನ[7] ಮತ್ತು ಕೋಲಾರ ತಾಲ್ಲೂಕಿನ ಗರುಡನಹಳ್ಳಿ ಶಾಸನಗಳು[8] ಸ್ಪಷ್ಟಪಡಿಸುತ್ತವೆ. ಆದ್ದರಿಂದ ಗುರುನಂಜೇಶನು ಈ ಕೃತಿಯ ಕರ್ತೃ ಅಲ್ಲ ; ಕೆಂಪೇಗೌಡನ ಗುರು ಹಾಗೂ ವೀರಶೈವ ಧರ್ಮೀಯ. ಒಟ್ಟಾರೆ, 'ಜಯಪ್ರಶಸ್ತಿ'ಯ ಕರ್ತೃ ಯಾರೆಂಬುದು ಮಾತ್ರ ಪ್ರಶ್ನೆಯಾಗಿಯೇ ಉಳಿಯುತ್ತದೆ.

ಈ ಮೊದಲೇ ಹೇಳಿರುವಂತೆ, ಪ್ರಸ್ತುತ ಕೃತಿಯಲ್ಲಿ ಎರಡು ಭಾಗಗಳಿದ್ದು, ಇವು ಬೇರೆ ಬೇರೆ ಕಾಲಗಳಲ್ಲಿ ರಚನೆಯಾಗಿರುತ್ತವೆ. ಮೊದಲ ಭಾಗದಲ್ಲಿ ಉಕ್ತವಾಗಿರುವ ಈ ಕೃತಿಯ ಘಟನಾವಳಿಗಳನ್ನು ಈ ರೀತಿ ಸಂಗ್ರಹಿಸಬಹುದು :

ಮಂಡಲಪತಿ ವೆಂಕಟಪತಿರಾಯನ ಭುಜದಂಡ, ಸ್ವಾಮಿದ್ರೋಹರಗಂಡ ಎಂಬ ಬಿರುದುಗಳನ್ನು ಧರಿಸಿ ಕಾಲ್ಪೆಂಡೆಯನ್ನು ಪಡೆದು ಚಿಕ್ಕರಾಯನೆನಿಸಿದ್ದ ಇಮ್ಮಡಿ ತಮ್ಮನ ಸಖ್ಯದಲ್ಲಿ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನಿದ್ದನು. ಇಮ್ಮಡಿ ತಮ್ಮೇಗೌಡನು ಖಂಡೇಂದುಧರನಡಿಗೆ ಸೇರಿಕೊಳ್ಳಲು, ಆತನ ರಾಜ್ಯ, ಭಂಡಾರ, ಬೊಕ್ಕಸ, ಆನೆ, ಕುದುರೆ ಮುಂತಾದುವುಗಳನ್ನೆಲ್ಲಾ ಅಯ್ಯಮಗೌಡನೆಂಬುವನು ಕಸಿದುಕೊಂಡು ದುರ್ಗಗಳನ್ನು ಹಿಡಿದುಕೊಂಡನು. ಕೆಂಪೇಗೌಡನು ರಾಯಭಾರಿಗಳ ಮೂಲಕ ನಡಿಸಿದ ಸಂಧಾನ ವಿಫಲವಾಯಿತು. ಅದರಿಂದ ಕೋಪಗೊಂಡ ಕೆಂಪೇಗೌಡನು ತನ್ನ ಸೈನ್ಯದೊಂದಿಗೆ ಹೋಗಿ ಕೋಳಾಲ, ಬಲಗೊಂಡನಹಳ್ಳಿ, ಬೇಟೆರಾಯನಗುಡಿ ಮುಂತಾದ ದುರ್ಗಗಳನ್ನು ಹಿಡಿದು

---

4. ಕರ್ಣಾಟಕ ಕವಿಚರಿತೆ, ಸಂಪುಟ ೨, ಬೆಂಗಳೂರು, ೧೯೭೩, ಪು. ೫೬೩
5. ಪೂರ್ವೋಕ್ತ ಗ್ರಂಥ, ಮುನ್ನುಡಿ, ಪು. ೨
6. ತಮ್ಮ ಸ್ವಂತ ಸಂಗ್ರಹದಲ್ಲಿದ್ದ ಈ ಅಪ್ರಕಟಿತ ಶಾಸನದ ವಿವರಗಳನ್ನು ಗುರುಗಳಾದ ಶ್ರೀ ದೇವರಕೊಂಡಾರೆಡ್ಡಿಯವರು ನೀಡಿ ಉಪಕರಿಸಿರುತ್ತಾರೆ. ಬೆಂಗಳೂರು ಜಿಲ್ಲೆಯ ಆನೇಕಲ್‌ನಿಂದ ದಕ್ಷಿಣಕ್ಕೆ ಸುಮಾರು ೮ ಕಿ.ಮೀ. ದೂರದಲ್ಲಿರುವ ಈ ಗುಂಮಳಾಪುರವು, ಈಗ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿಗೆ ಸೇರಿದ ಗ್ರಾಮವಾಗಿದೆ.
7. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೯, ಆನೇಕಲ್ ೧೦, ಸರ್ಜಾಪುರ, ಕ್ರಿ.ಶ. ೧೬೨೯
8. ಅದೇ, ಸಂಪುಟ ೧೦, ಕೋಲಾರ ೬೪, ಗರುಡನಹಳ್ಳಿ, ಕ್ರಿ.ಶ. ೧೬೧೫

ಕೊಂಡು ಹೊಸಕೋಟೆಗೆ ಮುತ್ತಿಗೆ ಹಾಕಿದನು. ವೈರಿಗಳನ್ನು ಓಡಿಸಿ, ಹಗೆಗಳಿಗೆ ಕೋಟಲೆಯನ್ನು ಕಾಣಿಸಿ ಅವರನ್ನು 'ಒಂದು ಮೂಲೆಯಾಟ'ವ[9] ಆಡಿಸಿದನು. ಇದರಿಂದ ಭೀತಿಗೊಂಡ ಅಯಮಗೌಡ ತನ್ನ ಮಂತ್ರಿಜನರೊಂದಿಗೆ ಸಮಾಲೋಚಿಸಿ ಎದುರಾಳಿಯಾದ ಕೆಂಪೇಗೌಡನನ್ನು ಎದುರಿಸಲು ಅಧಿಕ ಬಲ ಬೇಕೆಂಬ ನಿರ್ಧಾರಕ್ಕೆ ಬಂದು, ಅದಕ್ಕಾಗಿ ಪೆನುಗೊಂಡೆಗೆ ಹೋಗಿ ಬೆಲೆಯುಳ್ಳ ಉಡುಗೊರೆಗಳನ್ನು ರಾಯನಿಗೆ ಕೊಟ್ಟು ಆತನನ್ನು ಒಪ್ಪಿಸಿ ಅಭಯವನ್ನು ಪಡೆದನು. ಹೀಗಾಗಿ ವೆಂಕಟಪತಿರಾಯ ಅಯ್ಯಮಗೌಡನ ಪರವಾಗಿ ಅನೇಕ ವೀರರನ್ನು ಕೂಡಿಕೊಂಡು ಯುದ್ಧಸನ್ನದ್ಧನಾಗಿ ಬಲ್ಲಾಳಪುರದ ಮೂಡಗಡೆಯಲ್ಲಿ ಪಾಳೆಯವಿಳಿದು, ಅಲ್ಲಿಂದ ಸುತ್ತಮುತ್ತಲ ಪಾಳೆಯಗಾರರನ್ನೆಲ್ಲಾ ಕೂಡಿಕೊಂಡು ಹೊಸಕೋಟೆಯ ಬಡಗ ದಿಕ್ಕಿನಲ್ಲಿ ಕೆಂಪೇಗೌಡನ ಸೈನ್ಯವನ್ನು ಎದಿರುಗೊಳ್ಳುತ್ತಾನೆ. ಆಗ ಕೆಂಪೇಗೌಡನ ಸೈನಿಕರು ಅವರೊಂದಿಗೆ ಘೋರ ಹೋರಾಟವನ್ನು ನಡಿಸಿ ಅವರಿಗೆ ಭೀತಿಯನ್ನುಂಟುಮಾಡುತ್ತಾರೆ. ಜೀವವಿದ್ದರೆ ಹಾಡಿಕೊಂಡುಣ್ಣಬಹುದೆಂದು ವೆಂಕಟಪತಿರಾಯನನ್ನು ದೂರದಲ್ಲೇ ಬಿಟ್ಟು ಓಡಿಹೋಗುತ್ತಾರೆ. (ವೆಂಕಟಪತಿರಾಯ ಅಲ್ಲಿಂದಲ್ಲೇ ಪೆನುಗೊಂಡೆಗೆ ಹಿಂತಿರುಗುತ್ತಾನೆ). ಈ ಸಂದರ್ಭವನ್ನು ಗಮನಿಸಿದ ಕೆಂಪೇಗೌಡ ತನ್ನ ಸೈನಿಕರೊಂದಿಗೆ ಕೋಟೆಯನ್ನು ಮುತ್ತಿ ಅಯಮಗೌಡ ಮತ್ತು ಅನುಯಾಯಿಗಳನ್ನು ಕೊಲ್ಲುತ್ತಾನೆ. ಈ ಕಾರ್ಯವು ಪರಿಧಾವಿ ಸಂವತ್ಸರದ ಕಾರ್ತಿಕ ಶುದ್ಧ ಏಕಾದಶಿ ಭಾನುವಾರದಂದು (೨೫ನೇ ಭಾನುವಾರ–ಅಕ್ಟೋಬರ್ ೧೬೧೨) ನಡೆಯಿತು. ಕೆಂಪೇಗೌಡನು ಕೂಡಲೇ ಧರ್ಮಕಹಳೆಯನ್ನು ಊದಿಸಿ, ಸೆರೆಸಿಕ್ಕಿದ ಢಾಳು, ಡಮಾಮಿ, ಅಂದಳ, ಕೊಡೆ, ಚಾಮರ, ಪಲ್ಲಕ್ಕಿ, ಆನೆ, ಕುದುರೆ ಸೆರೆಯಾಳುಗಳನ್ನು ಕೂಡಿ ಹೊಸಕೋಟೆಯನ್ನು ಸಾಧಿಸುತ್ತಾನೆ.

ಹೀಗೆ ಹೊಸಕೋಟೆಯನ್ನು ಸಾಧಿಸಿ ಸುಖವಾಗಿರುವಾಗ ಈ ಸುದ್ದಿಯನ್ನು (ಪ್ರಾಯಶಃ ಕೆಂಪೇಗೌಡನ ವೈರಿಯಾದ ದೊಡ್ಡಬಳ್ಳಾಪುರದ ಬೈರೇಂದ್ರನ ಮೂಲಕ) ಕೇಳಿ ತಿಳಿದುಕೊಂಡ ಮಂಡಲಪತಿ ವೆಂಕಟಪತಿರಾಯನು ಪೆನುಗೊಂಡೆಯಿಂದ ಕುಮಾರರಾಯನೆಂಬುವನೊಂದಿಗೆ, ಅನಂತರಾಜ, ಮಾಕರಾಜ, ಯಾಚಮನಾಯಕ, ಜಗ್ಗರಾಯ, ಜಗದೇವರಾಯ, ತಿಮ್ಮೇಂದ್ರ, ಸೀರ್ಯದ ರಂಗಪ್ಪ, ಇಮ್ಮಡಿ ಭೈರ, ಪಟ್ಟದ ದಳವಾಯಿ ಚುಂಚಣ್ಣ ಮೊದಲಾದ ರಣಕಲಿಗಳಿಂದ ಕೂಡಿದ ಸಜ್ಜಾದ ಸೈನ್ಯದೊಂದಿಗೆ ಬೆಂಗಳೂರನ್ನು ಮುತ್ತಲು ಕಳುಹಿಸುತ್ತಾನೆ. ಅವರು ಬೆಂಗಳೂರಿಗೆ ತುಸು ದೂರದಲ್ಲಿ ಠಾಣ್ಯವಿಳಿಯುತ್ತಾರೆ. ಇದನ್ನು ಕಂಡ ಕೆಂಪೇಗೌಡನು ಕೂಡಲೇ ಯುದ್ಧಸನ್ನದ್ಧನಾಗಿ ಅವರೊಂದಿಗೆ ಭೀಕರ ಕಾಳಗವನ್ನು ನಡೆಯಿಸುತ್ತಾನೆ. (ಈ ಯುದ್ಧದ ಅದ್ಭುತವರ್ಣನೆ ಈ ಭಾಗದ ೧೪ನೇ ಪದ್ಯದಲ್ಲಿ ಪಡಿಮೂಡಿದೆ). ಯುದ್ಧವು ಭೀಕರವಾಗಿ ನಡೆದು ಜಯವು ಕೆಂಪೇಗೌಡನದಾಗ ತೊಡಗಿದಾಗ, ಭೀತರಾದ ದೊರೆಮನ್ನೆಯರೆಲ್ಲ ಏಕಾಂತದಲ್ಲಿ ಸೇರಿ, ತಾವು ಹಿಂದುಮುಂದು ನೋಡದೆ ಇಲ್ಲಿಗೆ ಬಂದದ್ದು ತಪ್ಪಾಯಿತೆಂದು, ಅನ್ಯಾಯವಾಗಿ ತಮ್ಮ ಆನೆ, ಕುದುರೆ, ಜನಗಳನ್ನು ಕಳೆದುಕೊಂಡೆವೆಂದು, ತಾವು ಹೇಗೋ ಇಲ್ಲಿಂದ ಜೀವದೊಂದಿಗೆ ಪಾರಾದರೆ ಸಾಕು ಎಂದು ಮುಂತಾಗಿ ಆಲೋಚಿಸಿ, ರಾಜದೂತರ ಮೂಲಕ ಉಡುಗೊರೆ, ವಿನಯಪತ್ರ ಹಾಗೂ ಕಾಣಿಕೆಗಳನ್ನು ಕಳುಹಿಸಿ ರಾಜಿಮಾಡಿಕೊಂಡು ರಣರಂಗದಿಂದ ಹಿಂದೆಗೆಯುತ್ತಾರೆ.

---

9. ಇದು ಗ್ರಾಮಾಂತರ ಪ್ರದೇಶಗಳಲ್ಲಿ ಗಂಡುಮಕ್ಕಳು ಬೆಳದಿಂಗಳ ರಾತ್ರಿಯಲ್ಲಿ ಆಡುವ ಒಂದು ಬಗೆಯ ಆಟ ಎಂದು ತೋರುತ್ತದೆ. ಒಂದು ದೊಡ್ಡ ಚೌಕವನ್ನು ನಾಲ್ಕು ಸಮ ಚೌಕಗಳಾಗಿ ವಿಂಗಡಿಸಿ, ಆಟಗಾರನು + ಆಕಾರದ ಪಥದಲ್ಲಿ ಮಾತ್ರ ಚಲಿಸಿ, ನಾಲ್ಕೂ ಚೌಕಗಳಲ್ಲಿರುವ ಎದಿರಾಳಿಗಳನ್ನು ಸ್ಪರ್ಶಿಸಬೇಕು. ಸಾಧ್ಯವಾದಮಟ್ಟಿಗೆ ನಾಲ್ಕೂ ಚೌಕಗಳಲ್ಲಿ ಚದುರಿಹೋಗಿರುವ ಎದಿರಾಳಿಗಳನ್ನು ತುಂಬ ಚಾಕಚಕ್ಯತೆಯಿಂದ ಯಾವುದಾದರೂ 'ಒಂದು ಮೂಲೆ' ಚೌಕಕ್ಕೆ ಸೇರುವಂತೆ ಮಾಡಿ, ಅವರು ಯಾವ ಕಡೆಯೂ ಚಲಿಸದಂತೆ ತಡೆದು ಎದುರಿಸುವ ಈ ಆಟವು ತುಂಬ ಮೋಜಿನದಾಗಿರುತ್ತದೆ.

ಈ ರೀತಿ ಯುದ್ಧಗಳಲ್ಲಿ ಹೋರಾಡಿ ಶತ್ರುರಾಜರನ್ನು ಗೆದ್ದ ಕೆಂಪೇಗೌಡನು ಅಧಿರಾಜನನ್ನು ಮೆಚ್ಚಿಸಿದನು ಮತ್ತು ಮುಮ್ಮಡಿ ತಮ್ಮೇಗೌಡನಿಗೆ ಪುನರ್‌ಸಂಸ್ಥಾನವನ್ನುಂಟು ಮಾಡಿದನು.

ಚಾರಿತ್ರಕವಾಗಿ ಈ ವಿವರಗಳನ್ನು ಗಮನಿಸಿದರೆ, ಇಲ್ಲಿ ಉಲ್ಲೇಖವಾಗಿರುವ ಪರಿಧಾವಿ ಸಂವತ್ಸರವು ಕ್ರಿ.ಶ. ೧೬೧೨ಕ್ಕೆ ಸರಿಹೊಂದುತ್ತದೆ ಮತ್ತು ಇಮ್ಮಡಿ ಕೆಂಪೇಗೌಡನ ಆಡಳಿತದ ೧೫ನೇ ವರ್ಷವನ್ನು ದಾಖಲಿಸುತ್ತದೆ. ಆಗ ಪೆನುಗೊಂಡೆಯಲ್ಲಿ ಅರಸನಾಗಿದ್ದವನು ಇಮ್ಮಡಿ ವೆಂಕಟಪತಿರಾಯ (ಕ್ರಿ. ಶ. ೧೫೮೬–೧೬೧೪). ಇಲ್ಲಿ ಉಕ್ತನಾಗಿರುವ ಇಮ್ಮಡಿ ತಮ್ಮೇಗೌಡನು ಹೊಸಕೋಟೆಯ ಪಾಳೆಯಗಾರನಾದ ಸುಗಟೂರು ವಂಶದ ದೊರೆಯೇ ಆಗಿದ್ದಾನೆ. ಇವನ ಕಾಲದಲ್ಲೇ ಈ ವಂಶಕ್ಕೆ ಸೇರಿದ ಅಯಮ/ಅಯಪಗೌಡ ಎಂಬವರನ್ನು ಉಲ್ಲೇಖಿಸುವ ಕೆಲವು ಶಾಸನಗಳಿವೆ.[10] ಇಲ್ಲಿಯ ಅಯಮಗೌಡನು ಸುಗಟೂರು ವಂಶದವನೇ ಆದ ತಮ್ಮೇಗೌಡನ ದಾಯಾದಿ.[11]

ಇನ್ನು ಇಲ್ಲಿ ಉಕ್ತವಾಗಿರುವ ದುರ್ಗಗಳಲ್ಲಿ ಕೋಳಾಲ (ಈಗಿನ ಕೋಲಾರ), ಬಲಗೊಂಡನಹಳ್ಳಿ (ಆನೇಕಲ್ ತಾಲ್ಲೂಕಿ ಸರ್ಜಾಪುರ) ಮತ್ತು ಹೊಸಕೋಟೆ (ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅದೇ ಹೆಸರಿನ ತಾಲ್ಲೂಕು ಕೇಂದ್ರ) ಮುಖ್ಯವಾದುವು. ಬೇಟೆರಾಯನಗುಡಿ ಯಾವುದೆಂಬುದು ಗುರುತಿಸಲಾಗಿಲ್ಲ. ಇದು ಪ್ರಾಯಶಃ ಕೋಲಾರದ ಈಶಾನ್ಯ ಪ್ರದೇಶದಲ್ಲಿದ್ದಿರಬಹುದಾದ ಒಂದು ದುರ್ಗವೆಂದಷ್ಟೇ ಹೇಳಬಹುದು.

ಬೆಂಗಳೂರಿಗೆ ಮುತ್ತಿಗೆ ಹಾಕಲು ವೆಂಕಟಪತಿರಾಯನು ಕಳುಹಿಸಿದ ಕುಮಾರರಾಯನೆಂಬುವನು ಆತನ ಸೈನ್ಯಾಧಿಕಾರಿಯಾಗಿದ್ದಿರಬೇಕು. ಅವನೊಂದಿಗೆ ಬಂದಿದ್ದ ಅನಂತರಾಜನು ಕಡಪ ಜಿಲ್ಲೆಯ ಮಾತ್ಲ ಎಂಬ ಸ್ಥಳದವನು. ಮಾಕರಾಜನೆಂಬುವನು ಇಂದಿನ ಚಿತ್ತೂರು ಜಿಲ್ಲೆಯ ಕರ್ಕಾತಿನಗರ ಎಂಬ ಊರಿನವನು. (ಈತನು ಕ್ರಿ.ಶ. ೧೬೧೫ ರಲ್ಲಿ ನಡೆದ ಅಂತರ್‌ಯುದ್ಧದಲ್ಲಿ ಬಂಡಾಯದ ಗುಂಪಿನವನಾಗಿದ್ದನು.) ಯಾಚಮನಾಯಕನು ನೆಲ್ಲೂರು ಜಿಲ್ಲೆಯಲ್ಲಿ ವೆಂಕಟಗಿರಿ ಎಂಬ ರಾಜ್ಯವನ್ನು ಸ್ಥಾಪಿಸಿದವನು. (ಇವನು ಅಂತರ್‌ಯುದ್ಧ ಕಾಲದಲ್ಲಿ ನಿಷ್ಠಾವಂತರ ಗುಂಪಿನ ನಾಯಕನಾಗಿದ್ದನು). ಜಗ್ಗರಾಜನು ಅಂತರ್‌ಯುದ್ಧದ ಬಂಡಾಯ ಗುಂಪಿನ ನಾಯಕನು. ಬೆಂಗಳೂರು ಜಿಲ್ಲೆಯ ಚನ್ನಪಟ್ಟಣದವನೇ ಜಗದೇವರಾಯನೆಂಬುವನು. ತಿಮ್ಮೇಂದ್ರನೆಂಬುವನು ದಾಮರ್ಲ ಸ್ಥಳದ ದೊರೆಯಿದ್ದಿರಬೇಕು. ಸೀರ್‍ಯದ ರಂಗಪ್ಪನು ತುಮಕೂರು ಜಿಲ್ಲೆಯ ಸಿರಾದ ಪಾಳೆಯಗಾರ ದೊಡ್ಡಬಳ್ಳಾಪುರದ ಪಾಳೆಯಗಾರನೇ ಇಮ್ಮಡಿ ಬೈರವ. ವೆಂಕಟಪತಿರಾಯನ ಪಟ್ಟದ ದಳವಾಯಿ ಚುಂಚಣ್ಣನಾಗಿದ್ದಿರಬಹುದು.

ಈ ಘಟನಾವಳಿಯ ಪ್ರಾರಂಭದಲ್ಲಿ ಚಿಕ್ಕರಾಯ ಇಮ್ಮಡಿ ತಿಮ್ಮೇಗೌಡನ ಪ್ರಸ್ತಾಪವಿದ್ದು, ಕೊನೆಯಲ್ಲಿ ಮುಮ್ಮಡಿ ತಮ್ಮೇಗೌಡನ ಉಲ್ಲೇಖ ಬಂದಿರುವುದನ್ನು ಇಲ್ಲಿ ಗಮನಿಸಬೇಕು. ಮುಮ್ಮಡಿ ತಮ್ಮೇಗೌಡನು ಸುಗಟೂರು ವಂಶದ ಚಿಕ್ಕರಾಯ ಇಮ್ಮಡಿ ತಮ್ಮೇಗೌಡನ ಮಗನೆಂಬುದಕ್ಕೆ ಶಾಸನ ಹಾಗೂ ಸಾಹಿತ್ಯಕೃತಿಗಳು ಆಧಾರ ನೀಡುತ್ತವೆ.[12] ಚಿಕ್ಕರಾಯ ಇಮ್ಮಡಿ

---

10. ಎ.ಕ., ಸಂಪುಟ ೧೦, ಕೋಲಾರ ೧೪೫, ಕ್ರಿ.ಶ. ೧೬೧೧ ಮತ್ತು ಮುಳಬಾಗಿಲು ೬೯, ಕ್ರಿ.ಶ. ೧೬೧೨ ; ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್, ೧೯೨೭, ಕೋಲಾರ ೭೩, ಕ್ರಿ.ಶ. ೧೬೧೨
11. ಈ ಅಯಮಗೌಡನು ಆಹುತಿಯ ದೊರೆಯೆಂದು ಶ್ರೀ ಎಂ. ಎಚ್ ರಾಮಶರ್ಮ ಅವರು ಹೇಳಿರುವರು-ನೋಡಿ : *The History of the Vijayanagara Empire-Decline and Disappearance, 1569-1679*, Vol. 2, Bombay, 1980, p. 89.
12. ೧. ಎ.ಕ., ಸಂಪುಟ ೧೦, ಕೋಲಾರ ೧೬೪ ಮತ್ತು ೧೬೫, ಸುಗಟೂರು, ಕ್ರಿ.ಶ. ೧೬೩೦
    ೨. ಆರ್. ನರಸಿಂಹಾಚಾರ್ಯ : ಕರ್ಣಾಟಕ ಕವಿಚರಿತೆ, ಸಂಪುಟ ೨, ಪು. ೪೧೭-೧೯. 'ಶಂಕರಸಂಹಿತೆ' ಎಂಬ ಕೃತಿಯು ಮುಮ್ಮಡಿ ತಮ್ಮೇಗೌಡನಿಂದ ಬರೆಯಲ್ಪಟ್ಟಿದ್ದು, ಆತನು ತ್ರಿಭಾಷಾಕವಿಯೆಂದೂ 'ಕೌಮುದೀವ್ಯಾಖ್ಯಾನ' ಮತ್ತು 'ರಸಿಕಮನೋರಂಜನ' ಎಂಬ ಸಂಸ್ಕೃತ ಕೃತಿಗಳನ್ನು, 'ರಾಜೇಂದ್ರಚೋಳಚರಿತೆ' ಮತ್ತು 'ಸೌಂದರೇಶಚರಿತೆ' ಎಂಬ ತೆಲುಗು ಕೃತಿಗಳನ್ನು ರಚಿಸಿದ್ದನೆಂದೂ ತಿಳಿದುಬರುತ್ತದೆ.

ತಮ್ಮೇಗೌಡನ ಆಡಳಿತವನ್ನು ಉಲ್ಲೇಖಿಸುವ ಕೊನೆಯ ಶಾಸನದ ಕಾಲ ಕ್ರಿ.ಶ.ಸು. ೧೬೦೦.[13] ಹಾಗೆಯೇ, ಮುಮ್ಮಡಿ ತಮ್ಮೇಗೌಡನನ್ನು ಉಲ್ಲೇಖಿಸುವ ಮೊದಲ ಶಾಸನವು ಕ್ರಿ.ಶ. ೧೬೦೮ಕ್ಕೆ ಸೇರಿದ್ದು, ಅದರ ಪ್ರಕಾರ ಮಹಾದೇವ ಎಂಬುವರಿಗೆ ಕೋಟೂರು ಹೊಸಹಳ್ಳಿ ಗ್ರಾಮವನ್ನು ವೀರಪುರವೆಂದು ಪ್ರತಿನಾಮವಿಟ್ಟು ಬಸವ ಲಿಂಗ ಗುಡಿಯೇ ಅವರಿಗೆ ಮಠವಾಗಿರಬೇಕೆಂದು ಪಟ್ಟ ಕಟ್ಟಿ, ತಮ್ಮ ತಂದೆ ತಾಯಿಗಳಿಗೆ ಪುಣ್ಯವಾಗಲಿಯೆಂದು ದತ್ತಿ ಬಿಡಲಾಯಿತು.[14] ಈತನ ಆಳ್ವಿಕೆಯ ಇನ್ನೊಂದು ಶಾಸನದ ಕಾಲ ಕ್ರಿ.ಶ. ೧೬೦೯.[15]

ಈ ಶಾಸನಗಳ ಪ್ರಕಾರ, ಮುಮ್ಮಡಿ ತಮ್ಮೇಗೌಡನು ಕ್ರಿ.ಶ. ೧೬೦೮ರ ವೇಳೆಗಾಗಲೇ ರಾಜ್ಯಸೂತ್ರಗಳನ್ನು ಹಿಡಿದಿದ್ದನೆಂಬ ಅಂಶವು ಸ್ಪಷ್ಟವಾಗುತ್ತದೆ. ಕ್ರಿ. ಶ. ೧೬೦೮ರ ಶಾಸನದಲ್ಲಿ ತಮ್ಮ ತಂದೆತಾಯಿಯರಿಗೆ ಪುಣ್ಯವಾಗಲಿ ಎಂದು ದಾನ ನೀಡಿರುವುದರಿಂದ, ಚಿಕ್ಕರಾಯ ಇಮ್ಮಡಿ ತಮ್ಮೇಗೌಡನು ಆ ವರುಷದಲ್ಲಿ ಅಥವಾ ಅದಕ್ಕೆ ಸ್ವಲ್ಪ ಮೊದಲು ಗತಿಸಿರಬೇಕು. ಈ ಸಂದರ್ಭದ ದುರ್ಲಾಭವನ್ನು ಪಡೆದು ಆಯಮಗೌಡನು ರಾಜ್ಯವನ್ನು ಕಬಳಿಸಿರಬೇಕು. ಅಂದರೆ ಕ್ರಿ.ಶ. ಸು. ೧೯೦೯–೧೦ ರಿಂದ ೧೬೧೨ರವರೆಗೆ ಸುಮಾರು ೨-೩ ವರ್ಷಗಳ ಕಾಲ, ಅಂದರೆ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನಿಂದ ಪರಾಜಯಗೊಳ್ಳುವವರೆಗೆ ಆಯಮಗೌಡನು ತಮ್ಮೇಗೌಡನ ರಾಜ್ಯವನ್ನು ಹಿಡಿದುಕೊಂಡಿದ್ದನೆಂಬುದು ಸ್ಪಷ್ಟಪಡುತ್ತದೆ. ಮುಮ್ಮಡಿ ತಮ್ಮೇಗೌಡನ ಇನ್ನೊಂದು ಶಾಸನವು ಕ್ರಿ.ಶ. ೧೬೧೪ಕ್ಕೆ ಸೇರಿದ್ದು,[16] ಆನಂತರ ಕ್ರಿ.ಶ. ೧೬೪೦ರ ವರೆಗೂ ಆತನ ಶಾಸನಗಳು ಕಂಡುಬರುತ್ತವೆ.[17] ಕ್ರಿ.ಶ. ೧೬೬೮ರ ವರೆಗೆ ಆತನು ಜೀವಂತನಾಗಿದ್ದನು.[18] ಅಲ್ಲದೆ ಆತನಿಗೆ ಹಲಸಮ್ಮಳೆಂಬ ಹೆಂಡತಿಯಿದ್ದ ಬಗ್ಗೆ ಶಾಸನ ವೊಂದರಿಂದ ತಿಳಿದುಬರುತ್ತದೆ.[19] ಆಕೆ ಬಹುಮಟ್ಟಿಗೆ ಬೆಂಗಳೂರು ಇಮ್ಮಡಿ ಕೆಂಪೇಗೌಡನ ಮಗಳೇ ಆಗಿದ್ದಿರಬೇಕು.

ಇಮ್ಮಡಿ ಕೆಂಪೇಗೌಡನು ತಮ್ಮೇಗೌಡನ ಆಳಿಕೆಗೆ ಒಳಪಟ್ಟಿದ್ದ ಪ್ರಸಿದ್ಧ ತೀರ್ಥಕ್ಷೇತ್ರವಾದ ಆವನಿ ಸ್ಥಳಕ್ಕೆ ಭೇಟಿ ನೀಡಿದ್ದ ವಿವರವು ಶಾಸನೋಕ್ತವಾಗಿದೆ.[20] ಹಾಗೆಯೇ, ಸುಗಟೂರು ವಂಶದ ಇಮ್ಮಡಿ ತಮ್ಮೇಗೌಡನು ಕ್ರಿ.ಶ. ೧೫೬೦ರಷ್ಟು ಹಿಂದೆಯೇ ಕೆಂಪೇಗೌಡನ ಆಳಿಕೆಗೆ ಒಳಪಟ್ಟಿದ್ದ ಶಿವಗಂಗೆಯ ಗಂಗಾಧರೇಶ್ವರ ದೇವರಿಗೆ ಹೊಸಕೋಟೆ ತಾಲ್ಲೂಕಿನ ನೆಲವಾಗಿಲ ಸ್ಥಳಕ್ಕೆ ಸಲ್ಲುವ ಅನುಪ್ರಹಳ್ಳಿ ಎಂಬ ಗ್ರಾಮವನ್ನು ದತ್ತಿಬಿಟ್ಟಿರುವ ವಿಷಯವೂ ಶಾಸನದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.[21].

ಹೀಗೆ ಇವರು ಪರಸ್ಪರ ಬಾಂಧವ್ಯವುಳ್ಳವರಾಗಿದ್ದರು. ಅಲ್ಲದೆ, 'ಜಯಪ್ರಶಸ್ತಿ'ಯ ಎರಡನೆಯ ಭಾಗದಲ್ಲಿ ಬರುವ ಯುದ್ಧಸಾಹಸ ಕುರಿತ ವಿವರಗಳಲ್ಲಿ, ಮುಮ್ಮಡಿ ತಮ್ಮೇಗೌಡನು ಇಮ್ಮಡಿ ಕೆಂಪೇಗೌಡನಿಗೆ ಬಲಗೈಯಾಗಿ ನಿಂತು ಸಹಕರಿಸುವುದು ಕಂಡುಬರುತ್ತದೆ. ಈ ಎರಡನೆಯ ಭಾಗದಲ್ಲಿ ಉಕ್ತವಾಗಿರುವ ಘಟನೆಯು ಕ್ರಿ.ಶ. ೧೬೩೫ರಲ್ಲಿ ನಡೆದದ್ದಾಗಿದೆ. ಆ ಸಂದರ್ಭದಲ್ಲಿ ಕರ್ಣಾಟಕಾಧೀಶ್ವರನೆನಿಸಿಕೊಂಡಿದ್ದ ಆರವೀಡು ವಂಶದ ರಾಜರು ಪೆನುಗೊಂಡೆಯಿಂದ ಆಳುತ್ತಿದ್ದರು. ಈ ಭಾಗವು ಕೆಂಪೇಗೌಡನ ಯುದ್ಧತಂತ್ರ

---

13. ಎ.ಕ., ಸಂಪುಟ ೯, ಆನೇಕಲ್ ೬೧, ಕಾಡಜಕ್ಕನಹಳ್ಳಿ, ಕ್ರಿ.ಶ.ಸು. ೧೬೦೦
14. ಅದೇ, ಸಂಪುಟ ೧೦, ಕೋಲಾರ ೨೪೧, ಕೋಟೂರುಬಸವಾಪುರ, ಕ್ರಿ.ಶ. ೧೬೦೮
15. ಅದೇ, ಶಿಡ್ಲಘಟ್ಟ ೫, ಬೂಸನಹಳ್ಳಿ, ಕ್ರಿ.ಶ. ೧೬೦೯
16. ಅದೇ, ಕೋಲಾರ ೬೪, ಗರುಡನಹಳ್ಳಿ, ಕ್ರಿ.ಶ. ೧೬೧೪; ಅದೇ, ಸಂಪುಟ ೯, ಆನೇಕಲ್ ೪೭, ಕ್ರಿ.ಶ. ೧೬೧೪
17. ಅದೇ, ಸಂಪುಟ ೧೦, ಕೋಲಾರ ೧೭೪, ೧೬೫ ಸುಗಟೂರು ಕ್ರಿ.ಶ. ೧೬೩೦, ಅದೇ ಸಂಪುಟ ೯, ಆನೇಕಲ್ ೬೦, ಬಿದರಗೆರೆ, ಕ್ರಿ.ಶ. ೧೬೪೦
18. ಅದೇ, ಸಂಪುಟ ೧೦, ಮುಳಬಾಗಿಲು ೧೧೪, ಉತ್ತನೂರು, ಕ್ರಿ.ಶ. ೧೬೬೮
19. ಅದೇ, ಕೋಲಾರ ೨೪೭, ಹರಳಕುಂಟೆ, ಕ್ರಿ.ಶ. ೧೬೩೭ ?
20. ಅದೇ, ಸಂಪುಟ ೧೭(ಸಪ್ಲಿಮೆಂಟ್), ಮುಳಬಾಗಿಲು ೩೦೦, ಆವನಿ, ಕ್ರಿ.ಶ.ಸು. ೧೬೩೦
21. ಅದೇ, ಸಂಪುಟ ೯, ಹೊಸಕೋಟೆ ೭೩, ಅನುಪುಪಳ್ಳಿ, ಕ್ರಿ.ಶ. ೧೬೨೦

ನಿಪುಣತೆ ಮತ್ತು ರಾಜಕಾರಣ ಕುಶಲತೆಗಳನ್ನು ಬಹಳ ಸೊಗಸಾಗಿ ಪ್ರತಿಬಿಂಬಿಸುತ್ತದೆ.

ಈ ಭಾಗದ ಘಟನಾವಳಿಗಳನ್ನು ಹೀಗೆ ಸಂಗ್ರಹಿಸ ಬಹುದಾಗಿದೆ:

ನರಪತಿಯ ಸಿಂಹಾಸನಕ್ಕೆ ದಿಕ್ಕಿಲ್ಲವಾಗಿತ್ತು. ನೆರೆ ಹೊರೆಯ ದೊರೆಗಳು ಗರ್ವದಿಂದ ಭೂಮಿಗಳನ್ನೆಲ್ಲಾ ಸೂರೆ ಮಾಡಿದರು. ರಾಜ್ಯಗಳನ್ನು ಕಟ್ಟಿಕೊಂಡರು. ಅಲ್ಲದೆ ರಾಜಧಾನಿಯಾದ ಪೆನುಗೊಂಡೆಯ ದುರ್ಗಕ್ಕೆ ಮುತ್ತಿಗೆಯನ್ನು ಹಾಕಿದ್ದರು. ಆಗ ನರೇಶನಾದ ವೆಂಕಟ ಪತಿರಾಯನು ತನಗೆ ರಾಜ್ಯಾಧಿಕಾರವನ್ನು ಉಳಿಸಿಕೊಡ ಬೇಕೆಂದು ಮಂತ್ರಿಜನಗಳ ಮುಖಾಂತರ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನಿಗೆ ಹೇಳಿಕಳುಹಿಸಿದನು. ಆಗ ಕೆಂಪೇಗೌಡನು ಅಧಿರಾಜನಿಗೆ ರಾಯಸವನ್ನು ಬರೆಯಿಸಿ ಬುದ್ಧಿವಂತಿಕೆಯಿಂದ ಆತನನ್ನು ತನ್ನ ಸುತ್ತಮುತ್ತಲ ದೊರೆಮನ್ನೆಯರನ್ನು ಕೂಡಿಸಿ, ಯುದ್ಧಕ್ಕೆ ಬೇಕಾಗುವ ಸರ್ವಸಾಧನಗಳನ್ನು ಜೋಡಿಸಿಕೊಂಡನು. ತಿಮ್ಮರಾಜ, ರಂಗಪತಿರಾಜ, ಮಾಕರಾಜ, ನಂದ್ಯಾಲರಾಜ, ವೆಂಕಪ್ಪ ರಾಜ, ಮೂರ್ತಿರಾಜ ಮುಂತಾದ ರಾಜರೂ,ನೆಲಿಗೋಟಿ ತಿಮ್ಮನಾಯಕ, ದಾಮೆರ್ಲ ವೆಂಕಪ್ಪನಾಯಕ, ರಾವಿಳ್ಳ ವೆಂಕಟನಾಯಕ, ರಾಮಭದ್ರರಾಜ ಮುಂತಾದ ಬಲಶಾಲಿ ಗಳು, ದಳವಾಯಿ ಪಾಪಯ್ಯ, ಪವಡದ ಕೃಷ್ಣಪ್ಪ, ಚವ ರದ ನಾರಾಣೇಂದ್ರ ಇವರೇ ಮೊದಲಾದ ಗಂಡುಗಲಿಗಳು, ಜಗದೇವರಾಯ, ಚಿಕ್ಕರಾಯ ತಮ್ಮಯ್ಯಗೌಡ, ಬಗೆ ಬಗೆಯ ಪಾಳೆಯಗಾರರು, ಮಂತ್ರಿಗಳು ಇವರೆಲ್ಲರೂ ಕೂಡಿ ರಾಯರಿಗೆ ಓಲಗವನ್ನೇರ್ಪಡಿಸಿ ಮನ್ನಣೆಯನ್ನು ಸಲ್ಲಿಸಿದರು. ಕದಲಿ ನೆಲ್ಲಿಪಟ್ಣ ಕಣಿವೆಗಳ ಎದುರಿಗೆ ರಾಯರ ದಂಡು ಇಳಿಯಿತು. ನಂತರ ಕೋಗಿಲೇರಿಯಲ್ಲಿ ಇಳಿಯಿತು. ಮುಂದೆ ಹೇಗೆ ಮುಂದುವರೆಯಬೇಕೆಂದು ಯೋಚನೆಗಿಟ್ಟುಕೊಂಡಿತು. ಆಗ ರಾಯನು ಮಂತ್ರಿ ಗಳನ್ನು ಕರೆಯಿಸಿ ಸಮಾಲೋಚಿಸಿದ. ಪೊರಸುಮನ್ನೆಯ ರನ್ನು ಕೂಡಿಕೊಳ್ಳದಿದ್ದರೆ ಮುಂದೆ ಹೋಗುವುದು ಹೇಗೆ ? ಎಂದು ತೀರ್ಮಾನಿಸಿ ರಾಯನ ದಂಡು ಬೇತ ಮಂಗಲದಲ್ಲಿ ಇಳಿಯಿತು. ಆಗ ಕೆರೆಯೂರ ತಿಮ್ಮ ನಾಯಕ ಮತ್ತು ಸುತ್ತಣರಾಜರು ಹೊಸಕೋಟೆಯ ತಮ್ಮ ಧೀರ, ದೇವಂಡಹಳ್ಳಿಯ ಜೇನಬೈರ, ಚಿಕ್ಕಬಳ್ಳಾ ಪುರದ ಬೈರೇಂದ್ರ, ಮೈಸೂರಿನವನು, ಮಾಸ್ತಿಯ ಕರಿ ಯೇಂದ್ರ ಹೊಸೂರು ಚಂದ್ರಶೇಖರ, ಬಾಗಲೂರ ಎರ್ರೇಂದ್ರ ಎಲ್ಲರನ್ನು ಕೂಡಿಕೊಂಡು ಕೆಂಪೇಗೌಡನು ರಾಯರನ್ನು ಎದಿರುಗೊಂಡ.

ಮುಂದೆ ಮೂಡಿಗೆರೆಯಲ್ಲಿ ಪಾಳ್ಯವಿರಿಸಿ, ನಂತರ ದಂಡು ವೇಗದಿಂದ ತೆರಳಿ ಕಡಕತ್ತೂರ ಕೆರೆಯ ಏರಿಯ ಬಳಿಯಲ್ಲಿ ಇಳಿಸಿ, ಸಿರಿಯಾದ ಅರಸು ರಂಗಪ್ಪನನ್ನು ಕರೆಯಿಸಲಾಯಿತು. ಈ ರೀತಿ ಹೆಸರಾದ ಮನ್ನೆಯರು ಮಂತ್ರಿಗಳು ಮೊದಲಾಗಿ ಹಲವು ರಾಜರನ್ನು ಕೂಡಿ ಕೊಂಡು ಹೋಗಿ ಪೆನುಗೊಂಡೆಯನ್ನು ಮುತ್ತಿ ರಾಯ ನಿಗೆ ಪಟ್ಟವನ್ನು ಒಪ್ಪಿಸಿ ಭಾವ ಸಂವತ್ಸರ ಮಾಘ ಶುದ್ಧ ಪಂಚಮಿ ಸುಮೂಹರ್ತ ಶುಭಲಗ್ನದಲ್ಲಿ ವೆಂಕಟಪತಿ ರಾಯನಿಗೆ ಪಟ್ಟವನ್ನು ಕಟ್ಟಿದ.

ರಾಯರ ಓಲಗದಲ್ಲಿ, ಬಂದಿದ್ದ ರಾಜರಿಗೆ ಮರ್ಯಾ ದೆಗೆ ತಕ್ಕಂತೆ ರಾಯರ ದರ್ಶನವನ್ನುಂಟು ಮಾಡಿ ಪಗುದಿ ಗಳನ್ನು ಕೊಡಿಸಿದ. ನಂತರ ಮಂಡಲೇಶ್ವರನಾದ ವೆಂಕಟಪತಿರಾಯನು ಹಲವು ಸೀಮೆಗಳನ್ನು ಗೆದ್ದುಕೊಡ ಬೇಕೆಂದು ಕೆಂಪೇಗೌಡನನ್ನು ಕೋರಿದನು. ಆಗ ತಡ ಮಾಡದೆ ಅನೇಕ ರಾಜರನ್ನು ಕೂಡಿಕೊಂಡು ವಸಂತನ ಸೀಮೆ, ಮಲೆಯ ಹಂಪನ ಸೀಮೆ, ಹಂಡೆಯ ಹಂಪ ರಾಜರನ್ನೂ, ಆ ಬಳಿಕ ವೂಟಕೂರ ಪಾಳೆಯ, ಬಿಜ್ಜಾ ವರದ ಸೀಮೆ, ರಣಬೈರವನ ಸೀಮೆ, ಹೊಸವೂರು, ಕುಂದರಿಪೆ ತಿಮ್ಮೇಂದ್ರ ಮುಂತಾದವರ ಪುಂಡಾಟವನ್ನು ಬಗ್ಗಬಡಿದು ಅವರಿಂದ ಕಪ್ಪವನ್ನು ತೆರಿಸಿದನು ಮತ್ತು ರಾಜ್ಯವನ್ನು ಬಿಡಿಸಿದನು. ಆಹುದೆಂದು ರಾಯನ ಸಿಂಹಾಸನವನ್ನು ನಿಲ್ಲಿಸಿದ್ದಕ್ಕೆ ರಾಯನು ಮೆಚ್ಚಿ ಸಂತೈ ಸಿದ. ಅಲ್ಲದೆ, 'ಸ್ವಾಮಿದ್ರೋಹರಗಂಡ' ಎಂಬ ಬಿರು ದಿನ ಕಾಲ್ಪೆಂಡೆಯನ್ನೂ ತಾಳಿ ಚೌಕುಳಿ, ಕಂಠಮಾಲೆ, ನವರತ್ನ ಭೂಷಣಾಭರಣಗಳನ್ನು ಕೊಟ್ಟು ಮನ್ನಣೆ ಯನ್ನು ನೀಡಿದನು.

ಈ ರೀತಿ ಮನ್ನಣೆ ಪಡೆದ ಕೆಂಪೇಗೌಡನಿಂದ ದೊಡ್ಡಬಳ್ಳಾಪುರದ ದಳವಾಯಿ ತಮ್ಮೇಂದ್ರ ಅಭಯ ವನ್ನು ಪಡೆದನು. ನಂತರ ಕಾಕೋಳಲ ಕೆರೆಯ ಅಂಗಳ ದಲ್ಲಿ ಪಾಳೆಯವಿಳಿದು ಅನೇಕ ರಾಜರಿಗೆ ಉಡುಗೊರೆ

ಗಳನ್ನು ಕೊಟ್ಟು ಕಳುಹಿಸಿದನು. ನಂತರ ಬೆಂಗಳೂರು ಪಟ್ಟಣಕ್ಕೆ ಐರಾವತವೇರಿ ಬರುವ ದೇವೇಂದ್ರನಂತೆ ದಿಗ್ವಿಜಯ ಮಾಡಿ ಬಂದು ಸೇರಿದನು.

ಕೆಂಪೇಗೌಡನ ಜಯಪ್ರಶಸ್ತಿಯಲ್ಲಿ ವರ್ಣಿತವಾಗಿರುವ ಮೊದಲ ಮತ್ತು ಎರಡನೇ ಭಾಗಗಳಲ್ಲಿಯ ಘಟನಾವಳಿಗಳಿಗೆ ಸುಮಾರು ೨೩ ವರ್ಷಗಳ ಅಂತರವಿದೆ. ಈ ಅವಧಿಯಲ್ಲಿ ಇಮ್ಮಡಿ ಶ್ರೀರಂಗರಾಯ(ಕ್ರಿ. ಶ. ೧೬೧೪–೧೬೧೭) ಮತ್ತು ರಾಮದೇವರಾಯ (ಕ್ರಿ.ಶ. ೧೬೧೭–೧೬೩೨) ಅವರುಗಳು ಅರವೀಡುವಂಶದ ಸಾಮ್ರಾಟರಾಗಿ ಆಳಿರುತ್ತಾರೆ.[22] ಕ್ರಿ.ಶ. ೧೬೧೭ರಲ್ಲಿ ಅಧಿಕಾರಕ್ಕೆ ಬಂದ ರಾಮದೇವರಾಯನ ಸಿಂಹಾಸನಾರೋಹಣವು ಅಷ್ಟು ಸುಗಮವಾಗಿರಲಿಲ್ಲ. ಈ ವಂಶದವರ ಆಳ್ವಿಕೆಯ ಪ್ರಾರಂಭದಿಂದಲೇ ಸಿಂಹಾಸನಕ್ಕಾಗಿ ಅಳಿಯ ರಾಮರಾಯ ಮತ್ತು ಅವನ ಸೋದರ ಅರವೀಡು ವಂಶದ ಸ್ಥಾಪಕನಾದ ತಿರುಮಲರಾಯನ ಸಂತತಿಯವರು ಒಳಜಗಳಗಳಲ್ಲಿ ತೊಡಗಿದ್ದರು. ಅಲ್ಲದೆ, ರಾಜಧಾನಿಯಾದ ಪೆನುಗೊಂಡೆಯ ಆಕ್ರಮಣಾದಿಗಳು ಸರ್ವೇಸಾಮಾನ್ಯವಾಗಿದ್ದವು. ತತ್ಪರಿಣಾಮವಾಗಿ, ರಕ್ಕಸಗಿ ತಂಗಡಗಿ ಯುದ್ಧದ ನಂತರ ಅಳಿದುಳಿದಿದ್ದ ವಿಜಯನಗರ ಸಾಮ್ರಾಜ್ಯದಲ್ಲೆಲ್ಲಾ ಅರಾಜಕತೆಯುಂಟಾಗಿದ್ದಿತು. ರಾಜ್ಯದ ಮಾಂಡಲಿಕ–ಪಾಳೆಯಗಾರರಲ್ಲಿ ಬಹುಮಂದಿ ಅವಿಧೇಯತೆಯಿಂದ ವರ್ತಿಸುತ್ತಿದ್ದರು.

ರಾಮದೇವರಾಯನ ಆಳಿಕೆಯ ಕಾಲದಲ್ಲೇ, ಅಳಿಯ ರಾಮರಾಯನ ಕೊನೆಯ ಮಗನಾದ ಶ್ರೀರಂಗರಾಯನ ಮಗ, ಪ್ರಸ್ತುತ ಜಯಪ್ರಶಸ್ತಿಯ ಎರಡನೆಯ ಭಾಗದಲ್ಲಿ ಉಕ್ತನಾಗಿರುವ ಮುಮ್ಮಡಿ ವೆಂಕಟಪತಿರಾಯನು, ರಾಜಧಾನಿಯನ್ನು ಹಲವು ಬಾರಿ ಆಕ್ರಮಿಸಿ ಕೊಂಡಿದ್ದನಲ್ಲದೆ ಸ್ವತಂತ್ರವಾಗಿ ಶಾಸನಗಳನ್ನು ಹೊರಡಿಸಿದನು. ಈತನ ಪೂರ್ವಿಕರು ರಕ್ಕಸಗಿ–ತಂಗಡಗಿ ಯುದ್ಧದ ನಂತರವೂ ಆನೆಗೊಂದಿಯಲ್ಲೇ ಉಳಿದದ್ದರಿಂದ, ಹಲವು ಶಾಸನಗಳಲ್ಲಿ ಈತನನ್ನು 'ಆನೆಗೊಂದಿ ವೆಂಕಟಪತಿರಾಯ'ನೆಂದೂ ಈತನು ನೇರವಾಗಿ ಪ್ರಸಿದ್ಧ ಅಳಿಯ ರಾಮರಾಯನ ರಕ್ತ ಸಂಬಂಧಿಯಾಗಿದ್ದುದರಿಂದ 'ರಾಮರಾಯ ವೆಂಕಟಪತಿರಾಯ'ನೆಂದೂ ಈತನಿಗೆ ಚಿಕ್ಕ ವೆಂಕಟಪತಿರಾಯನೆಂಬ ತಮ್ಮನಿದ್ದುದರಿಂದ ಇವನನ್ನು 'ದೊಡ್ಡ ವೆಂಕಟಪತಿರಾಯ'ನೆಂದೂ 'ವೆಂಕಟಾದ್ರಿ' ಎಂದೂ ಹಲವಾರು ದಾಖಲೆಗಳಲ್ಲಿ ಉಕ್ತವಾಗಿರುವುದು ಕಂಡುಬರುತ್ತದೆ. ಈತನಿಗೆ ಆಂಧ್ರದ ರಾಯಲಸೀಮಾ ಭಾಗದ ತಿಮ್ಮರಾಜ, ವೆಂಕಟರಾಜ, ನಂದ್ಯಾಲದ ಅಳಿಯ ಓಬರಾಜ ಮುಂತಾದ ಬಂಧು ಬಾಂಧವರೂ ವೆಲುಗೋಟಿ ತಿಮ್ಮನಾಯಕ, ದಾಮರ್ಲ ವೆಂಕಟಪ್ಪ ನಾಯಕ, ರಾವಿಳ್ಲ ವೆಂಕಟಪ್ಪನಾಯಕ, ರಾಜಕುಮಾರ ಭದ್ರ, ದಳವಾಯಿ ಪಾಪಯ್ಯ, ಪಾವಡಾದ ಕೃಷ್ಣಯ್ಯ ಮತ್ತು ಜಗದೇವರಾಯ ಮುಂತಾದ ಮನ್ನೆಯರೂ ಸಹಾಯಕರಾಗಿದ್ದರು. ಈ ರಾಮದೇವರಾಯನ ಕಾಲದಲ್ಲೆ ಮುಮ್ಮಡಿ ವೆಂಕಟಪತಿರಾಯನಂತೆ ಶ್ರೀರಂಗರಾಯನೆಂಬ ಮತ್ತೊಬ್ಬ ಅರವೀಡು ವಂಶದವನು ಪೆನುಗೊಂಡೆಯನ್ನು ಹಲವು ಬಾರಿ ಆಕ್ರಮಿಸಿ ಸ್ವತಂತ್ರವಾಗಿ ಶಾಸನಗಳನ್ನು ಹೊರಡಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೬೩೧ರ ನಂತರ ರಾಮದೇವರಾಯನನ್ನು ಅಧಿಕೃತವಾಗಿ ಉಲ್ಲೇಖಿಸುವ ದಾಖಲೆಗಳಾವುವೂ ದೊರೆತಿಲ್ಲ. ಅಂದರೆ ಕ್ರಿ.ಶ. ೧೬೩೧ ರಿಂದ ೧೬೩೩ರ ವರೆಗೆ, ಪ್ರಸ್ತುತ ಜಯಪ್ರಶಸ್ತಿಯಲ್ಲಿ ಉಲ್ಲೇಖಿಸಿರುವಂತೆ, ನರಪತಿಯ ಸಿಂಹಾಸನಕ್ಕೆ ಯಾರೂ ದಿಕ್ಕಿರಲಿಲ್ಲವೆಂಬುದು ದೃಢಪಟ್ಟಂತಾಗುತ್ತದೆ. ಕ್ರಿ.ಶ.೧೬೩೩ರ ನಂತರ ಮುಮ್ಮಡಿ ವೆಂಕಟಪತಿರಾಯನು ತನ್ನ ಆಳಿಕೆಯನ್ನು ಪ್ರಾರಂಭಿಸಿದ್ದರೂ ಆತನು ವಾಸ್ತವವಾಗಿ ನಿಜರಾಜಧಾನಿ ಪೆನುಗೊಂಡೆಯಿಂದ ಕಿರೀಟಧಾರಿಯಾಗಿ ಆಳುತ್ತಿದ್ದನೆಂದು ತೋರುವುದಿಲ್ಲ. ಅಂತೆಯೇ, ಪ್ರಸ್ತುತ ಜಯಪ್ರಶಸ್ತಿಯ ಎರಡನೆಯ ಭಾಗದಲ್ಲಿ ಉಕ್ತವಾಗಿರುವ ರೀತಿಯಲ್ಲೇ ವೆಂಕಟಪತಿರಾಯನು ಬೆಂಗಳೂರಿನ ಕೆಂಪೇಗೌಡನ ಪ್ರಭಾವಕ್ಕೊಳಗಾಗಿದ್ದ ಮೊರಸುನಾಡು ಪ್ರದೇಶದ ದೊರೆ ಮನ್ನೆಯರ ಮತ್ತು ಮೇಲೆ ಉಲ್ಲೇಖಿಸಿರುವ ರಾಯಲಸೀಮಾ ಭಾಗದ ಬಂಧುಗಳು ಹಾಗೂ ಅನುಯಾಯಿಗಳ ನೆರವಿನಿಂದ ಅಂತಿಮವಾಗಿ ಪೆನುಗೊಂಡೆಯನ್ನು ಆಕ್ರಮಿಸಿ, ಸಿಂಹಾಸನಸ್ಥನಾಗಿ ಕಿರೀಟದಾರಿಯಾದನೆಂದು ದೃಢವಾಗಿ ಹೇಳಬಹುದು. ಈ ಕಾರ್ಯವು ಭಾವ ಸಂವತ್ಸರದ

22. ಈ ಭಾಗದ ಐತಿಹಾಸಿಕ ವಿವರಗಳನ್ನು ಶ್ರೀ ಎಂ. ಎಚ್. ರಾಮಶರ್ಮರ ಪೂರ್ವೋಕ್ತ ೨ನೆಯ ಸಂಪುಟದಿಂದ ಆಯ್ದು ಸಂಗ್ರಹಿಸಲಾಗಿದೆ

ಮಾಘ ಶುದ್ಧ ಪಂಚಮಿಯಂದು ಆಯಿತು. ಇದು ಶಾಲಿವಾಹನ ಶಕ೧೫೫೬ಕ್ಕೆ ಹೊಂದುವ ಕ್ರಿ.ಶ. ೧೬೩೫ರ ಜನವರಿ ೧೩ನೇ ತಾರೀಖಿಗೆ ತಾಳೆಯಾಗುತ್ತದೆ.

ಹೀಗೆ ಮುಮ್ಮಡಿ ವೆಂಕಟಪತಿರಾಯನು ಪೆನುಗೊಂಡೆಯಲ್ಲಿ ದೃಢಸಿಂಹಾಸನಸ್ಥನಾದ ನಂತರ ಬೆಂಗಳೂರಿನ ಕೆಂಪೇಗೌಡ ಮತ್ತು ಆವನ ಅನುಯಾಯಿಗಳ ನೆರವಿನಿಂದ ತನಗೆ ಅವಿಧೇಯರಾಗಿದ್ದ ಗುಮ್ಮನಾಯಕನಪಾಳ್ಯ, ಅನಂತಪುರ, ವೂಟಕೂರು, ಬಿಜ್ಜಾವರ, ದೊಡ್ಡಬಳ್ಳಾಪುರ, ಕುಂದರಿಪೆ ಮುಂತಾದ ಪಾಳೆಯಗಾರರ ಸೀಮೆಗಳ ಮೇಲೆ ದಾಳಿ ನಡೆಸಿ ಕಪ್ಪಕಾಣಿಕೆಗಳನ್ನು ವಸೂಲು ಮಾಡಿ ಸಾಮ್ರಾಜ್ಯದಲ್ಲಿ ಶಾಂತಿ ಮತ್ತು ಶಿಸ್ತುಗಳು ಏರ್ಪಡುವಂತೆ ನೋಡಿಕೊಂಡನು. ಅನಂತರ ತನ್ನ ದಂಡಯಾತ್ರೆಯಲ್ಲಿ ನೆರವಾದವರಿಗೆ ಅದರಲ್ಲೂ ಬೆಂಗಳೂರಿನ ಕೆಂಪೇಗೌಡನಿಗೆ ಉಡುಗೊರೆಗಳ ಮೂಲಕ ಸತ್ಕರಿಸಿ 'ಸ್ವಾಮಿದ್ರೋಹರಗಂಡ' ಎಂಬ ಬಿರುದನ್ನೂ ನೀಡಿ ಗೌರವಿಸುತ್ತಾನೆ.

ನಮ್ಮ ಮಹಾ ಸಾಮ್ರಾಜ್ಯಗಳ ಇತಿಹಾಸವು ಇನ್ನೂ ಅಸಮಗ್ರವಾಗಿಯೇ ಉಳಿದಿರುವುದರ ಹಿನ್ನೆಲೆಯಲ್ಲಿ, ಪ್ರಸ್ತುತ 'ಕೆಂಪೇಗೌಡನ ಜಯಪ್ರಶಸ್ತಿ'ಯಂತಹ ಚಾರಿತ್ರಿಕಾಂಶಗಳನ್ನು ದಟ್ಟವಾಗಿ ಒಳಗೊಂಡಿರುವ ಸಾಹಿತ್ಯಕೃತಿಗಳು, ಶಾಸನ ಮುಂತಾದ ಇತರ ಚಾರಿತ್ರಕ ಆಕರ ಸಾಮಗ್ರಿಗಳಷ್ಟೇ ಮಹತ್ವದವೆನಿಸುತ್ತವೆ. ಒಟ್ಟಾರೆ, ಯಾವುದೇ ಪ್ರದೇಶದ ಚರಿತ್ರೆಯು ಪರಿಪೂರ್ಣವಾಗಿ ರೂಪುಗೊಳ್ಳಬೇಕಾದರೆ, ಸಂಶೋಧನೆಯ ಅಗ್ನಿಪರೀಕ್ಷೆಗೆ ಒಳಪಡಿಸಿದ ಸಮಕಾಲೀನ ಸಾಕ್ಷ್ಯಾಧಾರಗಳು ಆವಶ್ಯಕ. ಈ ದಿಸೆಯಲ್ಲಿ ಈ ಕೃತಿಯೂ ಗಮನಾರ್ಹವಾದುದೆಂಬುದರ ಬಗ್ಗೆ ಸಂದೇಹವಿಲ್ಲ. ಇಂತಹ ಕೃತಿಗಳ ವ್ಯವಸ್ಥಿತ ಸಂಗ್ರಹ, ಸಂಪಾದನೆ ಮತ್ತು ಪ್ರಕಟಣಾ ಕಾರ್ಯವು ಇನ್ನೂ ಆಗಬೇಕಾದ ಕೆಲಸವಾಗಿದೆ.

ಎಸ್. ಶಿವಣ್ಣ

# ಮೈಸೂರು ಅರಮನೆ ಪಂಚಗವಿಮಠದ ಶಿವಬಸವಸ್ವಾಮಿಗಳು : ಒಂದು ಟಿಪ್ಪಣಿ

ಶಕ ೧೭೬೩ರಲ್ಲಿದ್ದ ಸುಲೇಗಾವಿ ಚರಮೂರ್ತಿಗಳಾದ ಶಿವಬಸವ ದೇಶಿಕೇಂದ್ರ ಸ್ವಾಮಿಗಳು ಮಹಿಸೂರ ಚಾಮುಂಡಾದ್ರಿ ಪಂಚಗವಿಮಠಕ್ಕೆ ಕಾರಣಕರ್ತರು.[1]

ಇವರಿಗೆ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೭೬೮ರ ಸಂದ ವರ್ತಮಾನ ಪರಾಭವ ಸಂವತ್ಸರದ ಮಾಘ ಶುದ್ಧ ೧೫ ಭಾನುವಾರದಲ್ಲಿ ಮಹಿಸೂರ ಸಂಸ್ಥಾನದ ಚಾಮರಾಜ ಒಡೆಯರವರು ಮಠಾ ಕಟ್ಟಿಸಿ ಒಪ್ಪಿಸಿದ ಸೇವೆಯನ್ನು ಕುರಿತ ಶಿಲಾಶಾಸನವೊಂದು ಉಪಲಬ್ಧವಿದೆ.[2]

ಅದೇ ವರ್ಷ ಅಂದರೆ ಪರಾಭವ ಸಂವತ್ಸರದ ಕಾರ್ತೀಕ ಬಹುಳ ೧೦ ಮಿ ಭೃಗುವಾಸರ ಅನುರಾಧ ನಕ್ಷತ್ರದಲ್ಲಿ ಮಲ್ಲಪ್ಪದೇವರು ಶಿವಬಸವ ದೇಶಿಕೇಂದ್ರರಿಗೆ ಮೌನಪ್ಪಪಂಡಿತನ 'ವೀರಶೈವಾಚಾರ ಕೌಸ್ತುಭ' ಗ್ರಂಥವನ್ನು ಬರೆದುಕೊಟ್ಟಿದ್ದಾರೆ.[3]

ಶಕ ೧೭೭೦ನೆಯ ಕೀಲಕ ಸಂವತ್ಸರ ಶ್ರಾವಣ ಬ ೫ರ ಕಾಲೋಲ್ಲೇಖವನ್ನುಳ್ಳ ಪತ್ರವೊಂದರಲ್ಲಿ ಇವರನ್ನು ಚಿನ್ಮೂಲಾದ್ರಿ ಮಹಾಸನ್ನಿಧಿ ಆಜ್ಞಾಧಾರಕರೆಂದು ಹೆಸರಿಸಿದೆ. ಅಲ್ಲದೇ, ಅದೇ ಪತ್ರದಿಂದ ಇವರು ಚಿದ್ಘನ ಶಿವಾಚಾರ್ಯರೆಂಬ ಚರಮೂರ್ತಿಗಳನ್ನು ಮಾಡಿದ ವಿಚಾರ ತಿಳಿದುಬರುತ್ತದೆ. ಚಿನ್ಮೂಲಾದ್ರಿ ಸಂಸ್ಥಾನಕ್ಕೆ ಸಂಬಂಧಿಸಿದಂತೆ ವಿನಾಯಿತಿ ಹಾಗೂ ಗೌರವಗಳಿಗೆ ಸಂಬಂಧಿಸಿದ ರಹದಾರಿ ಅಪ್ಪಣೆ ಇತ್ಯಾದಿಗಳನ್ನು ಪಡೆಯಲು ಕಾರ್ಯಪ್ರವೃತ್ತರಾಗಲು ಸೂಚಿಸಿದೆ.[4]

ಈ ಪತ್ರದ ಕಾಲವಾದ ಶಕ ೧೭೭೦ರಲ್ಲಿ ಚಿನ್ಮೂಲಾದ್ರಿಯ ಶೂನ್ಯಸಿಂಹಾಸನದಲ್ಲಿ ಸಣ್ಣಪಾದದ ಚೆನ್ನವೀರದೇಶಿಕರು (ಕ್ರಿ.ಶ. ೧೮೪೦–೧೮೬೦) ಪೀಠಾಧಿಪತಿಗಳಾಗಿದ್ದರು.

---

1. ಕೆ. ೧೯೭೪, 'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ', ಏಳನೆಯ ಸಂಪುಟ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦, ಕ್ರಮಾಂಕ ೧೫
2. ಎಪಿಗ್ರಾಫಿಯ ಕರ್ನಾಟಿಕಾ, ಐದನೆಯ ಸಂಪುಟ, ಮೈಸೂರು ಜಿಲ್ಲೆ, ಕ್ರಮಾಂಕ ೧೬೩, ಮೈಸೂರು ವಿಶ್ವವಿದ್ಯಾನಿಲಯ, ೧೯೭೬, ಪು. ೨೯೧
3. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ ಸಂಗ್ರಹದ ಓಲೆ ಕೃತಿ
4. ಕೆ. ಆರ್. ಬಸವರಾಜು : 'ವೀರಶೈವ ವೀರಸಿಂಹಾಸನ ಬಾಳೆಹಳ್ಳಿ-ಗೋಡೇಕೆರೆ, ಬೆಂಗಳೂರು, ೧೯೮೪, ಪು. ೫೪-೫೫

ಮುಳುಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು (ಕ್ರಿ.ಶ. ೧೮೨೩–೧೮೫೯) ತಾವು ರಚಿಸಿದ ಸ್ವರವಚನಗಳಲ್ಲಿ[5] ಶಿವಬಸವಸ್ವಾಮಿಗಳನ್ನು ಸ್ಮರಿಸಿದ್ದಾರೆ. ಅಲ್ಲದೆ, ಅವರು ಲಿಂಗೈಕ್ಯರಾದುದರಿಂದ ದೊರಗೆ ಚಿಂತೆಯಾಗಿದೆ ಎಂಬ ಅಂಶವನ್ನು ಮತ್ತೊಂದು ಸ್ವರವಚನದಲ್ಲಿ ದಾಖಲಿಸಿದ್ದಾರೆ.[6]

ಬಾಲಲೀಲಾ ಮಹಾಂತಸ್ವಾಮಿಗಳು ಲಿಂಗೈಕ್ಯರಾದ ಕ್ರಿ.ಶ. ೧೮೫೯ಕ್ಕಿಂತ ಮೊದಲೇ ಶಿವಬಸವಸ್ವಾಮಿಗಳು ಲಿಂಗೈಕ್ಯರಾದದ್ದು ಸ್ಪಷ್ಟ. ಶಕ ೧೭೭೦ರ ಅಂದರೆ ಕ್ರಿ.ಶ. ೧೮೪೮ರ ದಾಖಲೆಯೇ ಅವರ ಬಗೆಗೆ ತಿಳಿಸುವ ಅರ್ವಾಚೀನ ಉಲ್ಲೇಖ. ಹೀಗಾಗಿ ಶಿವಬಸವ ದೇಶಿಕೇಂದ್ರರು ಕ್ರಿ.ಶ. ೧೮೪೮-೧೮೫೯ರ ನಡುವಣ ಅವಧಿಯಲ್ಲಿ ಲಿಂಗೈಕ್ಯರಾಗಿದ್ದಾರೆ.

---

5. ಶಿ. ಶಿ. ಬಸವನಾಳ (ಸಂ.) : ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯದರ್ಪಣ, ಧಾರವಾಡ, ೧೯೫೨, ಪು. ೧೬೩, ೧೬೪
6. ಅದೇ, ಪು. ೧೭೧

ಎಂ. ಬಿ. ಪಾಟೀಲ

# ತುಮಕೂರು ಜಿಲ್ಲೆಯ ವಾಣಿಜ್ಯ ವೈಭವ

ತುಮಕೂರು ಜಿಲ್ಲೆಯು ಕರ್ನಾಟಕದ ಜಿಲ್ಲೆಗಳಲ್ಲಿ ವಿಸ್ತೀರ್ಣ ಮತ್ತು ಜನಸಂಖ್ಯೆಯ (ವಿಸ್ತೀರ್ಣ : ೧೦,೫೯೮ ಚ.ಕಿ.ಮೀ. ; ಜನಸಂಖ್ಯೆ : ೧೯.೭೭ ಲಕ್ಷ) ಮಾನದಿಂದ ೧೯೮೧ರ ವೇಳೆಗೆ ಎಂಟನೆಯ ಸ್ಥಾನದಲ್ಲಿಯೂ ತೆಂಗಿನ ಉತ್ಪಾದನೆ (೮೧ ಸಾವಿರ ಹೆಕ್ಟೇರ್ ತೆಂಗುಪ್ರದೇಶ) ಮತ್ತು ಪಶು ಸಂಪತ್ತಿನಲ್ಲಿ (೫.೫ ಲಕ್ಷ ಕುರಿಗಳು) ಮೊದಲನೆಯ ಸ್ಥಾನದಲ್ಲಿಯೂ ರಾಗಿ ಬೆಳೆಯಲ್ಲಿ (೧.೭೦ ಲಕ್ಷ ಹೆಕ್ಟೇರ್ ಪ್ರದೇಶ) ಎರಡನೆಯ ಸ್ಥಾನದಲ್ಲಿಯೂ ಇದ್ದಿತು. ಈ ಜಿಲ್ಲೆಯು ಇಂದಿಗೂ ಹಳೆಯ ಮೈಸೂರು ಪ್ರದೇಶದಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಒಂದೆಂದು ಪರಿಗಣಿಸಲ್ಪಡುವುದು. ಕರ್ನಾಟಕದ ಇತರೇ ಜಿಲ್ಲೆಗಳಂತೆ ಇದು ಸಹಾ ಇತಿಹಾಸದ ಉದ್ದಗಲಕ್ಕೂ ತನ್ನದೇ ಆದ ಏಳುಬೀಳುಗಳೊಂದಿಗೆ ಹಲವಾರು ವಿಧದ ವಾಣಿಜ್ಯ ವೈಭವವನ್ನು ಮೆರೆದಿದೆ.

**ಪ್ರಾಚೀನ ಮತ್ತು ಮಧ್ಯಕಾಲೀನ ಪರಿಸ್ಥಿತಿ :** ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ನಮೂದಿಸಲ್ಪಟ್ಟಿರುವ ಅನೇಕ ಪ್ರಕಾರದ ವರ್ತಕರೆಂದರೆ ಸೆಟ್ಟಿ ಬಣಂಜಗರು, ಸೆಟ್ಟಿಗುತ್ತ, ನಕರ, ಮುಮ್ಮುರಿದಂಡರು, ವಡ್ಡವ್ಯವಹಾರಿ, ಹಲರು, ಎಳಮೆ ಮುಂತಾದವರು. ಈ ಜಿಲ್ಲೆಯ ಶಾಸನಗಳಲ್ಲಿಯೂ ಇವರು ಹೆಸರಿಸಲ್ಪಟ್ಟಿರುವರು. ಇವರು ಶೈವ, ವೈಷ್ಣವ ಮತ್ತು ಜೈನ ಮತಾವಲಂಬಿಗಳಾಗಿದ್ದರು. ಈ ಜಿಲ್ಲೆಯಲ್ಲಿಯ ವರ್ತಕರು ಮುಖ್ಯವಾಗಿ ಶೈವರಾಗಿದ್ದರು. ಅಂದಿನ ನಕರರೇ ಇಂದು ನಗರ್ತರು ಎನಿಸಿಕೊಂಡಿದ್ದಾರೆ. ತಿಪಟೂರು ತಾಲ್ಲೂಕಿನ ಅಲ್ಬೂರು ಶಾಸನ (ಕ್ರಿ. ಶ. ೧೨೧೪), ಕೋಟಿನಾಯಕನಹಳ್ಳಿಯ ಶಾಸನ (ಕ್ರಿ. ಶ. ೧೪೯೯), ಪಾವಗಡ ತಾಲ್ಲೂಕಿನ ನಿಡುಗಲ್ಲುಬೆಟ್ಟದ ಶಾಸನ (ಕ್ರಿ. ಶ. ೧೨೪೮) ಮೊದಲಾದುವು ನಕರರು ಆ ಪ್ರದೇಶಗಳಲ್ಲಿ ವ್ಯಾಪಾರ ಮಾಡುತ್ತಿದ್ದುದನ್ನೂ ದಾನ-ಧರ್ಮ ನೀಡಿದ್ದನ್ನೂ ಉಲ್ಲೇಖಿಸುತ್ತದೆ. ಮೊದಲಿನ ಎರಡು ಶಾಸನಗಳು ಬೊಮ್ಮಸೆಟ್ಟಿ ಮತ್ತು ಸೂರಿಸೆಟ್ಟಿ ಎಂಬ ಈರ್ವರು ನಕರರನ್ನು ಸೂಚಿಸುತ್ತವೆ. ಅದರಂತೆ ಮಧುಗಿರಿ ತಾಲ್ಲೂಕಿನ ಕ್ರಿ. ಶ. ೧೬೫೬ರ ಹೊಳವನಹಳ್ಳಿಯ ಶಾಸನವು ವರ್ತಕರಲ್ಲದೆ, ಸ್ಥಳಿಯ ಆಯಗಾರರೂ (ಆಯಪಂಚಾಳರು) ಸ್ಥಳೀಯ ಕಾಳಿಕಾ, ಕಾಟೇಶ್ವರ, ದುರ್ಗೆ ಮತ್ತು ಮಹಾಕಾಳಿ ದೇವರುಗಳಿಗೆ ತಮ್ಮ ಆಯದಲ್ಲಿ ಸ್ವಲ್ಪಭಾಗವನ್ನು ನೀಡುತ್ತಿದ್ದುದಾಗಿ ವಿವರಿಸುವುದು.

ಶಿರಾ ತಾಲ್ಲೂಕಿನ ಕವಡಗೆರೆಯ ೧೧೮೯ರ ಶಾಸನದಲ್ಲಿ ನಾನಾದೇಶಿ, ಉಭಯ ನಾನಾದೇಶಿಯರನ್ನು ಕುರಿತ "ವಡ್ಡವ್ಯವಹಾರಿ ಮತ್ತು ಉಭಯ ನಾನಾದೇಶಿಯರಿಗೆ ಮುಖ್ಯರಾದ ಹೊಯ್ಸಳ ಬಲ್ಲಾಳನ ತ್ರೈಲೋಕ್ಯ ಪಟ್ಟಣಸ್ವಾಮಿ ಇರುಗಿಸೆಟ್ಟಿ" ಎಂಬ ಉಲ್ಲೇಖ ಬರುವುದು. ಅದರಂತೆ, ಶಿರಾ ತಾಲ್ಲೂಕಿನ ಎಲಿಯೂರ ಶಾಸನವು (ಕ್ರಿ. ಶ. ೧೩೭೯) 'ಉಭಯ ಮಾರ್ಗದ ಬೇಹಾರಿಗಳು', ಅಂದರೆ ಎರಡೂ ಸ್ಥಳಗಳಲ್ಲಿ ವ್ಯಾಪಾರ ಮಾಡುವವರು ಎಂದು ವಿವರಿಸುವುದು. ವಡ್ಡವ್ಯವಹಾರಿಗಳು (ಹಿರಿಯ ವ್ಯಾಪಾರಸ್ಥರು) ಹೆಚ್ಚಾಗಿ ಶೈವರಾಗಿದ್ದರು. ತಮ್ಮನ್ನು ಪಂಚಮ ವಂಶದವರೆಂದು ಹೇಳಿಕೊಂಡಿರುವರು. ಇವರನ್ನು ಚಕ್ರವರ್ತಿಗಳು

ನೇಮಿಸುತ್ತಿದ್ದರು. ಇದು ಆನುವಂಶಿಕವಾಗಿ ನಡೆದು ಕೊಂಡು ಬರುತ್ತಿತ್ತು. ಇವರು ಕುಮ್ಮಟದ ಒಡೆತನ ಉಳ್ಳವರಾಗಿದ್ದು, ಪಟ್ಟಣಗಳ ಸ್ವಾಮಿಗಳಾಗಿದ್ದರು. ಕೆಲವರು ಶಾಸನಗಳನ್ನು ಹೊರಡಿಸುವ ಅಧಿಕಾರವನ್ನೂ ಹೊಂದಿದ್ದರು.

ಪ್ರಾಚೀನ-ಮಧ್ಯಕಾಲೀನ ದಕ್ಷಿಣಭಾರತದ ಚರಿತ್ರೆಯಲ್ಲಿ ಸುಪ್ರಸಿದ್ಧವಾಗಿದ್ದ ವ್ಯಾಪಾರಿಗಳ ನಿಗಮ 'ಅಯ್ಯಾಹೊಳೆ ೫೦೦'ರ ಉಲ್ಲೇಖವು ತಿಪಟೂರು ತಾಲ್ಲೂಕಿನ ಕ್ರಿ. ಶ. ೧೨೦೫ರ ಅಲ್ಲೂರು ಶಾಸನದಲ್ಲಿ ಬರುವುದು. ಈ ಶಾಸನವು ಅಲಂಬೂರು (ಅಲ್ಲೂರು) ದಕ್ಷಿಣಭಾರತದಲ್ಲಿ ಸುಪ್ರಸಿದ್ಧ ವ್ಯಾಪಾರಿ ಕೇಂದ್ರವೂ ಅಯ್ಯಾಹೊಳೆ ೫೦೦ ವ್ಯಾಪಾರಿ ನಿಗಮದ ಸ್ಥಳೀಯ ಉಗ್ರಾಣವೂ ಆಗಿದ್ದಿತೆಂದು ವಿವರಿಸುವುದು.

**ನಗರಾಡಳಿತದಲ್ಲಿ ಪ್ರಮುಖಸ್ಥಾನ:** ತಿಪಟೂರು ತಾಲ್ಲೂಕಿನ ಘಟಕರನಕೆರೆ (ಕ್ರಿ. ಶ. ೧೨೮೫) ಮತ್ತು ಅಲ್ಲೂರು, ತುರುವೆಕೆರೆ ತಾಲ್ಲೂಕಿನ ಸಂಪಿಗೆ (ಕ್ರಿ. ಶ. ೧೨೩೮), ಪಾವಗಡ ತಾಲ್ಲೂಕಿನ ತೂಬಿನಕುಂಟೆ (ಕ್ರಿ. ಶ. ೧೫೫೬), ತಿಪಟೂರಿನ ಶಿವರ (ಕ್ರಿ.ಶ. ೧೫೦೦) —ಇಲ್ಲಿ ದೊರೆತ ಶಾಸನಗಳು ನಗರಾಡಳಿತದಲ್ಲಿ ಈ ವಣಿಕಬಂಧುಗಳು ಹೊಂದಿದ್ದ ಅತ್ಯುಚ್ಚ ಸ್ಥಾನಗೌರವವನ್ನು ಸೂಚಿಸುತ್ತವೆ. ಉದಾಹರಣೆಗೆ, ಘಟಕನಕೆರೆಯಲ್ಲಿ ಕ್ರಿ. ಶ. ೧೨೮೫ ರಿಂದ ಒಂದು ವರ್ಷ ಕಾಲ ಕೀರ್ತಿಸೆಟ್ಟಿ ಪಟ್ಟಣಸ್ವಾಮಿಯಾಗಿದ್ದರೆ, ಶಿವರಕ್ಕೆ ಮಾದಿಸೆಟ್ಟಿಯೂ ಅಲ್ಲೂರಿಗೆ ಮಹಾದೇವಸೆಟ್ಟಿಯೂ ಮಂಡಲಸ್ವಾಮಿಯಾಗಿದ್ದರು. ವರ್ತಕರಿಗೆ ನ್ಯಾಯಾಧಿಕಾರದ ಅಧಿಕಾರವು ಕೊಡಲ್ಪಟ್ಟಿತ್ತೆಂಬುದನ್ನು ಶಿರಾ ತಾಲ್ಲೂಕಿನ ಎಲಿಯೂರು ಶಾಸನವು (ಕ್ರಿ. ಶ. ೧೩೭೯) ಉಲ್ಲೇಖಿಸುವುದು. ಈ ಮಂಡಲಸ್ವಾಮಿಯರು ಸ್ಥಳೀಯ ಸ್ವಯಮಾಡಳಿತ ಸಂಸ್ಥೆಗಳ ಮುಖ್ಯಸ್ಥರಾಗಿರುತ್ತಿದ್ದರು.

ಕ್ರಿಸ್ತಶಕ ೧೩೭೯ರ ಶಿರಾ ಎಲಿಯೂರು ಶಾಸನವು, ವ್ಯಾಪಾರಕ್ಕೆ ಹೋದ ವರ್ತಕರನ್ನು (ಪೃಥ್ವಿಸೆಟ್ಟಿಯರು) ಯಾವುದೇ ಗ್ರಾಮಪ್ರದೇಶದ ಪ್ರಮುಖರು ವೀಳೆಯ ಮತ್ತು ಉಡುಗೊರೆಗಳನ್ನು ಕೊಟ್ಟು ಬರಮಾಡಿಕೊಳ್ಳುತ್ತಿದ್ದರೆಂಬುದನ್ನು ದಾಖಲಿಸಿದೆ. ವಿಜಯನಗರದ ಅರಸು ಹರಿಹರನು, ಎಲಿಯೂರಿನ ವಿನ್ನಾತಸೆಟ್ಟಿಯ ಮಕ್ಕಳಾದ ನಾಗೀಸೆಟ್ಟಿ ಮತ್ತು ಕಾಮಿಸೆಟ್ಟಿಯರಿಗೆ ಪಲ್ಲಕ್ಕಿ, ಕಳಸದ ಬಳಿಯ ಸತ್ತಿಗೆ, ಗ್ರಾಮ, ಗದ್ಯಾಣಗಳ ಮರ್ಯಾದೆ ನೀಡಿದ್ದಲ್ಲದೆ, ವ್ಯಾಪಾರದ ಕೆಲವು ಸೌಕರ್ಯಗಳನ್ನು ಕಲ್ಪಿಸಿಕೊಟ್ಟನು. ಜೊತೆಗೆ, ಈ ಸಂಗತಿಯನ್ನು ಸಾರ್ವಜನಿಕರ ಗಮನಕ್ಕೆ ತರುವುದಕ್ಕಾಗಿ ಗೌಡ, ನಾಯಕ, ಹೆಗ್ಗಡೆ, ಸೆಟ್ಟಿಯರಿಂದ ನಿರೂಪ ಹೊರಡಿಸಲಾಯಿತು. ಈ ಪೃಥ್ವಿಸೆಟ್ಟಿಯರು ಆನೆ, ಕುದುರೆ, ಎತ್ತು, ಹಸು ಮುಂತಾದ ಪ್ರಾಣಿಗಳನ್ನು ಸರಕು ಸಾಗಾಣಿಕೆಗೆ ಉಪಯೋಗಿಸುತ್ತಿದ್ದರು. ಇವರು ನವರತ್ನ ಹಾಗೂ ವಜ್ರವೈಡೂರ್ಯಗಳ ವ್ಯಾಪಾರ ಮಾಡುತ್ತಿದ್ದರು. ಗುಬ್ಬಿ ತಾಲ್ಲೂಕಿನ ಚಾಮನಹಳ್ಳಿಯ ಕ್ರಿ. ಶ. ೧೬೭೨ರ ಶಾಸನವು "ವಜ್ರಸಿಂಹಾಸನದಲ್ಲಿ ಕುಳಿತಿರುವಂತಹ ರಾರಾಸೆಟ್ಟಿ ಪಟ್ಟಣಸ್ವಾಮಿಗಳು" ಎಂದು ವಿವರಿಸುವುದು. 'ವೈಸಣಿಗೆ' ಎಂಬುದು ವರ್ತಕರು ಕುಳಿತುಕೊಳ್ಳುವ ಗೌರವಯುತವಾದ ವಿಶೇಷವಾದ ಆಸನವಾಗಿತ್ತು.

ಅನೇಕ ಸಂದರ್ಭಗಳಲ್ಲಿ ಈ ವರ್ತಕರು ರಾಜನ ಕರ್ತವ್ಯಕ್ಕೆ ಬದ್ಧರಾಗಿ ಹೋರಾಡುತ್ತಿದ್ದರು. ಗುಬ್ಬಿ ತಾಲ್ಲೂಕಿನ ಅರೆಕೆರೆಯ ಕ್ರಿ. ಶ. ೯೬೫ರ ಮತ್ತು ತಿಪಟೂರಿನ ಕ್ರಿ. ಶ. ೧೨೬೦ರ ಶಾಸನಗಳು ಇಂತಹ ವರ್ತಕರನ್ನು 'ಎರೆವೆಸ' ಎಂದು ಸಂಬೋಧಿಸಿವೆ.

**ಸಂತೆಯ ಉಲ್ಲೇಖ :** ಸಂತೆಯನ್ನು ನೆರವೇರಿಸುವದರ ಮೂಲಕ ಗ್ರಾಮಗಳನ್ನು ಪಟ್ಟಣಗಳನ್ನಾಗಿ ಪರಿವರ್ತಿಸುವಲ್ಲಿ ಸ್ಥಳೀಯ ವರ್ತಕರು ಪ್ರಮುಖಪಾತ್ರವನ್ನು ವಹಿಸುತ್ತಿದ್ದರು. ದೂರದ ವರ್ತಕರು ಸಂತೆಯ ಸ್ಥಳದಲ್ಲಿ ಖಾಯಂ ಆಗಿ ವಾಸಿಸಲು ಅವರಿಗೆ ಅನೇಕ ಅನುಕೂಲತೆಗಳನ್ನೂ ರಿಯಾಯತಿಗಳನ್ನೂ ಒದಗಿಸಲಾಗುತ್ತಿತ್ತು. ಗುಬ್ಬಿಯ ಚಾಮನಹಳ್ಳಿಯ ಶಾಸನವು (ಕ್ರಿ. ಶ. ೧೬೭೨) ಇದನ್ನು ವಿವರಿಸುತ್ತದೆ. ಇದೇ ತಾಲ್ಲೂಕಿನ ಕ್ರಿ. ಶ. ೧೨೬೬ರ ನಿಟ್ಟೂರಿನ ಶಾಸನವೂ ಈ ಸ್ಥಳಗಳು ಸಂತೆ ನಡೆಯುವ ಮುಖ್ಯಸ್ಥಳಗಳು ಆಗಿದ್ದವೆಂದು ಉಲ್ಲೇಖಿಸುತ್ತದೆ. ಚಿಕ್ಕನಾಯಕನಹಳ್ಳಿಯ ಕ್ರಿ. ಶ. ೧೧೬೦ರ ಹೆಗ್ಗೆರೆ ಜೈನಶಾಸನವು,

ಸಂತೆಯಲ್ಲಿ ಉಪಯೋಗಿಸುತ್ತಿದ್ದ ಅಳತೆಯ ಮಾಪನಗಳನ್ನು ಕುರಿತು ವಿವರಣೆ ನೀಡುತ್ತಿದ್ದು, ಜೀರಿಗೆ, ಸಾಸಿವೆ, ಮೆಣಸು, ಶುಂಠಿ, ಅರಿಷಿಣ, ಭತ್ತ, ಕಡಲೆ, ಗೋಧಿ, ಉದ್ದು, ತೊಗರಿ, ಇತ್ಯಾದಿ ದವಸ-ಧಾನ್ಯಗಳನ್ನು ಕೊಳಗ, ಬಳ್ಳ, ಅದ್ದನಗಳಿಂದ ಅಳೆಯುತ್ತಿದ್ದುದಾಗಿ ತಿಳಿಸುವುದು. ಮೈಸೂರು ಅರಸರ(ಚಿಕ್ಕದೇವರಾಜಒಡೆಯರ) ಕಾಲದಲ್ಲಿ ಮತ್ತು ನಂತರದ ಟಿಪ್ಪುವಿನ ಕಾಲದಲ್ಲಿ, ರಾಜ್ಯದಲ್ಲೆಲ್ಲಾ ತೂಕ ಮತ್ತು ಅಳತೆಗಳಲ್ಲಿ ಸಮಾನತೆಯನ್ನು ಕಾಯ್ದುಕೊಳ್ಳಲು ಅನೇಕ ಸುಧಾರಣೆಗಳನ್ನು ತರಲಾಯಿತು. ಆದರೆ ಹಲವು ವಿಧದ ವಸ್ತುಗಳ ತೂಕದಲ್ಲಿಯ ವ್ಯತ್ಯಾಸವು ೧೯೪೦ರವರೆಗೂ ಮುಂದುವರೆದಿತ್ತು. ಉದಾಹರಣೆಗೆ, ಕೊಬ್ಬರಿಯನ್ನು ತಿಪಟೂರಿನ ಅರಸಿಕೇರಿಯಲ್ಲಿ ಒಂದು ಮಣಕ್ಕೆ ಮುವ್ವತ್ತೊಂದುವರೆ ಪೌಂಡು (ಬ್ರಿಟಿಷ್) ತೂಗುತ್ತಿದ್ದರೆ, ಬೆಂಗಳೂರಿನಲ್ಲಿ ಅದು ೨೫ ಪೌಂಡು ಮತ್ತು ಮೈಸೂರಿನಲ್ಲಿ ೨೪ ಪೌಂಡಿಗೆ ಸಮಾನವಾಗಿತ್ತು.

ಇತ್ತೀಚಿನ ಕಾಲ : ಮೊಗಲರ ಆಳ್ವಿಕೆಯ ಕಾಲದಲ್ಲಿ (ದಿಲಾವರಖಾನ್ : ೧೭೨೪–೧೭೫೬) ಸಿರಾವು ೫೦ ಸಾವಿರ ಮನೆಗಳಿಂದ ಕೂಡಿದ ವೈಭವಯುತ ನಗರವಾಗಿತ್ತು. ಸಿರಾದ ಮಲ್ಲಿಕರಿಹಾನ್ ಸುಬೇದಾರನ ಗೋರಿಯ ಮೇಲಿರುವ ಪರ್ಶಿಯನ್ ಶಾಸನವು ಸಿರಾ ನಗರದ ಗತವೈಭವವನ್ನು ಸೂಚಿಸುವುದಲ್ಲದೆ, ಅದರ ಸೌಂದರ್ಯವನ್ನೂ ವಿವರಿಸುತ್ತದೆ. ಅನಂತರ ೧೭ ಮತ್ತು ೧೮ನೇ ಶತಮಾನಗಳಲ್ಲಿ ಉಂಟಾದ ರಾಜಕೀಯ ಅಸ್ಥಿರತೆಗಳಿಂದಲೂ ಮರಾಠರು ಕೈಗೊಂಡ ಲೂಟಿಗಳಿಂದಲೂ ಅನೇಕ ನಗರಗಳು ತಮ್ಮ ವ್ಯಾಪಾರಿ ವೈಭವಗಳನ್ನು ಕಳೆದುಕೊಂಡವು. ಸಿರಾ ನಗರದಲ್ಲಿ ಮನೆಗಳ ಸಂಖ್ಯೆಯು ೩,೦೦೦ಕ್ಕೆ ಇಳಿಯಿತು. ಟಿಪ್ಪುವಿನ ಆಳ್ವಿಕೆಯಲ್ಲಿ ವರ್ತಕರು ಅನೇಕ ಬಗೆಯ ಕಿರುಕುಳವನ್ನು ಸಹಿಸಬೇಕಾಯಿತು. ಅಲ್ಲದೆ, ಅವನು ಹಲವು ವಸ್ತುಗಳ ಮೇಲೆ ಏಕಸ್ವಾಮ್ಯ ವ್ಯಾಪಾರಿ ನೀತಿ ಮತ್ತು ನಿಯಂತ್ರಿತ ಹೊರದೇಶದ ವ್ಯಾಪಾರದ ನೀತಿಯನ್ನು ಅನುಸರಿಸಿದ್ದರಿಂದ ಇದು ನಿರ್ಬಂಧರಹಿತ ವ್ಯಾಪಾರಕ್ಕೆ ಅಡ್ಡಿಯನ್ನು ಉಂಟುಮಾಡಿತು. ಟಿಪ್ಪುವಿನ ಮರಣಾನಂತರ ಉತ್ತರದೇಶದ ಅನೇಕ ಮಾರವಾಡಿ, ಗುಜರಾತಿ ವ್ಯಾಪಾರಸ್ಥರು ಇಲ್ಲಿಗೆ ಬಂದು ನೆಲಸಲು ಅನುಕೂಲವಾಯಿತು. ಇದಕ್ಕೆ ಬ್ರಿಟಿಷರ ಆಡಳಿತ ನೀತಿಯು ತುಂಬಾ ಸಹಾಯಕವಾಯಿತು.

ಬುಕಾನನ್ ಭೇಟಿ : ಕಂಪನಿ ಸರ್ಕಾರದಿಂದ ನಿಯಮಿಸಲ್ಪಟ್ಟ ಸೈನ್ಯದ ವೈದ್ಯಾಧಿಕಾರಿ ಬುಕಾನನ್ ೧೮೦೦ರ ಆಗಸ್ಟ್ ತಿಂಗಳಲ್ಲಿ ತುಮಕೂರು ಜಿಲ್ಲೆಯ ಅನೇಕ ಸ್ಥಳಗಳನ್ನು ಸಂದರ್ಶಿಸಿ, ಇಲ್ಲಿಯ ಕೃಷಿಕರ ಜೀವನ, ಸಾಮಾಜಿಕ ಜೀವನ, ಬೇಸಾಯ ಕ್ರಮ ಮುಂತಾದವುಗಳೊಂದಿಗೆ ಇಲ್ಲಿಯ ಸಮಗ್ರ ವಾಣಿಜ್ಯ ವ್ಯವಹಾರಗಳನ್ನು ಕುರಿತು ವಿವರವಾದ ಮಾಹಿತಿಯನ್ನು ಒದಗಿಸಿರುವನು. ಅವನು ತನ್ನ ಅಧ್ಯಯನ–ಪ್ರವಾಸದಲ್ಲಿ ಭೇಟಿ ಕೊಟ್ಟ ಪ್ರಮುಖ ಸ್ಥಳಗಳು ಯಾವುವೆಂದರೆ ತುಮಕೂರು (೧೪ ಆಗಸ್ಟ್), ಗುಬ್ಬಿ, ಶಿರಾ, ಮಧುಗಿರಿ, ತುರುವೇಕೆರೆ (ಆಗಸ್ಟ್ ೨೨), ಚಿಕ್ಕನಾಯಕನಹಳ್ಳಿ (೨೦ ಆಗಸ್ಟ್) ಹಾಗೂ ಮೂಗನಾಯಕನಕೋಟೆ ಮುಂತಾದವುಗಳು. ಅವನು ನೀಡಿರುವ ಕೆಲವು ಸ್ಥಳಗಳ ವಾಣಿಜ್ಯದ ವಿವರ ಈ ರೀತಿ ಇರುವುದು :

ತುಮಕೂರು : ಇಲ್ಲಿಯ ಮನೆಗಳ ಸಂಖ್ಯೆ ೫೦೦–೬೦೦ ; ಗುಬ್ಬಿ : ೩೬೦ ಮನೆಗಳು, ೧೫೪ ಅಂಗಡಿಗಳು. ಇಲ್ಲಿಯ ಕೋಮಟಿಗಳು ಮತ್ತು ಬಣಜಿಗರು ೧೮೦೨ರಲ್ಲಿ ಕನ್ನಿಕಾಪರಮೇಶ್ವರಿ ದೇವಾಲಯದ ಸ್ಥಾಪನೆಯ ಬಗ್ಗೆ ಮಾಡಿದ ಬಹು ದೀರ್ಘ ವ್ಯಾಜ್ಯದ ಬಗ್ಗೆ ಬುಕಾನನ್ ಹೇಳುವನು. ಅದನ್ನು ಬಗೆಹರಿಸಲು ಸಾಧ್ಯವಾಗದೇ ದಿವಾನ್ ಪೂರ್ಣಯ್ಯನವರು ಈ ಎರಡು ಬಣಗಳ ವಾಸಸ್ಥಳದ ಮಧ್ಯೆ ಗೋಡೆಯನ್ನು ಕಟ್ಟಲು ಆಜ್ಞಾಪಿಸಿದುದಾಗಿ ವಿವರಿಸುತ್ತಾನೆ. ಗುಬ್ಬಿಯು ಅಂದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿಗೆ ಬಹುದೂರದಿಂದ ವ್ಯಾಪಾರಸ್ಥರು ಬರುತ್ತಿದ್ದರು. ಈತನು ನೀಡಿರುವ ವ್ಯಾಪಾರದ ಮುಖ್ಯವಸ್ತುಗಳ ವಿವರ : ಒರಟು ಹತ್ತಿಬಟ್ಟೆ (ಬಿಳಿಯದು ಮತ್ತು ಬಣ್ಣದ್ದು), ಕಂಬಳಿಗಳು, ಅಡಿಕೆ (ಕೆಳದರ್ಜೆಯದು), ತೆಂಗಿನಕಾಯಿ, ಬೆಲ್ಲ, ಹುಣಸೆ, ಗೋಧಿ, ಅಕ್ಕಿ, ಅಂಟುವಾಳ, ಕಬ್ಬಿಣ ಮತ್ತು ಉಕ್ಕು. ಗುಬ್ಬಿಯು ದಕ್ಷಿಣ ಪ್ರಸ್ಥಭೂಮಿಯಲ್ಲಿ ವ್ಯಾಪಾರದ ಪಡಮೂಲೆಯ ಸ್ಥಳವಾಗಿತ್ತೆಂದು ಬರೆದಿರುವನು. ಇದು

ದಕ್ಷಿಣದ ಮೂಡಬಿದ್ರೆ, ಸುಬ್ರಮಣ್ಯ, ಕೊಡಗು, ಮಂಗಳೂರು ಮತ್ತು ಮಲಬಾರಗಳೊಂದಿಗೆ ವ್ಯಾಪಾರ ಸಂಬಂಧ ಪಡೆದಿತ್ತಾಗಿ ಹೇಳಿರುವನು. ಈ ಸ್ಥಳಗಳಿಂದ ಬರುತ್ತಿದ್ದ ಆಮದು ವಸ್ತುಗಳ ಉಲ್ಲೇಖ ಇದೆ. ಇದು ನಗರ (ಹೊಸನಗರ) ಮಲಯಾಳ ಪ್ರದೇಶದ ವ್ಯಾಪಾರಸ್ಥರ ಬಹುದೊಡ್ಡ ತಂಗುವ ಸ್ಥಳವಾಗಿತ್ತೆಂದೂ ಅವರು ಇಲ್ಲಿಗೆ ಕರಿಮೆಣಸು, ಅಡಿಕೆ (ದೇಶಾವರ) ಉತ್ಪತ್ತಿ, ಬೆಳ್ಳುಳ್ಳಿ, ಗೋಧಿ, ಬೇಳೆ ಮತ್ತು ಮಸಾಲೆ ಪದಾರ್ಥಗಳನ್ನು ಮಾರಲು ಬರುತ್ತಿದ್ದರೆಂದೂ ವಿವರಿಸಿರುವನು. ಕೋಲಾರ, ಬೆಂಗಳೂರು, ನೈಜಾಮ ಪ್ರದೇಶ, ಹಾವೇರಿ ಮುಂತಾದ ಮರಾಠಾ ರಾಜ್ಯಗಳ ವ್ಯಾಪಾರಿಗಳು ಇಲ್ಲಿಗೆ ವ್ಯಾಪಾರಕ್ಕೆ ಬರುತ್ತಿದ್ದುದಾಗಿ ಹೇಳಿರುವನು. ಗುಬ್ಬಿಯ ವ್ಯಾಪಾರಸ್ಥರು ತಮಿಳುನಾಡಿನ ಅರ್ಕಾಟ, ಸೇಲಂ, ಕೃಷ್ಣಗಿರಿ ಮತ್ತು ವಲ್ಲಾಜಪೇಟೆಗೆ ಇಲ್ಲಿಂದ ಅಡಿಕೆ, ಕರಿಮೆಣಸುಗಳ ವ್ಯಾಪಾರಕ್ಕೆ ಹೋಗುತ್ತಿದ್ದರು ಮತ್ತು ಅಲ್ಲಿಂದ ಬರುವಾಗ್ಗೆ ಮದ್ರಾಸು ಬಂದರಿನ ಮೂಲಕ ಆಮದು ಮಾಡಲ್ಪಟ್ಟ ಯೂರೋಪಿನ ವಸ್ತುಗಳನ್ನು ತರುತ್ತಿದ್ದರು. ಇಲ್ಲಿಯ ವಾರದ ಸಂತೆಯಲ್ಲಿ ೫೦–೧೦೦ ಗಾಡಿ ಲೋಡು ಅಡಿಕೆ ಮತ್ತು ತಿಪಟೂರಿನಿಂದ ೨೦–೪೦ ಗಾಡಿಗೆ ಕಡಿಮೆ ಇಲ್ಲದಷ್ಟು ಕೊಬ್ಬರಿ ಮಾರಾಟ ಆಗುತ್ತಿದ್ದಿತೆಂದು ವಿವರಿಸಿರುವನು.

ಶಿರಾ ಮತ್ತು ಗುಬ್ಬಿಯ ನಡುವೆ ಅಂತರ ಬಹಳ ಕಡಿಮೆ ಇದ್ದರೂ ಸ್ಥಳೀಯವಾಗಿ ವ್ಯಾಪಾರದಲ್ಲಿ ಉಪಯೋಗಿಸುತ್ತಿದ್ದ ಅಳತೆ–ತೂಕದ ಮಾಪನಗಳಲ್ಲಿ ಬಹಳ ವ್ಯತ್ಯಾಸ ಇದ್ದುದಾಗಿ ನಮೂದಿಸಿರುವನು. ಸ್ಥಳೀಯ ವಂಚಕ ವರ್ತಕರು ಇದರ ಲಾಭವನ್ನು ತೆಗೆದುಕೊಳ್ಳದೇ ಇರುತ್ತಿರಲಿಲ್ಲ. ಮೂಗನಾಯಕಕೋಟೆಯೂ ಪೇಶ್ವೆಯವರ ಕಾಲದಲ್ಲಿ ಹೇಗೆ ವ್ಯಾಪಾರದ ಅವನತಿಯನ್ನು ಹೊಂದಿತೆಂಬುದನ್ನು ವಿವರಿಸಿರುವನು.

**ಚಿಕ್ಕನಾಯಕನಹಳ್ಳಿ :** ಚಿಕ್ಕನಾಯಕನಹಳ್ಳಿಯ ಬಳಿ ಇರುವ ಗಾಜಿನಗುಡ್ಡದಲ್ಲಿ 'ಕಾವೀ'ಕಲ್ಲುಗಳು ದೊರೆಯುತ್ತಿದ್ದವು. ಇದನ್ನು ತೆಗೆಯಲು ದೂರದ ಹೆಗ್ಗಡದೇವನಕೋಟೆ, ಚೆನ್ನರಾಯಪಟ್ಟಣ, ನರಸಿಂಹರಾಜಪುರ, ಗುಬ್ಬಿ ಮತ್ತು ಇತರೇ ಪ್ರದೇಶಗಳಿಂದ ಜನರು ಬರುತ್ತಿದ್ದರು. ಅಲ್ಲಿ ಸುಮಾರು ೬೦೦ ಮನೆಗಳು ಇದ್ದವು. ಮರಾಠರ ಪರಶುರಾಮ ಭಾವು ಇದನ್ನು ಕೊಳ್ಳೆ ಹೊಡೆದು ೫೦ ಲಕ್ಷ ರೂಪಾಯಿ ಲೂಟಿ ಮಾಡಿದನೆಂದು ಬುಕಾನನ್ ಹೇಳಿರುವನು.

**ತುರುವೇಕೆರೆ :** ಇದು ೧೩ನೆಯ ಶತಮಾನದಲ್ಲಿ ಸರ್ವಜ್ಞ ಶ್ರೀವಿಜಯನರಸಿಂಹಪುರ ಎಂಬ ಹೆಸರಿನ ಅಗ್ರಹಾರವಾಗಿತ್ತು. ಇಲ್ಲಿಯ ಬಸವನ ದೇವಾಲಯ ಎದುರಿಗೆ ಇರುವ ಕಲ್ಲಿನ ತಕ್ಕಡಿ 'ಚಿಂತಾಲು ಕಂಬ'ವು ಹಿಂದಿನ ಕಾಲದಲ್ಲಿ (೧೬–೧೭ನೆಯ ಶತಮಾನ) ಸುಪ್ರಸಿದ್ಧ ಹತ್ತಿ ಅರಳೆಯ ವ್ಯಾಪಾರ ಕೇಂದ್ರವಾಗಿತ್ತೆಂದು ತಿಳಿದುಬರುವುದು. ನಗರದ ಆ ಭಾಗವನ್ನು ಇಂದಿಗೂ ಅರಳೇಪೇಟೆ ಎಂದು ಕರೆಯುತ್ತಾರೆ. ಅಂದಿನ ದಿನಗಳಲ್ಲಿ ಹತ್ತಿಯನ್ನು ನಿಖರವಾಗಿ ತೂಕ ಮಾಡಲು ಈ ಕಲ್ಲಿನ ತಕ್ಕಡಿಯನ್ನು ಉಪಯೋಗಿಸುತ್ತಿದ್ದರೆಂದು ಕಂಡುಬರುವುದು.

**ಆಧುನಿಕ ಬ್ಯಾಂಕಿಂಗ್ ಪ್ರಾರಂಭ :** ಭಾರತದಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮವು ೧೮೬೫ರ ಸುಮಾರಿಗೆ ಪ್ರಾರಂಭವಾಯಿತು. (ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಈ ಉದ್ಯಮವು ೧೮೬೩ರಲ್ಲಿ ಧಾರವಾಡದಲ್ಲಿಯೂ ನಂತರ ೧೮೬೮ರಲ್ಲಿ ಬೆಂಗಳೂರಿನಲ್ಲಿಯೂ ಪ್ರಾರಂಭವಾಯಿತು). ಆರು ವರ್ಷಗಳ ನಂತರ ತುಮಕೂರು ಜಿಲ್ಲೆಯಲ್ಲಿ ಆಧುನಿಕ ಬ್ಯಾಂಕಿಂಗ್ ಪ್ರಾರಂಭವಾಯಿತು. ೧೮೭೦ ರಿಂದ ೧೮೭೬ರ ಅವಧಿಯಲ್ಲಿ ಈ ಜಿಲ್ಲೆಯಲ್ಲಿ ಈ ಮುಂದಿನಂತೆ, ೭ ಬ್ಯಾಂಕಿಂಗ್ ಕಂಪನಿಗಳು ಪ್ರಾರಂಭಿಸಲ್ಪಟ್ಟವು :

೧. ಸೇವಿಂಗ್ಸ್ ಬ್ಯಾಂಕ್, ತುಮಕೂರು (೧೮೭೦)(ಷೇರು ರೂ. ೫೦ ಸಾವಿರ), ೨. ಕರ್ನಾಟಕ ಬ್ಯಾಂಕ್, ತುಮಕೂರು (೧೮೭೪) (ಷೇರು ರೂ. ೩೦ ಸಾವಿರ), ೩. ಶ್ರೀ ಚಾಮರಾಜೇಂದ್ರ ಬ್ಯಾಂಕ್, (೧೭೭೪) (ಷೇರು ರೂ. ೨೦ ಸಾವಿರ), ೪. ದೇವರಾಯ ಬ್ಯಾಂಕ್, ಕ್ಯಾತಸಂದ್ರ (೧೮೭೪) (ಷೇರು ರೂ. ೨೦ ಸಾವಿರ), ೫. ಶ್ರೀನಿವಾಸ ಬ್ಯಾಂಕ್, ಕ್ಯಾತಸಂದ್ರ (೧೮೭೫) (ಷೇರು ರೂ. ೨೦ ಸಾವಿರ), ೬. ಲಕ್ಷ್ಮೀವಿಲಾಸ ಬ್ಯಾಂಕ್, ತುಮಕೂರು (೧೮೭೫) (ಷೇರು ರೂ. ೩೦ ಸಾವಿರ) ಮತ್ತು ೭. ಗಂಗಾಧರೇಶ್ವರ ಬ್ಯಾಂಕ್, ಕ್ಯಾತಸಂದ್ರ (೧೮೭೬) (ಷೇರು ರೂ. ೫೦

ಸಾವಿರ). ಅಂದು ಕ್ಯಾತಸಂದ್ರವು ಪ್ರಮುಖ ವ್ಯಾಪಾರ ಉದ್ದಿಮೆ ಕೇಂದ್ರವಾಗಿ ಎರಡು ಬ್ಯಾಂಕುಗಳನ್ನು ಹುಟ್ಟು ಹಾಕಿದ ಕೇಂದ್ರವಾಗಿತ್ತೆಂಬುದು ಗಮನಾರ್ಹ.

ಅದರಂತೆ, ಸಹಕಾರಿ ವಲಯದ ಬ್ಯಾಂಕಿಂಗ್‌ನಲ್ಲಿ ಶಿರಾ (೧೯೦೬) ಮತ್ತು ಚಿಕ್ಕನಾಯಕನಹಳ್ಳಿಯಲ್ಲಿ (೧೯೦೯) ಪ್ರಾರಂಭವಾದ ನಗರ ಸಹಕಾರಿ ಬ್ಯಾಂಕುಗಳು ರಾಜ್ಯದಲ್ಲಿ ಪ್ರಾರಂಭವಾದ ಕೆಲವೇ ಅತ್ಯಂತ ಹಳೆಯ ಬ್ಯಾಂಕುಗಳು. ಮುಂದೆ ೧೯೧೩-೧೪ರಲ್ಲಿ ಮೈಸೂರು ಬ್ಯಾಂಕ್ ಲಿಮಿಟೆಡ್ ಹಾಗೂ ೧೯೩೭ರಲ್ಲಿ ಸಿಂಡಿಕೇಟ್ ಬ್ಯಾಂಕ್ ಲಿಮಿಟೆಡ್‌ಗಳು ತುಮಕೂರಿನಲ್ಲಿ ತಮ್ಮ ಪ್ರಥಮ ಶಾಖೆಯನ್ನು ತೆರೆಯುವುದರ ಮೂಲಕ ಜಿಲ್ಲೆಯ ವಾಣಿಜ್ಯ ಅಭಿವೃದ್ಧಿಗೆ ಸಹಾಯಕವಾದವು, ಇಂದು ಜಿಲ್ಲೆಯಾದ್ಯಂತ ೧೧೯ ವಾಣಿಜ್ಯ ಬ್ಯಾಂಕುಗಳ ಶಾಖೆಗಳೂ ೪೨ ಗ್ರಾಮೀಣ ಬ್ಯಾಂಕುಗಳ ಶಾಖೆಗಳೂ ಇರುವುವು (೧೯೮೮).

**ಗ್ರಾಮೀಣ ಉಳಿತಾಯ ಬ್ಯಾಂಕುಗಳ ಯೋಜನೆ (೧೯೧೫) :** ಅಂದಿನ ಮೈಸೂರು ಸರ್ಕಾರದವರು ಪ್ರಾಯೋಗಿಕವಾಗಿ ಪ್ರಾರಂಭಿಸಿದ ಈ ಯೋಜನೆಯು (ಚಕ್ರವರ್ತಿ ಯೋಜನೆ) ಹಾಸನ, ಚಿತ್ರದುರ್ಗ, ಮೈಸೂರು, ಕಡೂರು, ತುಮಕೂರು ಜಿಲ್ಲೆಗಳಲ್ಲಿ ಹಲವಾರು ವರ್ಷಗಳ ಕಾಲ ಉಪಯೋಗದಲ್ಲಿ ಇತ್ತು. ಗ್ರಾಮೀಣ ಭಾಗದ ಅಲ್ಪ ಆದಾಯದವರಲ್ಲಿ ಉಳಿತಾಯ ಮನೋಭಾವನೆಯನ್ನು ಬೆಳೆಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿತ್ತು. ಈ ಯೋಜನೆಯು ಕನಿಷ್ಠ ೩೦೦ ಜನಸಂಖ್ಯೆಗಿಂತ ಹೆಚ್ಚಾಗಿರುವ ಮತ್ತು ಯಾವುದೇ ರೀತಿಯ ಸಹಕಾರಿ ಸಂಘ ಇರದೇ ಇರುವ ಗ್ರಾಮಗಳಿಗೆ ಮಾತ್ರ ಸೀಮಿತವಾಗಿರುತ್ತಿತ್ತು. ಇದರ ಅನ್ವಯ, ಒಬ್ಬ ವ್ಯಕ್ತಿಯಿಂದ ಕನಿಷ್ಠ ಒಂದಾಣೆಯಂತೆ ತಿಂಗಳಿಗೆ ೫ ರೂಪಾಯಿಗೆ ಹೆಚ್ಚದಂತೆ ಅಲ್ಪ ಉಳಿತಾಯವನ್ನು ಸಂಗ್ರಹಿಸಲಾಗುತ್ತಿತ್ತು. ಈ ಸಂಗ್ರಹದಿಂದ ಠೇವಣಿದಾರರಿಗೆ ತಿಂಗಳಿಗೆ ಗರಿಷ್ಠ ಒಂದು ರೂಪಾಯಿಯಂತೆ, ನಾಲ್ಕು ಆಣೆಗೆ ಕಡಿಮೆ ಇಲ್ಲದಂತೆ ಹಿಂದಕ್ಕೆ ಪಡೆಯುವ ಅನುಕೂಲ ಇತ್ತು. ಈ ಯೋಜನೆಯಲ್ಲಿ ಹಣ ಸಂಗ್ರಹಿಸುವ ಪೆಟ್ಟಿಗೆಯು ಚಿಕ್ಕ 'ಹುಂಡಿ'ಡಬ್ಬದಂತೆ ಇರುತ್ತಿತ್ತು. ಅದನ್ನು ತಾಲ್ಲೂಕಿನ ಅಮಲ್‌ದಾರರು ಸೀಲು ಮಾಡುತ್ತಿದ್ದರು, ಈ ಯೋಜನೆಯನ್ನು ಸ್ಥಳೀಯ ಗ್ರಾಮದ ಪಟೇಲ ಮತ್ತು ಶಾನುಬೋಗರು ನಡೆಸುತ್ತಿದ್ದರು. ಅವರಿಗೆ ಒಂದು ರೂಪಾಯಿಗೆ ಎರಡು ಆಣೆಯಂತೆ ಸಂಗ್ರಹವಾದ ಹಣದ ಮೇಲೆ ಕಮಿಶನ್ ಕೊಡಲಾಗುತ್ತಿತ್ತು. ಇದನ್ನು ಸರ್ಕಾರವೇ ಪ್ರತ್ಯೇಕವಾಗಿ ಕೊಡುತ್ತಿತ್ತಲ್ಲದೆ, ಠೇವಣಿದಾರರಿಗೆ ಕೊಡಬೇಕಾದ ಬಡ್ಡಿಯ ಹಣದಿಂದ ಮುರಿದುಕೊಳ್ಳುತ್ತಿರಲಿಲ್ಲ.

**ವರ್ತಕರ ಜಪಾನು ಪ್ರವಾಸ (೧೯೧೬) :** ಮಾದರಿ ಮೈಸೂರೆಂದು ಪ್ರಸಿದ್ಧವಾದ ಅಂದಿನ ಮೈಸೂರು ಸರ್ಕಾರವು ರಾಜ್ಯದಲ್ಲಿ ವ್ಯಾಪಾರ ಅಭಿವೃದ್ಧಿಪಡಿಸಲು, ಅದರಲ್ಲಿಯೂ ವಿಶೇಷವಾಗಿ ಜಪಾನಿ ಪದ್ಧತಿಯ ಭತ್ತ ಸಂಗ್ರಹಣೆ ಮತ್ತು ಅದನ್ನು ಸುರಕ್ಷಿತವಾಗಿ ಇಡುವ ಕ್ರಮವನ್ನು ಅರಿಯಲು ಆರು ಜನ ವರ್ತಕರನ್ನು ಇಬ್ಬರು ಅಧಿಕಾರಿಗಳೊಂದಿಗೆ ಜಪಾನಿಗೆ ಕಳಿಸಿಕೊಟ್ಟಿತು. ಆ ವರ್ತಕರ ಪ್ರವಾಸಕ್ಕೆ ಸಾಲ ಮತ್ತು ಸಹಾಯಧನದ ಅನುಕೂಲತೆ ಒದಗಿಸಿಕೊಡಲಾಗಿತ್ತು. ರೂ. ೨,೫೦೦ ರಲ್ಲಿ ಅರ್ಧ ಸಹಾಯಧನವೂ ಅರ್ಧ ಸಾಲವೂ ಇದ್ದಿತು. ೧೯೧೬ರಲ್ಲಿ ಜಪಾನಿಗೆ ಕಳಿಸಲ್ಪಟ್ಟ ವರ್ತಕರಲ್ಲಿ ಇಬ್ಬರು ತುಮಕೂರಿನವರಾಗಿದ್ದರು. ಅವರೆಂದರೆ, ಜ. ಚೆನ್ನಪ್ಪ ಮತ್ತು ಆರ್. ಚೆನ್ನವೀರಪ್ಪ. ಇದೇ ರೀತಿ ಹೋಟೆಲ್ ಉದ್ಯಮಕ್ಕೆ ಸರ್ಕಾರವು ಸಹಾಯ ಮಾಡಿತ್ತು. ಈ ಸೌಲಭ್ಯವನ್ನು ಕೇವಲ ಮೈಸೂರಿನ ಹಾಗೂ ಬೆಂಗಳೂರಿನ ಹೋಟೆಲ್ ಉದ್ಯಮಗಳು ಬಳಸಿಕೊಂಡವು.

**ಸಂಚಾರ ಸೌಲಭ್ಯ ಸಂಪರ್ಕ ಸಾಧನಗಳು :** ವ್ಯಾಪಾರ ಅಭಿವೃದ್ಧಿಯಲ್ಲಿ ಸರ್ವಋತುಗಳಲ್ಲೂ ಉಪಯೋಗವಾಗುವ ಹೆದ್ದಾರಿಗಳು ಮತ್ತು ಇತರ ಸಂಪರ್ಕ ಸಾಧನಗಳು ವ್ಯಾಪಾರಿಗಳ ಸುರಕ್ಷತೆ ಬಗೆಗೆ ಬಹಳ ಮಹತ್ವದ ಪಾತ್ರವಹಿಸುತ್ತವೆ. ಟಿಪ್ಪುವಿನ ಮರಣಾನಂತರ (೧೭೯೯) ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಕಾಲದಲ್ಲಿ (೧೭೯೯-೧೮೩೧) ಮತ್ತು ನಂತರದ ಕಮಿಶನರ ಆಳ್ವಿಕೆಯಲ್ಲಿ (೧೮೩೧-೧೮೮೧) ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯಂತೆ ಇಲ್ಲಿಯೂ ಸಂಪರ್ಕ ಸಾಧನಗಳು ಮತ್ತು ಬ್ಯಾಂಕಿಂಗ್‌ನಲ್ಲಿ ಬಹಳ ಸುಧಾರಣೆಗಳು ಉಂಟಾದವು. ೧೮೩೧ರಲ್ಲಿ ಜಿಲ್ಲೆಯಲ್ಲಿ ಇದ್ದ ಪ್ರಮುಖ ರಸ್ತೆಗಳು ಕೇವಲ ಎರಡು. ಅವುಗಳೆಂದರೆ

ಶ್ರೀರಂಗಪಟ್ಟಣ-ಶಿರಾ ಮತ್ತು ಬೆಂಗಳೂರು-ಹರಿಹರ. ಅವು ಸಹಾ ಉತ್ತಮ ಸ್ಥಿತಿಯಲ್ಲಿ ಇರಲಿಲ್ಲ.

೧೮೭೦-೯೯ರ ಅವಧಿಯಲ್ಲಿ ಸಂಚಾರ ಸೌಲಭ್ಯಗಳಲ್ಲಿ ಬಹಳ ಸುಧಾರಣೆ ಉಂಟಾಯಿತು. ಬೆಂಗಳೂರು ತುಮಕೂರು ರೈಲುಮಾರ್ಗವು ೧೮೮೪ ಅಗಸ್ಟ್ ೧೧ರಂದು ೨೦ ಲಕ್ಷ ರೂಪಾಯಿ ವೆಚ್ಚದಲ್ಲಿ ಸಂಚಾರಕ್ಕೆ ಸಿದ್ಧವಾಯಿತು. ನಂತರ ೧೮೮೯ರಲ್ಲಿ ಹರಿಹರದವರೆಗೆ ಈ ಮಾರ್ಗವನ್ನು ವಿಸ್ತರಿಸಲಾಯಿತು. ಇದರಿಂದಾಗಿ ಬೆಂಗಳೂರು ಮೂಲಕ ಮದ್ರಾಸ್‌ವರೆಗೆ, ಹರಿಹರ ಮೂಲಕ ಉತ್ತರದೊಂದಿಗೆ ಈ ಜಿಲ್ಲೆಯು ರೈಲು ಸಂಪರ್ಕ ಪಡೆಯಿತು. ಚೌರಿಂಗ್ ಅವರ ಆಳ್ವಿಕೆಯಲ್ಲಿ (೧೮೬೨-೧೮೬೭) ಬೆಂಗಳೂರು-ತುಮಕೂರು, ಹಾಸನ, ಪೆನುಗೊಂಡ, ಬಳ್ಳಾರಿ ಮುಂತಾದ ಪ್ರದೇಶಗಳು ತುಮಕೂರಿನೊಂದಿಗೆ ರಸ್ತೆಯ ಸಂಪರ್ಕ ಪಡೆದವು.

**ಕಾಫೀ ಪಾನೀಯದ ಪ್ರಾರಂಭ :** ಸುಮಾರು ೧೮೩೪ರ ವೇಳೆಗೆ ಸರ್ ಮಾರ್ಕ್ ಕಬ್ಬನ್ ಅವರ ಆಡಳಿತದ ಅವಧಿಯಲ್ಲಿ ಬೆಂಗಳೂರಿನಲ್ಲಿ ಕಾಫೀ ಸೇವನೆಯ ಅಭ್ಯಾಸ ಪ್ರಾರಂಭವಾಯಿತು. ಮುಂದಿನ ೩೦ ವರ್ಷಗಳಲ್ಲಿ, ಅಂದರೆ ಚೌರಿಂಗ್ ಅವರ ಕಾಲದಲ್ಲಿ (ಸುಮಾರು ೧೮೬೨) ಅದು ಬಹಳ ಜನಪ್ರಿಯವಾಯಿತು. ಬಹುಶಃ ಇದೇ ಅವಧಿಯಲ್ಲೆ ಈ ಜಿಲ್ಲೆಯಲ್ಲೂ ಕಾಫಿಯ ಬಳಕೆ ರೂಢಿಯಲ್ಲಿ ಬಂದಿರಬಹುದು. ಟಿಪ್ಪುವಿನ ಕಾಲದಲ್ಲಿ ಪ್ರಾರಂಭವಾದ ರೇಷ್ಮೆ ಉದ್ದಿಮೆಯು ಕ್ರಮೇಣ ಈ ಜಿಲ್ಲೆಗೂ ಹರಡಿ ಅದು ಇಂದಿಗೂ ಮುಂದುವರೆಯುತ್ತಿದೆ.

**ನಾಣ್ಯಪದ್ಧತಿ :** ಕಳೆದ ಇನ್ನೂರು ವರ್ಷಗಳ ಹಿಂದೆ, ೧೮೫೪ರ ವರೆಗೆ ಸರ್ಕಾರಿ ಲೆಕ್ಕಪತ್ರಗಳನ್ನು ಕಂಠೀರಾಯ ಪಗೋಡ ಅಥವಾ ಹೊನ್ನುಗಳಲ್ಲಿ ಇಡಲಾಗುತ್ತಿತ್ತು. ೧೮೮೫ರಲ್ಲಿ ಕಂಪನಿ ನಾಣ್ಯಗಳು ಬಳಕೆಯಲ್ಲಿ ಬಂದವು. ೧೮೭೯ರಲ್ಲಿ ಮದ್ರಾಸು ಪ್ರೆಸಿಡೆನ್ಸಿ ಬ್ಯಾಂಕಿನಿಂದ (೧೮೪೩) ಹೊರಡಿಸಲಾದ ಕರೆನ್ಸಿ ನೋಟುಗಳು ಬೆಂಗಳೂರಿನಲ್ಲಿ ಬಳಕೆಯಲ್ಲಿ ಬಂದಾಗ ತುಮಕೂರಿಗೂ ಬಂದವು. ೧೮೫೫ರಲ್ಲಿಯ ಬೆಂಗಳೂರಿನ ಒಂದು ಮರಾಠೀ ಶಾಸನವು ಕಂಪನಿ ರೂಪಾಯಿ ವಹಿವಾಟವನ್ನು ಕುರಿತು ಉಲ್ಲೇಖಿಸುತ್ತದೆ.

ಕಮಿಶನರ ಆಡಳಿತ ಕಾಲದಲ್ಲಿ (೧೮೩೧) ಎಂಟು ಜಿಲ್ಲೆಗಳಲ್ಲಿ ತುಮಕೂರು ಸಹಾ ಒಂದಾಗಿ ಚಿತ್ರದುರ್ಗ ಡಿವಿಜನ್‌ಗೆ ಸೇರಿತ್ತು. ೧೮೬೩ರಲ್ಲಿ ಡಿವಿಜನ್ ರದ್ದಾದ ನಂತರ ಇದು ನಂದಿದುರ್ಗ ಡಿವಿಜನ್ನಿಗೆ ಸೇರಿತು. ನಂತರ ೧೮೮೨ರಲ್ಲಿ ತುಮಕೂರು ಜಿಲ್ಲೆಯನ್ನು ವಿಸ್ತರಿಸಿ, ಚಿತ್ರದುರ್ಗ ಜಿಲ್ಲೆಯನ್ನು ರದ್ದುಮಾಡಿ, ಚಿತ್ರದುರ್ಗವನ್ನು ತುಮಕೂರಿನ ಒಂದು ಸಬ್‌ಡಿವಿಜನ್ ಮಾಡಲಾಯಿತು. ೧೮೮೬ರಲ್ಲಿ ಇನ್ನೊಮ್ಮೆ ಚಿತ್ರದುರ್ಗ ಜಿಲ್ಲೆ ರಚನೆಯಾಯಿತು. ಅದುವರೆಗೆ ಚಿತ್ರದುರ್ಗಕ್ಕೆ ಸೇರಿದ್ದ ಪಾವಡವನ್ನು ತುಮಕೂರು ಜಿಲ್ಲೆಗೆ ಸೇರಿಸಲಾಯಿತು. ಶಿರಾ ತಾಲ್ಲೂಕು ಚಿತ್ರದುರ್ಗದಿಂದ ೧೮೬೬ರಲ್ಲಿಯೂ ಪಾವಗಡ ತಾಲ್ಲೂಕು ೧೮೮೬ರಲ್ಲಿಯೂ ತುಮಕೂರು ಜಿಲ್ಲೆಗೆ ವರ್ಗಾವಣೆ ಆದವು. ಈ ಆಡಳಿತಾತ್ಮಕ ಬದಲಾವಣೆಯು ಜಿಲ್ಲೆಯು ವ್ಯಾಪಾರ ಅಭಿವೃದ್ಧಿಯನ್ನು ಹೆಚ್ಚಿಸಿತು. ೧೯೨೭ರಲ್ಲಿ ಮದ್ದುಗಿರಿ ಎಂಬ ಹೆಸರು ಬದಲಾವಣೆಗೊಂಡು ಮಧುಗಿರಿಯಾಯಿತು.

ಈ ಶತಮಾನದಲ್ಲಿ ಚಿಕ್ಕನಾಯಕನಹಳ್ಳಿಯು ಸುಪ್ರಸಿದ್ಧ ನೇಕಾರಿಕೆ ಕೇಂದ್ರವಾಗಿತ್ತು. ಇಲ್ಲಿಯ ಕಂಬಳಿಗಳು ಬಹಳ ಪ್ರಸಿದ್ಧವಾಗಿದ್ದವು. ದುಪ್ಪಟಿಗಳು ಈ ಜಿಲ್ಲೆಯ ಬಹು ಭಾಗದಲ್ಲಿ ತಯಾರಾಗುತ್ತಿದ್ದವು. ಕೊರಟಗೆರೆ ಮತ್ತು ಪಾವಗಡಗಳು ಗಾಜಿನಬಳೆಯ ಉದ್ಯಮಕ್ಕೆ ಹೆಸರಾಗಿದ್ದವು. ಮರದ ಬಾಚಣಿಗೆಗಳ ತಯಾರಿಕೆಗೆ ತುಮಕೂರು ಪ್ರಸಿದ್ಧವಾಗಿತ್ತು. ಸುಮಾರು ಇನ್ನೂರು ಕುಟುಂಬಗಳು ಈ ಗೃಹ ಕೈಗಾರಿಕೆಯಲ್ಲಿ ತೊಡಗಿದ್ದವು. ಅಲ್ಲದೆ, ಇದು ಕಡಲೇಕಾಯಿ ಮತ್ತು ಹತ್ತಿ ಉತ್ಪಾದನೆಯ ಪ್ರಸಿದ್ಧ ಕೇಂದ್ರವೂ ಆಗಿತ್ತು. ಇಲ್ಲಿಯ ಸೀಗೇಕಾಯಿ ರಾಜ್ಯದಲ್ಲಿಯೇ ಉತ್ಕೃಷ್ಟವಾದುದು. ಈ ಭಾಗದಲ್ಲಿ ಎತ್ತಿನ ಗಾಡಿಗಳ ತಯಾರಿಕೆಗೆ ಸುಪ್ರಸಿದ್ಧವಾಗಿದ್ದ ಕೇಂದ್ರವೆಂದರೆ ತಿಪಟೂರು. ಸೀತಕಲ್ಲ ಮತ್ತು ಉರುಡಗೆರೆಗಳಲ್ಲಿ ಹಿತ್ತಾಳೆಯ ಪಾತ್ರೆಗಳು ಪ್ರಸಿದ್ಧವಾಗಿದ್ದರೆ, ಶಿರಾ ದೇಶೀಯವಾಗಿ ತಯಾರಿಸಿದ ಬೂಟುಗಳಿಗೆ ಸುಪ್ರಸಿದ್ಧವಾಗಿತ್ತು. ದವನದಹೊಸಹಳ್ಳಿ (ಚಿಕ್ಕನಾಯಕನಹಳ್ಳಿ ತಾಲ್ಲೂಕು) ದೇಶೀಯ ಕಬ್ಬಿಣಕ್ಕೆ ಪ್ರಸಿದ್ಧವಾಗಿತ್ತು.

ಒಂದು ಪ್ರತೀತಿಯ ಪ್ರಕಾರ, ಹಿಂದೆ (ಕ್ರಿ.ಶ.೭ನೇ ಶತಮಾನ) ತುಮಕೂರು ಇಂದಿನ ಕೈದಾಳ (ಕ್ರೀಡಾಪುರ)

ಅರಸರಿಗೆ ಸೇರಿತ್ತು. ತುಮಕೂರಿನ ವರ್ತಕರಲ್ಲಿ ಬಹು ಮಂದಿ ಕ್ರೀಡಾಪುರದಿಂದ ವಲಸೆ ಬಂದವರಾಗಿದ್ದು, ಇಲ್ಲಿ ನೆಲಸಿದ ಹತ್ತಿಯ ವ್ಯಾಪಾರಿಗಳಾಗಿದ್ದರು. ಉತ್ತರದ ದೇಶದಿಂದ ಹತ್ತಿಯನ್ನು ತರಿಸಿ ಗಂಗವಾಡಿಯ ಕಡೆಗೆ ಅವನ್ನು ಸಾಗಿಸುವುದೇ ಅವರ ಮುಖ್ಯ ಉದ್ಯೋಗವಾಗಿತ್ತು. ಅವರು ಟಂಕಿಹಳ್ಳಿಯ ಪಕ್ಕದಲ್ಲಿ ಒಂದು ಪೇಟೆಯನ್ನು ಕಟ್ಟಿ ಹತ್ತಿ ಮತ್ತು ನೂಲಿನ ವ್ಯಾಪಾರ ಮಾಡುತ್ತಿದ್ದರು. ಇದರಿಂದ ಈ ಪ್ರದೇಶಕ್ಕೆ ಅರಳೆ ಪೇಟೆ ಎಂದು ಹೆಸರುಬಂದಿತು. ತುಮಕೂರಿನ ಪೇಟೆ ಬೀದಿಗಳಲ್ಲಿ ಇದು ಅತ್ಯಂತ ಪ್ರಾಚೀನವಾದುದೆಂದೂ ಸುಮಾರು ಒಂದು ಸಾವಿರ ವರ್ಷ ಹಳೆಯದೆಂದೂ ಹೇಳಲಾಗುವುದು.

**೧೯೨೦ರ ದಶಕದಲ್ಲಿ ಪ್ರಮುಖ ರಫ್ತುಗಳು :** ಒಂದು ಪ್ರದೇಶದ ಆಮದು-ರಫ್ತು ವಸ್ತುಗಳು ಅನೇಕ ಸಂಗತಿಗಳನ್ನು ಅವಲಂಬಿಸಿರುವವು. ಅವುಗಳಲ್ಲಿ ಬದಲಾವಣೆಯೂ ಸಾಧ್ಯ. ತುಮಕೂರಿನಿಂದ ಅಕ್ಕಿ, ರಾಗಿ, ಹೆಸರು, ಬೆಲ್ಲ, ಹುಣಸೆಹಣ್ಣು, ಅಡಿಕೆ ಮತ್ತು ಹದ ಮಾಡಿದ ಚರ್ಮ, ಇತ್ಯಾದಿ ಬೆಂಗಳೂರು ಮೂಲಕ ಮದರಾಸು ಪ್ರಾಂತ್ಯಕ್ಕೆ ಮಾರಾಟವಾಗುತ್ತಿದ್ದವು. ೧೯೨೩-೨೪ರಲ್ಲಿ ೮೦೦೦ ಟನ್ನು ಅಕ್ಕಿ (ಬೆಲೆ ರೂ. ೨೧ ಲಕ್ಷ), ೮೬೦೦ ಟನ್ನು ರಾಗಿ (ಬೆಲೆ ರೂ. ೯೫,೦೦೦) ಮಾರಾಟವಾಯಿತು. ಮಧುಗಿರಿ ತಾಲ್ಲೂಕಿನಿಂದ ಜೋಳ, ರಾಗಿ, ಧಾನ್ಯಗಳು ಹಿಂದುಪುರ ಮತ್ತು ತುಮಕೂರುಗಳಿಗೆ ಮಾರಾಟವಾಗುತ್ತಿದ್ದವು. ಹಳೆಯ ಮೈಸೂರುರಾಜ್ಯದ ಕಡಲೇಕಾಯಿ ವ್ಯಾಪಾರ ಕೇಂದ್ರಗಳಲ್ಲಿ ತುಮಕೂರು ಮೊದಲನೆಯ ಸ್ಥಾನದಲ್ಲಿತ್ತು. ನಂತರ ಇದರ ಸ್ಥಾನವನ್ನು ದಾವಣಗೆರೆ ಪಡೆಯಿತು.

ಕೊರಟಗೆರೆ ತಾಲ್ಲೂಕಿನಿಂದ ಭತ್ತ, ರಾಗಿಗಳು ತುಮಕೂರು ಮತ್ತು ಶಿರಾ ತಾಲ್ಲೂಕುಗಳಿಗೆ ಸರಬರಾಜು ಆಗುತ್ತಿದ್ದವು. ಮಧುಗಿರಿಯು ತಾಮ್ರ ಮತ್ತು ಹಿತ್ತಾಳೆಯ ಪಾತ್ರೆಗಳ ವ್ಯಾಪಾರಕ್ಕೆ ಬಹಳ ಪ್ರಸಿದ್ಧವಾಗಿತ್ತು. ಇಲ್ಲಿ ಇತ್ತೀಚಿನವರೆಗೆ ಬೆಳೆಯುತ್ತಿದ್ದ ಅತ್ಯುತ್ತಮ ದರ್ಜೆಯ ಅಕ್ಕಿಯಾದ 'ಚಿನ್ನದ ಸಾಲ'ವು ರಾಜ್ಯದಲ್ಲಿಯೇ ಶ್ರೇಷ್ಠದರ್ಜೆಯ ಅಕ್ಕಿಯೆನಿಸಿ ವಿಶೇಷ ಬೇಡಿಕೆಯನ್ನು ಹೊಂದಿತ್ತು. ೧೯೨೩-೨೪ರಲ್ಲಿ ೧೨೦೦ ಟನ್ನು ಚರ್ಮವು (ಬೆಲೆ ರೂ. ೧೦,೦೦೦) ಶಿರಾದಿಂದ ಬೆಂಗಳೂರಿಗೆ ಮಾರಾಟವಾಗಿತ್ತು. ಪಾವಗಡ ತಾಲ್ಲೂಕಿನ ಕಂಬಳಿಯು ಶ್ರೀಲಂಕಾ, ಬೆಂಗಳೂರು, ಅನಂತಪುರ ಮತ್ತು ಶಿವಮೊಗ್ಗಗಳಿಗೆ ರಫ್ತಾಗುತ್ತಿತ್ತು. ಇಲ್ಲಿಂದಲೇ ೨೦,೦೦೦ ಕುರಿ ಮತ್ತು ಮೇಕೆಗಳ (ಬೆಲೆ ಒಂದು ಲಕ್ಷ ರೂಪಾಯಿ) ಮತ್ತು ೩೦,೦೦೦ ರೂಪಾಯಿ ಬೆಲೆಯ ಕಂಬಳಿಗಳು ರವಾನೆಯಾಗುತ್ತಿದ್ದವು. ಗುಬ್ಬಿಯಿಂದ ತೆಂಗಿನಕಾಯಿಯು ೨.೯೦ ಲಕ್ಷ (ಬೆಲೆ ರೂ. ೧೨,೨೯೦), ಬೌರಿಂಗ್‌ಪೇಟೆ, ಕೋಲಾರ, ಬೆಂಗಳೂರು, ಸೇಲಂ ಮುಂತಾದ ಕಡೆಗೆ ಮಾರಾಟವಾಗಿತ್ತು. ಹಾಗೆಯೇ ಅಡಿಕೆಯು ೨,೧೦೦ ಮಣ (ಬೆಲೆ ರೂ. ೩೪,೨೫೦) ತುಮಕೂರು, ಅರಸೀಕೆರೆ ಮತ್ತು ತಿಪಟೂರುಗಳಿಗೆ ಮಾರಾಟವಾಗುತ್ತಿತ್ತು. ತಿಪಟೂರಿನಿಂದ ದೆಹಲಿ, ಕಾನ್ಪುರ, ಹುಬ್ಬಳ್ಳಿ, ಕೊಲ್ಹಾಪುರ ಮುಂತಾದ ಕಡೆ ಕೊಬ್ಬರಿಯು ರಫ್ತಾಗುತ್ತಿತ್ತು. ಆ ವರ್ಷ ೮೦೫೦ ಟನ್ನು ಕೊಬ್ಬರಿಯು (ಬೆಲೆ ರೂ. ೬೪,೪೯೦) ಮಾರಾಟವಾಗಿತ್ತು. ೧೯೪೦ರ ವೇಳೆಗೆ ಸಹಾ ಇದು ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದು, ಇಲ್ಲಿಂದ ಪ್ರತಿವರ್ಷ ಸುಮಾರು ೧೨,೦೦೦ ಟನ್ನುಗಳಷ್ಟು ತೆಂಗಿನಕಾಯಿ ಮತ್ತು ಕೊಬ್ಬರಿಗಳು ರಫ್ತಾಗುತ್ತಿದ್ದವು. ಅಲ್ಲದೇ ಮಂಗಳೂರು ಹೆಂಚು, ತೆಂಗಿನಚಿಪ್ಪಿನ ಇದ್ದಲು, ನೇಕಾರಿಕೆ ಇಲ್ಲಿಯ ಪ್ರಮುಖ ಕೈಗಾರಿಕೆಗಳಾಗಿದ್ದವು. ಇಲ್ಲಿಯ ಸುಮಾರು ೬೦ ವರ್ತಕರು ರಫ್ತು ವ್ಯಾಪಾರದಲ್ಲಿ ತೊಡಗಿದ್ದರು.

ಈ ಜಿಲ್ಲೆಯಲ್ಲಿ ೧೯೦೨ರಲ್ಲಿ ಪ್ರಾರಂಭವಾದ ಬೆಳ್ಳಾರ ಚಿನ್ನದ ಗಣಿಯ ಕೆಲಸವು ೧೯೦೫ರಲ್ಲಿ ನಿಂತು ಹೋಯಿತು. ೧೦೫೧ರಲ್ಲಿ ಕೆಲಸ ಆರಂಭಗೊಂಡು ೧೯೫೪ರಲ್ಲಿ ಆರ್ಥಿಕವಾಗಿ ಲಾಭದಾಯಕವಲ್ಲವೆಂದು ಪುನಃ ನಿಲ್ಲಿಸಲಾಯಿತು. ಒಂದು ವೇಳೆ ಈ ಯೋಜನೆ ಸಫಲವಾಗಿದ್ದರೆ, ಈ ಭಾಗದ ದೊಡ್ಡ ಕೈಗಾರಿಕಾ ಕೇಂದ್ರವಾಗಿ ತುಮಕೂರು ಇನ್ನೊಂದು ಕೆ.ಜಿ.ಎಫ್. ಆಗಿರುತ್ತಿತ್ತು.

ವ್ಯವಸಾಯ ಪ್ರಧಾನವಾದ ಈ ಜಿಲ್ಲೆಯಲ್ಲಿ ಕಳೆದ ಶತಮಾನದಲ್ಲಿ ಇದ್ದ ಚಿಕ್ಕ ದೊಡ್ಡ ಕೆರೆಗಳ ಸಂಖ್ಯೆ ಸುಮಾರು ೫೦೦. ಅವುಗಳಲ್ಲಿ ಕೆಂಪೇಗೌಡರ ಕಾಲದ ಕುಣಿಗಲ್ಲು ಮತ್ತು ದೀಪಾಂಬುಧಿ ಕೆರೆಗಳು ಬಹಳ

ಪ್ರಸಿದ್ಧವಾಗಿವೆ. ಇವು ಈ ಪ್ರದೇಶದ ವ್ಯಾಪಾರ ಅಭಿವೃದ್ಧಿಗೆ ಸಹಾಯಕವಾಗಿವೆ. ಬೆಳ್ಳಾವೆಯು ಹಿಂದೆ ಪ್ರಸಿದ್ಧ ವ್ಯಾಪಾರಕೇಂದ್ರವಾಗಿತ್ತು ಎಂಬುದು ಇಲ್ಲಿರುವ ಅನೇಕ ಪ್ರಸಿದ್ಧ ದೇವಾಲಯಗಳಿಂದ ತಿಳಿದುಬರುವುದು.

ನಗರಾಡಳಿತ : ೧೮೬೪-೬೫ರಲ್ಲಿ ಪ್ರಾರಂಭವಾದ ನಗರಾಡಳಿತ ಸಂಸ್ಥೆಗಳು ಸ್ಥಳೀಯ ವ್ಯಾಪಾರ ಉದ್ದಿಮೆಗಳ ಬೆಳವಣಿಗೆಗೆ ಪೂರಕವಾದವು. ಜೊತೆಗೆ ತಮ್ಮ ಆದಾಯವನ್ನು ಆಕ್ಟ್ರಾಯ್ ಮೂಲಕ ಹೆಚ್ಚಿಸಿಕೊಂಡವು. ತುಮಕೂರು (೧೮೬೪-೬೫), ಗುಬ್ಬಿ (೧೯೦೯), ತಿಪಟೂರು (೧೯೨೧), ಕುಣಿಗಲ್ಲು (೧೯೧೮), ಚಿಕ್ಕನಾಯಕನಹಳ್ಳಿ (೧೯೧೮), ಮಧುಗಿರಿ(೧೯೨೮)ಗಳು ನಗರಸಭೆಗಳನ್ನು ಪಡೆದವು. ಅಲ್ಲಿಯ ಸುಂಕ ಮತ್ತು ಇತರ ಸುಂಕಗಳು ನಗರಸಭೆಗಳ ಆದಾಯವನ್ನು ಹೆಚ್ಚಿಸಿದ್ದವು. ಉದಾಹರಣೆಗೆ ತುಮಕೂರು ನಗರಸಭೆಯ ಆದಾಯವು ೧೯೪೨ರಲ್ಲಿ ೧೫,೦೦೦ ರೂಪಾಯಿ ಇದ್ದು, ೧೯೪೭ರಲ್ಲಿ ಅದು ೨೫,೦೦೦ ರೂಪಾಯಿಗೆ ಏರಿತು.

ಸ್ಥಳೀಯವಾಗಿ ಕೈಗಾರಿಕೆಗಳು ಬೆಳೆಯಲು ನಗರಗಳ ವಿದ್ಯುದೀಕರಣ ಹೆಚ್ಚು ಸಹಾಯಕವಾಯಿತು. ತುಮಕೂರು (೧೯೨೯), ತಿಪಟೂರು (೧೯೪೦), ಕೊರಟಗೆರೆ, ಮಧುಗಿರಿ (೧೯೪೯), ನೊಣವಿನಕೆರೆ (೧೯೫೧), ತುರುವೇಕೆರೆ (೧೯೫೨), ಪಾವಗಡ (೧೯೫೧)ಗಳು ವಿದ್ಯುದೀಕರಣದ ಸೌಲಭ್ಯವನ್ನು ಪಡೆದವು. ಅದರಂತೆ ದೂರಸಂಪರ್ಕ ವ್ಯವಸ್ಥೆಯು ತುಮಕೂರಿನಲ್ಲಿ ೧೯೫೫ರಲ್ಲಿ ಪ್ರಾರಂಭವಾಯಿತು. ಮೊದಲಿದ್ದ ಈ ಬಗೆಯ ಸಂಪರ್ಕಗಳು ಕೇವಲ ೭೫.

ನಿಯಂತ್ರಿತ ಮಾರುಕಟ್ಟೆ : ತಿಪಟೂರು ಹಳೆಯ ಮೈಸೂರು ರಾಜ್ಯದಲ್ಲಿ ಪ್ರಾರಂಭಿಸಲಾದ ಮೊದಲನೆಯ ನಿಯಂತ್ರಿತ ಮಾರುಕಟ್ಟೆ (೧೯೪೯). ಇದರ ರಚನೆಯಿಂದ ಸ್ಥಳೀಯ ಬೆಳೆಗಾರರಿಗೆ ಹಾಗೂ ವ್ಯಾಪಾರಸ್ಥರಿಗೆ ಅನುಕೂಲವಾಯಿತು.

ಸಂತೆಗಳು : ಒಂದು ಪ್ರದೇಶದ ವಾಣಿಜ್ಯದ ಅಭಿವೃದ್ಧಿಗೆ ಸಂತೆಗಳು ಮೊದಲಿನಿಂದಲೂ ತುಂಬಾ ಮಹತ್ವದ ಪಾತ್ರವನ್ನು ವಹಿಸುತ್ತ ಬಂದಿರುವುವು. ಗ್ರಾಮೀಣ ಪ್ರದೇಶಗಳ ನಾಗರೀಕರಣಕ್ಕೆ ಇವು ತುಂಬಾ ಸಹಾಯಕವಾಗಿವೆ. ೧೮೦೦ರಲ್ಲಿ ಈ ಜಿಲ್ಲೆಯಲ್ಲಿ ಸುಮಾರು ೩೭ ಸಂತೆಗಳು ನಡೆಯುತ್ತಿದ್ದವು. ಅವುಗಳಲ್ಲಿ ತುಂಬಾ ಪ್ರಸಿದ್ಧವಾದ ಸಂತೆಗಳು ನಾಲ್ಕು: ಬೆಳ್ಳಾವೆ, ಗುಬ್ಬಿ, ತಿಪಟೂರು ಮತ್ತು ನಿಡಸಾಲೆ. ೧೯೬೦ರಲ್ಲಿ ಇದ್ದ ಸಂತೆಗಳ ಸಂಖ್ಯೆ ಸುಮಾರು ಒಂದು ನೂರು.

ಮೋಟಾರು ಕಂಪನಿಗಳು : ಜಿಲ್ಲೆಯಲ್ಲಿ ಸಂಚಾರ ಸೌಲಭ್ಯ ಹೆಚ್ಚಿಸಲು ಎರಡು ಕಂಪನಿಗಳು ೧೯೪೦-೪೧ರಲ್ಲಿ ಪಾವಗಡ ಮತ್ತು ಶಿರಾಗಳಲ್ಲಿ ನೋಂದಾಯಿಸಲ್ಪಟ್ಟವು. ಅವುಗಳೆಂದರೆ ರಿಲೈಬಲ್ ಮೋಟಾರ್ ಕಂಪನಿ, ಪಾವಗಡ (೧೯೪೦) (ಬಂಡವಾಳ ರೂ. ೧೫,೦೦೦) ಮತ್ತು ಶ್ರೀರಾಮ ಮೋಟಾರ್ ಸರ್ವಿಸ್, ಶಿರಾ (೧೯೪೦) (ಬಂಡವಾಳ ರೂ. ೧೪,೦೦೦).

ಧಾನ್ಯ ವರ್ತಕರ ಸಂಘ, ತುಮಕೂರು : ಕೃಷ್ಣರಾಜ ಒಡೆಯರ ಕಾಲದಲ್ಲಿ (೧೮೩೧) ತುಮಕೂರಿನ ೧೨ ಜನ ಸೆಟ್ಟರು ಮತ್ತು ಸೋಮರಾಯ ಕ್ಷತ್ರಿಯ ಅವರು, ಯಜುರ್ವೇದಿ ರಾಮಅವಧಾನಿಯವರ ಮಗ ದಿವಾಕರಶಾಸ್ತ್ರಿಯವರಿಗೆ ಮೈಲಾರದೇವರ ಪಾದಪೂಜೆಗೆ ೧೭೫೪ನೆಯ ಸಂವತ್ಸರದಲ್ಲಿ ಪ್ರತಿ ಒಂದು ಶುಭ ಸಮಾರಂಭಕ್ಕೆ ಎರಡು ಹಣ ಕೊಡಲು ಒಪ್ಪಿಕೊಂಡರು. ಇತ್ತೀಚಿನ ಈ ಶಾಸನವು (ತುಮಕೂರು ದೇವಾಲಯದಲ್ಲಿ ದೊರೆತಿದೆ) ಇಲ್ಲಿಯ ವರ್ತಕರ ಮನೋವೈಶಾಲ್ಯತೆಯನ್ನು ವಿವರಿಸುತ್ತದೆ. ಅದರಂತೆ ತೀರ ಇತ್ತೀಚಿನ, ಅಂದರೆ ಸ್ಥಳೀಯ ಧಾನ್ಯ ವರ್ತಕರ ಸಂಘವು (೧೯೨೬) ೧೯೪೩ರ ಕ್ಷಾಮ ಕಾಲದಲ್ಲಿ ಮಂಡೀಪೇಟೆಯಲ್ಲಿ ಸುಮಾರು ೮ ತಿಂಗಳ ಕಾಲ (೬೦೦ ಜನ ಅನಾಥರಿಗೆ) ಒಂದು ಅನ್ನಛತ್ರವನ್ನು ನಡೆಯಿಸಿದ್ದನ್ನು ದೇಶವೇ ಕೊಂಡಾಡಿತು.

# ಗ್ರಂಥಋಣ


೧. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೨, ತುಮಕೂರು ಜಿಲ್ಲೆ, ಬೆಂಗಳೂರು, ೧೯೦೪

೨. ಕರ್ನಾಟಕ ಗ್ಯಾಸೆಟಿಯರ್, ತುಮಕೂರು ಜಿಲ್ಲೆ, ಬೆಂಗಳೂರು, ೧೯೬೯

೩. ತುಮಕೂರು ಜಿಲ್ಲಾದರ್ಶನ, ತುಮಕೂರು, ೧೯೮೧

೪. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, ೧೯೮೬

೫. ಕನ್ನಡ ವಿಷಯ ವಿಶ್ವಕೋಶ-ಕರ್ನಾಟಕ, ಮೈಸೂರು, ೧೯೭೯

೬. *A Journey from Madras through the Countries of Mysore, Canara and Malabar* (Francis Buchanan), London, 1807

೭. *Mysore Information Bulletins for 1930, 1940, 1942*

೮. *Manual Important Orders Series, No III, Industries and Commerce,* Bangalore, 1916

೯. *Atlas of Mysore State,* Bangalore, 1902

೧೦. *Gazetteer for Mysore and Coorg,* 1877

ಎಚ್. ರೇವಣಸಿದ್ದಪ್ಪ

# ಸ್ವಾತಂತ್ರ್ಯ ಹೋರಾಟದ ವಿಶ್ಲೇಷಣೆ

ನಮ್ಮ ಇತಿಹಾಸದ ಪಠ್ಯಪುಸ್ತಕಗಳಲ್ಲಿ, ವಿಶ್ವ ಕೋಶಗಳಲ್ಲಿ ಮತ್ತು ಇತರ ಐತಿಹಾಸಿಕ ಗ್ರಂಥಗಳಲ್ಲಿ ಚಾಂದ್‌ಬೀಬಿ, ಕೆಳದಿ ವೀರಮ್ಮ, ಹೈದರಾಲಿ, ಟಿಪ್ಪು ಸುಲ್ತಾನ್, ಧೊಂಡೋವಾಘ್, ವೀರಪಾಂಡ್ಯ ಕಟ್ಟಬಮ್ಮನ್, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿರಾಯಣ್ಣ, ಮಂಗಳಪಾಂಡೆ, ಝಾನ್ಸಿಲಕ್ಷ್ಮಿಬಾಯಿ, ನಾನಾಸಾಹೇಬ, ಸುರಪುರದ ವೆಂಕಟಪ್ಪನಾಯಕ,ಮುಂಡರಗಿ ಭೀಮರಾವ್ ಮೊದಲಾದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಬಣ್ಣಿಸಲಾಗಿದೆ. ಅಲ್ಲದೆ, ಡಬ್ಲ್ಯು. ಸಿ. ಬ್ಯಾನರ್ಜಿ, ದಾದಾಬಾಯಿ ನವರೋಜಿ, ಗೋಖಲೆ, ತಿಲಕ್, ಗಾಂಧೀಜಿ, ಸುಭಾಷ್, ನೆಹರೂ ಮೊದಲಾದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದೇ ಪರಿಗಣಿಸಲಾಗಿದೆ.

ವಾಸ್ತವವಾಗಿ, ಅವರಲ್ಲಿ ಕೆಲವರು ಸ್ವತಂತ್ರ ರಾಗಿದ್ದು ಪರಕೀಯರ ದಾಳಿಗಳನ್ನು ಎದುರಿಸಿದವರು. ಮತ್ತೆ ಕೆಲವರು ತಮ್ಮ ಆಸ್ತಿಪಾಸ್ತಿಗಳಿಗಾಗಿಯೂ ಬಿರುದುಗಳಿಗಾಗಿಯೂ ಮಾಸಾಶನಕ್ಕಾಗಿಯೂ ಹೋರಾಡಿದವರು. ಸಾಂಪ್ರದಾಯಿಕ ಹಾಗೂ ಧಾರ್ಮಿಕ ಹಕ್ಕುಗಳಿಗಾಗಿ ಹೋರಾಡಿರುವವರೂ ಉಂಟು. ಕೆಲವರು ಮಾತ್ರವೇ ಕಳೆದುಕೊಂಡ ತಮ್ಮ ಸ್ವಾತಂತ್ರ್ಯವನ್ನು ಪಡೆಯಲು ಹೋರಾಡಿರುವರು.

ಅಹಮದ್‌ನಗರದ ಚಾಂದ್‌ಬೀಬಿಯು ಸ್ವತಂತ್ರ ಳಾಗಿದ್ದು, ಕ್ರಿ.ಶ. ೧೫೯೬ರಲ್ಲಿ ಅಕ್ಬರನ ವಿರುದ್ಧ ಹೋರಾಡಿದಳು. ಕೆಳದಿಯ ವೀರಮ್ಮ ಹೋರಾಡಿದುದು ಹೈದರಾಲಿಯ ವಿರುದ್ಧ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕೂಡ ಸ್ವತಂತ್ರರಾಗಿದ್ದು, ಬ್ರಿಟಿಷರ ವಿರುದ್ಧ ಹೋರಾಡಿದರು. ಇವರು ಸ್ವಾತಂತ್ರ್ಯವನ್ನು ಕಳೆದು ಕೊಂಡಿಲ್ಲದ್ದರಿಂದ ಇವರವನ್ನು ವಿದೇಶೀಯ ಆಕ್ರಮಣ ಗಳ ವಿರುದ್ಧ ಹೋರಾಟಗಳೆಂದು ಪರಿಗಣಿಸಬಹುದು.

ಧೊಂಡೋವಾಘ್ ಎಂಬುವನು ಚನ್ನಗಿರಿ ನಿವಾಸಿ ಯಾಗಿದ್ದು, ಟಿಪ್ಪುವಿನ ಪತನಾನಂತರ ಅರಾಜಕತೆಯ ಕಾಲದಲ್ಲಿ, ಸಾಹಸಕಾರ್ಯಗಳನ್ನು ಮಾಡಲು ಗುಂಪು ಕಟ್ಟಿ ಜನರ ಸುಲಿಗೆ ಮಾಡತೊಡಗಿದನು. ಮಹಿಳೆಯರ ಆಭರಣಗಳನ್ನೂ ಶ್ರೀಮಂತರ ಸಂಪತ್ತನ್ನೂ ಕೊಳ್ಳೆ ಹೊಡೆದನು. ಇವನನ್ನು ಬ್ರಿಟಿಷರು ಹತ್ತಿಕ್ಕಿದರು. ಇಂಥವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಕರೆ ಯುವುದು ಕಷ್ಟವಾಗುತ್ತದೆ.

ತಮಿಳುನಾಡಿನ ವೀರಪಾಂಡ್ಯ ಕಟ್ಟಬಮ್ಮನ್ ತನ್ನ ಜಾಗೀರು ಉಳಿಸಿಕೊಳ್ಳಲು ಹೋರಾಡಿದ್ದರಿಂದ ಅವನನ್ನು ಸ್ವಾತಂತ್ರ್ಯ ಹೋರಾಟಗಾರನೆನ್ನುವುದು ಸರಿ ಯಲ್ಲ. ಕಿತ್ತೂರು ಚೆನ್ನಮ್ಮ ತನ್ನ ದತ್ತುಮಗನ ಹಕ್ಕಿಗಾಗಿ ಹೋರಾಡಿ ಸೋತು ಸೆರೆಮನೆಯಲ್ಲಿ ಇದ್ದಾಗಲೂ ಪಾರ್ಷಿಕ ಒಂದುವರೆ ಲಕ್ಷ ರೂಪಾಯಿಗಳ ರಾಜಧನ ವನ್ನು ಬ್ರಿಟಿಷರಿಂದ ಪಡೆದಳು. ಆದ್ದರಿಂದ ಅವಳ ಹೋರಾಟ ಸ್ವಾತಂತ್ರ್ಯಕ್ಕಾಗಿ ಆಗಿರಲಿಲ್ಲ. ಹಾಗೆಯೇ, ಸಂಗೊಳ್ಳಿರಾಯಣ್ಣನು ತನ್ನ ರಾಣಿ ಮತ್ತು ದತ್ತು ಮಗನ ಹಕ್ಕಿಗಾಗಿ ಸ್ವಾಮಿನಿಷ್ಠೆಯಿಂದ ಹೋರಾಟ ಮಾಡಿದನು. ಅವನನ್ನು ಮಹಮಲೆದಾರ ಕೃಷ್ಣರಾಯ, ಶ್ರೀಮಂತ ಲಿಂಗನಗೌಡ ಮೊದಲಾದವರು ಮೋಸಮಾಡಿ ಬ್ರಿಟಿಷರಿಗೆ ಹಿಡಿದುಕೊಟ್ಟರು.ಆದ್ದರಿಂದ ರಾಯಣ್ಣನದು

ಸ್ವಾಮಿನಿಷ್ಠೆಯ ಹೋರಾಟವೇ ಹೊರತು ಸ್ವಾತಂತ್ರ್ಯ ಹೋರಾಟವಲ್ಲ.

ಮಂಗಳಪಾಂಡೆ ಎಂಬುವನು ೧೮೫೭ರಲ್ಲಿ ದನದ ಕೊಬ್ಬಿನಿಂದ ಮಾಡಿದ ಕಾರ್ಟ್ರಿಡ್ಜನ್ನು ಉಪಯೋಗಿಸುವ ವಿರುದ್ಧ ಪ್ರತಿಭಟಿಸಿ ಸೈನಿಕರ ದಂಗೆಗೆ ಕಾರಣನಾದನು. ಅದು ಸ್ವಾತಂತ್ರ್ಯ ಹೋರಾಟವಾಗಿರದೆ ಧಾರ್ಮಿಕ ಹೋರಾಟವಾಗಿತ್ತು. ಈ ಸಿಪಾಯಿ ದಂಗೆಯ ಕಾಲದಲ್ಲಿ ಸ್ವದೇಶಿಯ ಲೂಟಿ ಮಾಡಲಾಯಿತು ; ಕಗ್ಗೊಲೆಯೂ ನಡೆಯಿತು.

ಝಾನ್ಸಿ ಲಕ್ಷ್ಮಿಬಾಯಿಯು ದತ್ತುಮಗನ ಹಕ್ಕಿಗಾಗಿ ಕೋರಿ ವಿಫಲಗೊಂಡು, ವರ್ಷಕ್ಕೆ ಎರಡೂವರೆ ಸಾವಿರ ರೂಪಾಯಿ ಮಾಸಿಕ ಪರಿಹಾರಧನವನ್ನು ೧೮೫೩ರಿಂದ ೧೮೫೭ರ ವರೆಗೆ ಪಡೆದಳು. ೧೮೫೭ರಲ್ಲಿ ದಂಗೆಯ ಕಾಲದಲ್ಲಿ ಅನೇಕ ಬ್ರಿಟಿಷ್ ಮಹಿಳೆಯರಿಗೆ, ಬಾಲಕರಿಗೆ, ವೃದ್ಧರಿಗೆ ರಕ್ಷಣೆ ಕೊಟ್ಟಳು. ಅನಂತರ ದಂಗೆಯೆದ್ದ ಸಿಪಾಯಿಗಳಿಗೆ ಮಣಿದು, ದತ್ತುಮಗನ ಹಕ್ಕಿಗೆ ಹೋರಾಡಿ ವೀರಮರಣವನ್ನಪ್ಪಿದಳು.

ಉಳಿದವರಲ್ಲಿ, ನಾನಾಸಾಹೇಬ್ ಕೂಡ ಜಹಗೀರಿಗಾಗಿ, ಮಾಸಾಶನಕ್ಕಾಗಿ ಹೋರಾಡಿ ಪಲಾಯನ ಮಾಡಿದನು. ಸುರಪುರದ ವೆಂಕಟಪ್ಪನಾಯಕನು ತನ್ನ ಬೇಡ ಜನಾಂಗದವರ ಶಸ್ತ್ರಧಾರಣೆಯ ಹಕ್ಕಿಗಾಗಿ ಹೋರಾಡಿ ಸೋತು ಆತ್ಮಹತ್ಯೆ ಮಾಡಿಕೊಂಡನು. ಮುಂಡರಗಿ ಭೀಮರಾವ್ ಕ್ರೈಸ್ತ ಮತಾಂತರಗಳ ವಿರುದ್ಧ ಬ್ರಿಟಿಷರೊಡನೆ ಹೋರಾಡಿ ಮಡಿದನು.

ಆರಂಭದ ಕಾಂಗ್ರೆಸ್ ಧುರೀಣರಾಗಿದ್ದ ಡಬ್ಲ್ಯು. ಸಿ. ಬ್ಯಾನರ್ಜಿ, ಗೋಖಲೆ, ತಿಲಕ್ ಮೊದಲಾದವರು ಎ. ಓ. ಹ್ಯೂಮ್‌ರ ಜೊತೆಗೂಡಿ ಬ್ರಿಟಿಷ್ ಪ್ರಭುತ್ವವು ಭಾರತದಲ್ಲಿ ಶಾಶ್ವತವಾಗಿರಬೇಕೆಂದೂ ಅವರ ಆಳ್ವಿಕೆಯಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಪ್ರಗತಿ ಸಾಧಿಸಬೇಕೆಂದೂ ಪ್ರಯತ್ನಿಸಿದರು. ಈ ಧೋರಣೆಯು ೧೯೩೦ರವರೆಗೆ ಇದ್ದಿತು. ಅಲ್ಲಿಯುವರೆಗೆ ಅವರು ಗಾಂಧಿ, ನೆಹರೂ ಮೊದಲಾದವರನ್ನು ಸೇರಿಕೊಂಡು ಸುಧಾರಣಾ ಹೋರಾಟಗಾರರಾಗಿದ್ದರು. ೧೯೩೦ ಜನವರಿ ೨೬ರ ನಂತರ ಕಾಂಗ್ರೆಸ್ ಪೂರ್ಣಸ್ವಾತಂತ್ರ್ಯ ಪಡೆಯುವ ಘೋಷಣೆ ಹೊರಡಿಸಿತು. ಅನಂತರ ಗಾಂಧಿ, ನೆಹರೂ, ಸುಭಾಷ್ ಮೊದಲಾದವರು ಸ್ವಾತಂತ್ರ್ಯ ಹೋರಾಟಗಾರರಾಗಿ ಪರಿವರ್ತನೆ ಹೊಂದಿದರು. ಆದ್ದರಿಂದಲೇ ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಬಗ್ಗೆ ಒಂದು ನಿರೂಪಣೆ ಕೊಡಬೇಕಾಗಿದೆ. ಏನೆಂದರೆ, ಸ್ವಾತಂತ್ರ್ಯವನ್ನು ಕಳೆದುಕೊಂಡು ಅದನ್ನು ಮರಳಿ ಪಡೆಯಲು ಹೋರಾಟ ಮಾಡಿದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯಬಹುದು.

* * *

ವಿದೇಶಿಯರ ವಿರುದ್ಧ ಹೋರಾಡಿದವರೆಲ್ಲರೂ ಸ್ವಾತಂತ್ರ್ಯ ಹೋರಾಟಗಾರರಲ್ಲ. ಹಿಂದೆ ಪೋರಸ್‌ನು ಅಲೆಗ್ಝಾಂಡರ್‌ನ ವಿರುದ್ಧವೂ ರಾಣಾಪ್ರತಾಪನು ಅಕ್ಬರನ ವಿರುದ್ಧವೂ ಸೆಣಸಿದ್ದರು. ಅವರು ವಿದೇಶೀ ಆಕ್ರಮಣಗಳನ್ನು ಎದುರಿಸಿದ ವೀರರಾಗಿದ್ದರು. ಅದೇ ರೀತಿ, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಬ್ರಿಟಿಷರ ಆಕ್ರಮಣಗಳ ವಿರುದ್ಧ ಹೋರಾಡಿದ ವೀರರಾಗಿದ್ದರು.ಅವರು ಸ್ವತಂತ್ರವಾಗಿದ್ದು ಹೋರಾಟ ನಡೆಸಿದ್ದರು. ಆದ್ದರಿಂದ ಎಲ್ಲರನ್ನೂ ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯುವುದು ಸರಿಯೆನಿಸುವುದಿಲ್ಲ. ಕೇವಲ ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಹೋರಾಡಿದವರನ್ನು ಮಾತ್ರ ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯುವುದು ಸೂಕ್ತವೆನಿಸುತ್ತದೆ.

ಡಾ॥ ಸೂರ್ಯನಾಥ ಕಾಮತ್

# ಕರ್ನಾಟಕದ ೧೮೫೭-೫೮ರ ಬಂಡಾಯ: ಒಂದು ಹೊಸ ಅಧ್ಯಾಯ

೧೮೫೭-೫೮ರ ಮಹಾಬಂಡಾಯ ಭಾರತದಲ್ಲೆಲ್ಲ ನಡೆದಿರಲು ಅದರ ಪ್ರತಿಧ್ವನಿ ಹಲಗಲಿ, ಸುರಪುರ, ನರಗುಂದ ಹಾಗೂ ಗದಗು-ಕೊಪ್ಪಳಗಳಲ್ಲಿ ಕೇಳಿಬಂದದ್ದು ಸರ್ವವಿದಿತ. ಉತ್ತರಕನ್ನಡದ ಸೂಪಾ ಹಾಗೂ ಅದರ ಗಡಿಯ ಬೆಳಗಾವಿ ಜಿಲ್ಲೆಯ ಖಾನಾಪುರಗಳಲ್ಲಿ ಇದೇ ಸರಣಿಯಲ್ಲಿ ಒಂದು ಬಂಡಾಯ ೧೮೫೮-೫೯ರಲ್ಲಿ ಸಾಕಷ್ಟು ದೀರ್ಘಕಾಲ ನಡೆಯಿತು. ಕುಮರಿ ಕೃಷಿಯ ಮೇಲೆ ಹೇರಿದ ಇತಿಮಿತಿ, ಹೆಚ್ಚಿದ ಭೂಕಂದಾಯ ಹಾಗೂ ಉಪ್ಪಿನ ಬೆಲೆಯಲ್ಲಿ ಆದ ಹೆಚ್ಚಳ ಈ ಬಂಡಾಯಕ್ಕೆ ಕಾರಣ ಎಂದು ಬ್ರಿಟಿಷ್ ದಾಖಲೆಗಳು ಇದಕ್ಕೆ ಕಾರಣ ಸೂಚಿಸಿವೆ.[1] ಆದರೆ ಉತ್ತರಕನ್ನಡದ ಸ್ಪೆಶಲ್ ಕಮಿಶನರ್ ಜಿ. ಎ. ಬಲ್ಲಾರ್ಡ್ ಈ ಕಾರಣಗಳನ್ನು ಅಲ್ಲಗಳೆದು, ಮರಾಠರ ಸ್ವಪಂಗಡ ಪ್ರೇಮ, ಪ್ರಕ್ಷುಬ್ಧ ನಿಲುವು ಹಾಗೂ ಈಶಾನ್ಯ ಪ್ರಾಂತ(ಈಗಿನ ಉತ್ತರ ಪ್ರದೇಶ)ದಲ್ಲಿ ಆದ ಬಂಡಾಯಗಳಿಂದ ಕಾಣಿಸಿಕೊಂಡ ಇರುಸು ಮುರುಸಿನ ನೆರಳುಗಳಿಂದ ಪ್ರಭಾವಿತರಾದ ಕೆಲವು ದೇಸಾಯಿಗಳು ನಾಯಕತ್ವ ವಹಿಸಲು ಮುಂದಾದುದೇ ಈ ಬಂಡಾಯಕ್ಕೆ ಕಾರಣ, ಹಾಗೂ ಪ್ರಸಿದ್ಧ ಸಾವಂತ ಮನೆತನದ ಹೆಸರಿನ ಆಕರ್ಷಣೆ ಇದ್ದೇ ಇದೆ, ಎಂದು ಈ ಅಧಿಕಾರಿ ವ್ಯಾಖ್ಯಾನ ಹೇಳಿದ್ದಾನೆ. ಇದರ ಜೊತೆಗೆ ಸ್ವಚ್ಛಂದ ವರ್ತನೆಗಾಗಿಯೇ ಇವರ ಅನುಯಾಯಿಗಳಾಗಲು ಸಿದ್ಧರಾಗಿರುವ ಕೆಳವರ್ಗಗಳ ಪೋಲಿ ಜನರು ಇದ್ದೇ ಇದ್ದರು, ಎಂದು ಆತ ತಿಳಿಸಿದ್ದಾನೆ.

"ವಾಸ್ತವವಾಗಿ ದೇಶದ ಈ ಭಾಗದಲ್ಲಿ ರೈತರಿಗೆ ಸರಕಾರದ ಅಸ್ತಿತ್ವವು ಒಂದು ರೀತಿಯ ಕಟ್ಟುಕತೆಯಿದ್ದಂತೆ ('myth'). ಒಂದು ಐರೋಪ್ಯ ಮುಖವಾಗಲೀ ಒಂದು ಬಿಳಿಯ ಸಮವಸ್ತ್ರವಾಗಲೀ ಅವರ ನಡುವೆ ಕಾಣಿಸಿಕೊಳ್ಳುವುದು ಅಪರೂಪವಾಗಿ, ತಹಶಿಲ್ದಾರನಂಥ ಗಣ್ಯನ ಭೇಟಿ ಇಲ್ಲಿಗೆ ತೀರ ಅಪರೂಪ–ಒಬ್ಬ ಚೌಕಿದಾರ ಮತ್ತು ಅವನ ಕೋಲುಕಾರರೇ ಅವರು ಕಾಣುವ ಸರಕಾರದ ಪ್ರತಿನಿಧಿಗಳು;" ಎಂದು ಈ ಅಧಿಕಾರಿ ವಿವರಣೆಗಳನ್ನು ನೀಡಿದ್ದಾನೆ.

ಉತ್ತರಭಾರತದಲ್ಲಿ ನಡೆದ ಬಂಡಾಯ ಈ ಬಂಡಾಯಕ್ಕೆ ಪ್ರೇರಣೆ ನೀಡಿತ್ತೆಂಬ ಸಂಗತಿ ಈ ಅಧಿಕಾರಿಯ ಪತ್ರದಿಂದ ಸ್ಪಷ್ಟ. ಅಲ್ಲದೆ, ಬಂಡಾಯದ ನಾಯಕರಾಗಿದ್ದ ಸಾವಂತ ಬಂಧುಗಳು ಪೋರ್ತುಗೀಸರಿಗೆ ಪತ್ರ ಬರೆದು ಉತ್ತರಭಾರತದಿಂದ ನಾನಾಸಾಹೇಬ ಪೇಶ್ವೆಯ ಸೈನ್ಯ ಬರಲಿದೆ, ತಾವು ಅವರ ಪರವಾಗಿ ಕೆಲಸ ಮಾಡುತ್ತಿದ್ದೇವೆ ಎಂದಿರುವರಲ್ಲದೆ, ಪೋರ್ತುಗೀಸರು ಇಂಗ್ಲಿಷರ ವಿರುದ್ಧ ತಮಗೆ ನೆರವಾದಲ್ಲಿ ನಾನಾಸಾಹೇಬನು ಬಂದಾಗ ಅವನಿಂದ ಪೋರ್ತುಗೀಸರಿಗೆ ಹಾನಿಯಾಗದಂತೆ ನೋಡಿಕೊಳ್ಳುವುದಾಗಿ ಆಶ್ವಾಸನೆ ನೀಡಿದ್ದಾರೆ.[2]

ಬಂಡಾಯದ ನಾಯಕತ್ವ ವಹಿಸಿದವರು ಸಾವಂತ

1. ಜ್ಯುಡಿಶಿಯಲ್ ಡಿಪಾರ್ಟ್‌ಮೆಂಟ್, ಸಂಖ್ಯೆ ೧೦, ೫-೧-೧೮೫೯
2. ಅದೇ

ವಾಡಿಯ ಸಂಸ್ಥಾನಿಕನ ಗಣ್ಯ ಆಸ್ಥಾನಿಕ ಫೋಂಡ್ ಸಾವಂತನ ಮಕ್ಕಳು. ಫೋಂಡ್ ಸಾವಂತನು ೧೮೪೪ ರಲ್ಲಿ ಬ್ರಿಟಿಷರ ವಿರುದ್ಧ ಸಾವಂತವಾಡಿಯಲ್ಲಿ ವಿಫಲ ಬಂಡಾಯ ಹೂಡಿದ್ದ. ಅವನ ಕೆಲವು ಮಕ್ಕಳನ್ನು ಗೋವೆಯಲ್ಲಿ ನಜರ್‌ಬಂಧಿಯಲ್ಲಿ ಇಡಲಾಗಿತ್ತು. ಇವರಲ್ಲಿ ಮೂವರು–ನಾನಾ, ಬಾಬಾ ಮತ್ತು ಹನುಮಂತ– ತಮ್ಮ ಕೆಲವು ಅನುಯಾಯಿಗಳೊಡನೆ ಗೋವೆಯಿಂದ ತಪ್ಪಿಸಿಕೊಂಡು ಬಂದು ಬೆಳಗಾವಿ ಜಿಲ್ಲಾ ಖಾನಾಪುರ ತಾಲ್ಲೂಕು ಹಾಗೂ ಮುಂದೆ ಉತ್ತರಕನ್ನಡ ಜಿಲ್ಲೆಯ ಸೂಪಾ ತಾಲ್ಲೂಕುಗಳಲ್ಲಿ ಬಂಡಾಯ ಹೂಡಿದರು. ಗೋವೆಯ ಒಬ್ಬ ಗಣ್ಯ ಜಾಗಿರುದಾರ ದೀಪಾರಾಣೆ ಇವರಿಗೆ ಬೆಂಬಲ ನೀಡಿದ್ದ.[3] ಬೆಳಗಾವಿ ಜಿಲ್ಲೆಯ ಗ್ಯಾಸೆಟಿಯರ್ (೧೮೮೪) ಹೇಳುವಂತೆ,[4] ಮೊದಲು ಫೆಬ್ರುವರಿ ಆರಂಭಕ್ಕೆ ಇವರು ತಳೇವಾಡಿ ಚೌಕಿಯನ್ನು ಆಕ್ರಮಿಸಿ, ವರ್ಕುಂಡಹಳ್ಳಿಯನ್ನು ಆಕ್ರಮಿಸಿ, ದುದವಾಳದಲ್ಲಿನ ಸುಂಕದಕಟ್ಟೆ (ಕಸ್ಟಮ್ಸ್ ಹೌಸ್) ಸುಟ್ಟರು. ಸುಮಾರು ೧೦೦ ರಿಂದ ೨೦೦ರ ಈ ತಂಡ ತಳೇವಾಡಿ ಘಟ್ಟ(ಪಾಸ್)ವನ್ನು ತಮ್ಮ ಸುಪರ್ದಿಯಲ್ಲಿ ಇಟ್ಟುಕೊಂಡು ದರ್ಶನಿಗುಡ್ಡವನ್ನು ತಮ್ಮ ನೆಲೆಯಾಗಿ ಮಾಡಿಕೊಂಡಿತು. ೨೯ನೇಯ ನೇಟಿವ್ ರೆಜಿಮೆಂಟ್‌ನ ಒಂದು ತುಕಡಿಯನ್ನು ಮೆಜರ್ ನಟ್ಸ್ ಎಂಬಾತನ ನೇತೃತ್ವದಲ್ಲಿ ಕಳುಹಿಸಿರಲು ಒಬ್ಬ ದೇಶೀಯ ಅಧಿಕಾರಿ ಇದರ ಜೊತೆ ನಡೆದ ಘರ್ಷಣೆಯಲ್ಲಿ ಅಸುನೀಗಿದ. ಈ ಪ್ರದೇಶದ, ಹಿಂದೆ ಗಣ್ಯರಾಗಿದ್ದು ಆಗ ಅಧಿಕಾರ ಕಳೆದುಕೊಂಡ, ಫಡ್ನಿಸ್ ಮನೆತನದ ರಾಘೋಬಾ, ಚಿಂತೋಬಾ ಹಾಗೂ ಶಾಂತ ಎಂಬ ಮೂವರು ಸೋದರರು ಹಾಗೂ ಗುಣಬಾ ಶೆಣವಿ ಎಂಬ ಒಬ್ಬಾತ ಇದರ ಜೊತೆ ಸೇರಿಕೊಂಡರು. ಮುಂದೆ ಮಾರ್ಚ್ ತಿಂಗಳಲ್ಲಿ ಸೂಪಾ ತಾಲೂಕಿನಲ್ಲಿ ಇವರ ಚಟುವಟಿಕೆ ಹೆಚ್ಚಿತು. ಉತ್ತರ ಕನ್ನಡ ಜಿಲ್ಲೆಯು ಆಗ ಕೆನರಾ ಎಂಬ ಅಖಂಡ ಜಿಲ್ಲೆಗೆ ಸೇರಿದ್ದು ಅದು ಮದ್ರಾಸ್ ರಾಜ್ಯಕ್ಕೆ ಸೇರಿದ್ದು, ಅಲ್ಲಿನ ಅಡವಿಗಳು ಹೆಚ್ಚು ದಟ್ಟವಾಗಿದ್ದುವು. ಆಗಲೇ ವಿಶೇಷ ಕಮೀಶನರ್ ಸೂಚಿಸಿದಂತೆ, ಅಲ್ಲಿ ಸರಕಾರದ ಹಿಡಿತ ತೀರ ಸಡಿಲ. ದೂರದ ಮದ್ರಾಸ್‌ನ ಆಡಳಿತಕ್ಕೆ ಸೇರಿದ್ದರಿಂದ ಕೇಂದ್ರದ ಹಿಡಿತವೂ ದುರ್ಬಲ. ದಟ್ಟಡವಿಯಾಗಿದ್ದುದೂ ಸಿದ್ದಿಗಳಂಥ ಸಾಹಸವೃತ್ತಿಯ ವನವಾಸಿ ಜನ ಅವರಿಗೆ ಸಹಕಾರಿಗಳಾಗಿ ಸಿಕ್ಕಿದ್ದುದೂ ಇನ್ನೊಂದು ಅನುಕೂಲ. ಹೀಗಾಗಿ ಸೂಪಾ ತಾಲೂಕೇ ಇವರ ಮುಂದಿನ ಚಟುವಟಿಕೆಯ ಮುಖ್ಯ ಕೇಂದ್ರವಾಯಿತು. ಬಾಬಾ ಸಾವಂತನ ನಾಯಕತ್ವದ ಬಂಡುಗಾರರು ಸೂಪಾ ತಾಲೂಕಿನ ದೊತಪರ್ಾದ ಚೌಕಿದಾರ ಭುಜಂಗರಾಯನನ್ನು ಆಕ್ರಮಿಸಿ ಅವನಲ್ಲಿದ್ದ ೮೦ ರೂಪಾಯಿಯಷ್ಟು ಸರಕಾರೀ ಹಣವನ್ನು ದಿನಾಂಕ ೧೨-೩-೧೮೫೮ರಂದು ಸುಲಿಗೆ ಮಾಡಿದರು.[5] ಅವರು ಮುಂದೆ ಸೂಪಾ ತಾಲೂಕಿನ ಹಲವು ಚೌಕಿಗಳನ್ನು ಸುಟ್ಟು ಚೌಕಿದಾರರನ್ನು ಬಂಧಿಸಿದರು. ಸೋಮಲಿಂಗ ದೇವಸ್ಥಾನ ಎಂಬಲ್ಲಿ (ಖಚಿತ ಸ್ಥಳ ತಿಳಿಯದು) ಒಂದು ಭಾರೀ ಹೋರಾಟ ನಡೆದು ಒಬ್ಬ ಬಂಡುಕೋರ ಸರದಾರ ಅಲ್ಲಿ ತೀರಿಕೊಂಡ, ಹಾಗೂ ದಾಂಡೇಲಿ ಬಳಿಯಲ್ಲಿ ಅಂತೂಸಿದ್ದಿಯೆಂಬ ಬಂಡುಕೋರನ ಜೊತೆ ಹೋರಾಟ ಆಯಿತು.[6] ಈ ಬಂಡಾಯದ ಇತರ ವಿವರಗಳು ತಿಳಿದು ಬರದಿದ್ದರೂ ಸೂಪಾ ತಾಲೂಕಿನ ಪಶ್ಚಿಮಭಾಗವೆಲ್ಲ ಸಾವಂತ ಸೋದರರ ವಶವಿತ್ತೆಂದು ವಿಶೇಷ ಕಮಿಶನರ್ ಬಲ್ಲಾರ್ಡ್ ಒಪ್ಪಿಕೊಂಡಿದ್ದಾರೆ.[7] ಅವರು ಜನರ ಒಲವು ಗಳಿಸಲು ಯತ್ನಿಸಿದ್ದರೆಂದು ಮುಂದಣ ಬ್ರಿಟಿಷ್ ವರದಿಗಳು ಹೇಳುತ್ತವೆ. ಬ್ರಿಗೇಡಿಯರ್ ಫಿಜೆರಾಲ್ಡ್ ಉತ್ತರಕನ್ನಡದಲ್ಲಿ ಕಾರ್ಯಾಚರಣೆ ಮಾಡಿದ. ಬಹುಪಾಲು ಜನರನ್ನು, ಮುಖ್ಯವಾಗಿ ಸಾವಂತ ಸೋದರರು ಹಾಗೂ ಅವರ ಅನುಯಾಯಿಗಳಾದ ಒಟ್ಟು ಗೋವೆಯ ಜನರನ್ನು ಬಂಧಿಸಿ ಪೋರ್ತು

---

3. ಎಡ್ಮಿನಿಸ್ಟ್ರೇಟಿವ್ ರಿಪೋರ್ಟ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ, ೧೮೫೮-೫೯, ಪು. ೭೨
4. ಕ್ಯಾಂಪ್‌ಬೆಲ್ (ಸಂ.) : ಬೆಳಗಾವಿ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪
5. ಜ್ಯುಡಿಶಿಯಲ್ ಡಿಪಾರ್ಟ್‌ಮೆಂಟ್, ಸಂಖ್ಯೆ ೪, ೪-೧-೧೮೫೯
6. ಅದೇ, ಸಂಖ್ಯೆ ೨೮೫, ೧-೩-೧೮೫೯
7. ಅದೇ, ಸಂಖ್ಯೆ ೪

ಗೀಸರು, ಅವರುಗಳ ಕುಟುಂಬೀಯರ ಸಹಿತವಾಗಿ ೧೦೦ಕ್ಕೂ ಮೇಲ್ಪಟ್ಟು ಜನರನ್ನು ತಿಮೋರ್ ದ್ವೀಪಕ್ಕೆ ನವೆಂಬರ್‌ನಲ್ಲಿ ಗಡೀಪಾರು ಮಾಡಿದರು.[8] ಇತ್ತ ಉತ್ತರಕನ್ನಡ ಪ್ರದೇಶದಲ್ಲಿ ೨೩ ಬಂಧಿತರನ್ನು ಜಂಟಿ ಮ್ಯಾಜಿಸ್ಟ್ರೇಟ್ ಜೆ. ರಾಬಿನ್ಸನ್ ವಿವಿಧ ಅವಧಿಯ ಶಿಕ್ಷೆಗೆ ಒಳಪಡಿಸಿದ್ದೂ, ಸ್ಪೆಶಲ್ ಕಮಿಶನರ್ ಜ.ಎ.ಬಲ್ಲಾರ್ಡ್ ಇತರ ೩೪ ಜನರನ್ನು ಇದೇ ರೀತಿ ಶಿಕ್ಷೆಗೆ ಒಳಪಡಿಸಿದ್ದೂ ತಿಳಿಯುತ್ತದೆ. ಇವರೆಲ್ಲರ ಹೆಸರಗಳ ಪಟ್ಟಿಯೂ ಇದೆ.[9] ಇವರಲ್ಲಿ ೩೪ ಜನರನ್ನು ಅಂಡಮಾನ್ ದ್ವೀಪಕ್ಕೂ, ೨೩ ಜನರನ್ನು ಚೆಂಗಲ್ಪಟ್ ಜೈಲಿಗೂ ಕಳುಹಿಸಿದ್ದರು. ಇವರುಗಳ ಹೆಸರಿನ ಪಟ್ಟಿಯಿದೆ. ಇದಲ್ಲದೆ ಧಾರವಾಡ ಜೈಲಿನಲ್ಲಿ ಇದಕ್ಕೆ ಸಂಬಂಧಿಸಿ ಬಂಧಿಸಿಟ್ಟ ೪೬ ಜನರ ಉಲ್ಲೇಖವೂ ಇದೆ. "ಅವರನ್ನು ಕರಾವಳಿಗೆ ಕಳುಹಿಸುವುದು ಅಸಾಧ್ಯವಾಗಿದ್ದುದರಿಂದ ಹಾಗೂ ಉತ್ತರಕನ್ನಡದಲ್ಲಿ ಯಾವುದೇ ಭದ್ರಸ್ಥಳದಲ್ಲಿ ಅವರನ್ನು ಇಡಲಾಗದ್ದರಿಂದ ಅವರನ್ನು ಧಾರವಾಡಕ್ಕೆ ಕಳುಹಿಸಲಾಗಿತ್ತು", ಎಂದು ಹೇಳಲಾಗಿದೆ.[10] ಇದರಿಂದ ಇಲ್ಲಿನ ಸರಕಾರಿ ಯಂತ್ರ ಎಷ್ಟು ದಯನೀಯ ದುರ್ಬಲ ಸ್ಥಿತಿಯಲ್ಲಿ ಇತ್ತೆಂದು ಸ್ಪಷ್ಟವಾಗುತ್ತದೆ.

೧೮೫೯ರಲ್ಲಿ ಬಂಡಾಯ ಎರಡನೇಯ ಹಂತ ಆರಂಭವಾಯಿತು. ಫೆಬ್ರವರಿ ೨೨ಕ್ಕೆ ಸಿದ್ದಿ ಬಸ್ತ್ಯಾಂವ್ ಎಂಬಾತನ ನಾಯಕತ್ವದಲ್ಲಿ ಕಾಲಿನದಿ ದಂಡೆಯ ವಡ್ಡರ ಮನೆ ಗ್ರಾಮದ ಮೇಲೆ ದಾಳಿಮಾಡಿ ಒಬ್ಬ ಶ್ರೀಮಂತ ರೈತನ ಮನೆ ಲೂಟಿ, ನದಿ ದಾಟಿ ಇತರ ಹಲವು ಗ್ರಾಮಗಳಲ್ಲಿ ಲೂಟಿ, ಬಿಕ್ಕು ಬಂಡಾರಿ ಎಂಬಾತನಿಗೆ ಮರಣದಂಡನೆಯಾಗಲು ನೆರವಾದ ಪೆನೋಳಿ ಗ್ರಾಮದ ಇಬ್ಬರ ಸೆರೆ, ಇದೆಲ್ಲವೂ ಹಲವು ದಿನಗಳಲ್ಲಿ ನಡೆದ ಚಟುವಟಿಕೆಗಳು.[11] ಏಪ್ರಿಲ್ ೭ಕ್ಕೆ ಗೋವೆಗೆ ಹೊರಟ ಯಲ್ಲಾಪುರದ ಮುನ್ಸಿಫನ ಮೇಲೂ ದಾಳಿ ಮಾಡಿದರು.[12] ತಂಡದ ನಾಯಕ ಸಿದ್ದಿ ಬಸ್ತ್ಯಾಂವ್ ಮತ್ತು ಬೆನೋವ್ ಸೋದರರು ದಾಂಡೇಲಿ ಬಳಿಯ ಪಣಸೋಳ್ಳಿಯವರು, ಅವರ ಜೊತೆ ಹಲವು ಬ್ರಾಹ್ಮಣರೂ ಇದ್ದಾರೆ, ಎಂದು ಜಂಟಿ ಮ್ಯಾಜಿಸ್ಟ್ರೇಟ್ ರಾಬಿನ್‌ಸನ್ ನೀಡಿದ ವರದಿ ಹೇಳುತ್ತದೆ.[13] ಇವರ ಸಂಖ್ಯೆ ೬೦. ಗೋವಾ ಗಡಿಯಿಂದ ಇವರ ಕಾರ್ಯಾಚರಣೆ ನಡೆಯುತ್ತಿದೆ, ಎಂದು ಹೇಳುವ ಇನ್ನೊಂದು ವರದಿಯ ಆಧಾರದ ಮೇಲೆ ಸಿದ್ದಿ ಬಸ್ತ್ಯಾಂವ್‌ನ ಬಂಧನಕ್ಕೆ ೧೦೦೦ ರೂ. ಬಹುಮಾನ ಘೋಷಿಸಲಾಗಿದ್ದು, ಹಿಂದಿನ ಬಂಡಾಯದ ಕಾಲಕ್ಕೆ ಸರಕಾರಕ್ಕೆ ನೆರವಾದವರ ಮೇಲೆ ಸೇಡು ತೀರಿಸುವ ಕ್ರಮದಲ್ಲಿ ಅವರು ಮಗ್ನರಾಗಿದ್ದು "ಸಾವಂತ ಸೋದರರಂತೆ ಈ ಪ್ರದೇಶದ ಜನರನ್ನು ಸಮಾಧಾನದಿಂದ ನೋಡುವ ಬದಲು ತಮ್ಮ ಶಕ್ತಿಯನ್ನೆಲ್ಲ ಒಳಸಿ ಸೇಡಿನಿಂದ ಹಾಗೂ ಲೂಟಿ ಗಳಿಸುವುದರಲ್ಲಿ ಮಗ್ನರಾಗಿದ್ದಂತೆ ತೋರುತ್ತದೆ", ಎಂದು ಇನ್ನೊಂದು ವರದಿ ಹೇಳುತ್ತದೆ. ಸ್ಥಳೀಯ ಜಂಟಿ ಮ್ಯಾಜಿಸ್ಟ್ರೇಟನ ನೊಂದ ಜನರಿಗಾಗಿ ೧೦೦ ಎಕ್ರೆಯಷ್ಟು ಕುವರಿ ಭೂಮಿಯನ್ನು ಬಿಟ್ಟುಕೊಟ್ಟನು.[14] ಶಾಂತಿ ಸ್ಥಾಪನೆಗಾಗಿ ತಿಂಗಳಿಗೆ ತಲಾ ರೂಪಾಯಿ ಐದು ಪಗಾರ ನೀಡಿ ೧೦೦ ಶೇತ್ ಸಂದಿಗಳನ್ನು ಜಂಟಿ ಮ್ಯಾಜಿಸ್ಟ್ರೇಟ್ ನೇಮಿಸಿಕೊಂಡಿದ್ದು ದೀಪುರಾಣೆ ಬಂಡಾಯಗಾರರಿಗೆ ನೆರವು ನೀಡುತ್ತಿರುವ ವಿಚಾರವೂ ಆತನ ಪತ್ರದಲ್ಲಿದೆ.[15]

ಸಾವಂತ ಸೋದರರ ಭಾವ ಅಣ್ಣಾ ಮಾನಗಾಂವಕರ ಹಾಗೂ ಗೋವೆಯ ಸಾಖಳಿಯ ಮುಖ್ಯಸ್ಥನಾದ ಪೊಂಡು ಕಾಬ್ ಎಂಬವನೂ ಈ ಬಂಡಾಯದ ನಾಯಕರು,

---

8. ಗೋವೆಯ ಗವರ್ನರನ ಪತ್ರ, ದಿನಾಂಕ ೫-೫-೧೮೫೯ ; ಜುಡಿಶಿಯಲ್ ಡಿಪಾರ್ಟ್‌ಮೆಂಟ್ ಪ್ರಾಸಿಡಿಂಗ್ಸ್‌ನಲ್ಲಿ ಇದ್ದಂತೆ; ಎಡ್ಮಿನಿಸ್ಟ್ರೇಟಿವ್ ರಿಪೋರ್ಟ್, ೧೯೫೮-೫೯, ಪು. ೭೨
9. ಜ್ಯುಡಿಶಿಯಲ್ ಡಿಪಾರ್ಟ್‌ಮೆಂಟ್, ಸಂಖ್ಯೆ ೮೦, ೨೧-[illegible]-೧೮೫೯
10. ಅದೇ, ಸಂಖ್ಯೆ ೫೯೫, ೩೦-೪-೧೮೫೯
11. ಅದೇ, ಸಂಖ್ಯೆ ೩೪೭, ೧೬-೩-೧೮೫೯
12. ಅದೇ, ಸಂಖ್ಯೆ ೫೬೬, ೨೬-೪-೧೮೫೯
13. ಅದೇ, ಸಂಖ್ಯೆ ೩೪೭, ೧೬-೩-೧೮೫೯
14. ಅದೇ, ಸಂಖ್ಯೆ ೪೯೯, ೧೨-೪-೧೮೫೯
15. ಅದೇ, ಸಂಖ್ಯೆ ೫೬೬, ೨೬-೪-೧೮೫೯

ಇದಲ್ಲದೆ ಫಡ್ನಿಸ್ ಸೋದರರಾದ ರಾವ್‌ಬಾ (ರಾಘೋಬಾ), ಚಿಂತೋಬಾ ಹಾಗೂ ಶಾಂತ, ಹಾಗೂ ಇವರುಗಳ ಸಂಬಂಧಿಯಾದ ಗುಣಬಾ ಶೆಣ್ವಿ ಇವರು ಗುಂಪಿನಲ್ಲಿರುವ ಬ್ರಾಹ್ಮಣರು ಎಂದು ಮುಂದಿನ ವರದಿಯಲ್ಲಿ ಹೇಳಿದೆ. ಇವರೆಲ್ಲರುಗಳ (ಒಬ್ಬಿಬ್ಬರ ಹೊರತು) ಬಂಧನಕ್ಕಾಗಿ ತಲಾ ಒಂದು ಸಾವಿರ ಬಹುಮಾನ ಘೋಷಿಸಿದೆ. ದಾಂಡೇಲಿ, ಉಳವಿ, ಮುಂತಾದ ಪ್ರದೇಶಗಳಲ್ಲಿ ಇವರ ಉಗ್ರ ಚಟುವಟಿಕೆಗಳ ವರದಿಗಳಿವೆ.[16] ಜೂನ್ ೨೪ರಂದು ಗೋವೆಯ ಕಡೆಯಿಂದ ಅಂಕೋಲಾ ತಾಲೂಕಿನಲ್ಲೂ ಅವರು ಹಾವಳಿ ಮಾಡಿದರು.[17] ಆಗಸ್ಟ್ ಮೊದಲವಾರ ಜಗಳಬೆಟ್ಟದಲ್ಲಿ ನಡೆದ ಒಂದು ಹೋರಾಟದಲ್ಲಿ ಚಿಂತೋಬಾ ಫಡ್ನಿಸ್ ಹಾಗೂ ಸಿದ್ದಿ ಬಸ್ತ್ಯಾಂವ್ ಹತರಾದರು.[18] ಆಗಸ್ಟ್ ೧೫ರ ನಂತರ ಅವರ ಚಟುವಟಿಕೆಗಳ ವಿವರ ಸಿಗದು. ಲೆ॥ ಡ್ರೆವರ್, ಗ್ರಿಯರ್ಸ್ವೆಸೆನ್ ಹಾಗೂ ಡ್ರೂರಿ ಆಗಸ್ಟ್ ೧೫ ರಂದು ಬಂಡುಕೋರರ ಗುಂಪಿನ ಮೇಲೆ ತೀವ್ರ ದಾಳಿ ಮಾಡಿದ ನಂತರ ಅವರು ಚದರಿ ಹೋದರು.[19] ಈ ಅವಧಿಯಲ್ಲಿ, ಎಂದರೆ ತನ್ನ ಸಾವಿಗೂ ಮೊದಲು ಸಿದ್ದಿ ಬಸ್ತ್ಯಾಂವ್ ದರೋಡೆ ನಡೆಸಿದ್ದ ಹಲವು ಪ್ರಕರಣಗಳಲ್ಲಿ ಎರಡರ ವರದಿಯೂ ದೊರೆತಿದ್ದು ಅಪಹರಿಸಿದ್ದ ಪಾತ್ರೆ ಪರಡಿಗಳನ್ನು ಆತ ಹೂತು ಇಟ್ಟಿದ್ದ.[20] ಪೋರ್ತುಗೀಸರ ನೆರವಿನಿಂದ ಚದರಿಹೋಗಿದ್ದ ಜನರಲ್ಲಿ ಹಲವರನ್ನು ಬಂಧಿಸಲಾಯಿತು. ಅವರಲ್ಲಿ ನಾಲ್ವರನ್ನು ಫಾಸಿಗೇರಿಸಲಾಯಿತು, ಇತರ ಕೆಲವರನ್ನು ಸಾಗರದಾಚೆ ಗಡೀಪಾರು ಮಾಡುವ ಇಲ್ಲವೆ ಆಜೀವ ಶಿಕ್ಷೆಗೆ ಒಳಪಡಿಸಲಾಯಿತು, ಎಂದು ಕೊನೆಯದಾಗಿ ೧೮೬೦-೬೧ರ ವರದಿ ಹೇಳುತ್ತದೆ.[21]

ಉತ್ತರಕನ್ನಡದಲ್ಲಿ ಬ್ರಿಟಿಷರ ಆಡಳಿತ ಯಂತ್ರ ಎಷ್ಟು ದುರ್ಬಲವಾಗಿತ್ತು, ಕಂದಾಯ ಸಂಗ್ರಹದ ವಿನಾ ಇತರ ಕರ್ತವ್ಯಗಳನ್ನು ಸರಕಾರ ಎಷ್ಟು ಅಲಕ್ಷಿಸಿತ್ತು, ಎಂಬುದು ಈ ಬಂಡಾಯದ ಬಗೆಗಿನ ಬ್ರಿಟಿಷ್ ವರದಿಗಳಿಂದಲೇ ಸ್ಪಷ್ಟವಾಗುತ್ತದೆ. ೧೮೬೨ರಲ್ಲಿ ಕೆನರಾ ಜಿಲ್ಲೆಯನ್ನು ವಿಭಜಿಸಿ, ಉತ್ತರಕನ್ನಡಜಿಲ್ಲೆಯನ್ನು ಸೃಜಿಸಿ ಅದರ ನಿಯಂತ್ರಣಕ್ಕೆ ಅನುಕೂಲವಾಗುವಂತೆ ಮುಂಬೈ ರಾಜ್ಯಕ್ಕೆ ವರ್ಗಾಯಿಸಿದ್ದು ಇದರ ಗಮನಾರ್ಹ ಪರಿಣಾಮಗಳಲ್ಲಿ ಒಂದು.

---

16. ಅದೇ, ಸಂಖ್ಯೆ ೫೬೮, ೧೭-೪-೧೮೫೯; ೧೧೪೧, ೨೫-೮-೧೮೫೯
17. ಅದೇ, ಸಂಖ್ಯೆ ೯೫೧, ೧೧-೭-೧೮೫೯
18. ಅದೇ, ಸಂಖ್ಯೆ ೧೧೪೧, ೨೫-೮-೧೮೫೯
19. ಅದೇ, ಸಂಖ್ಯೆ ೧೫೨೧, ೮-೧೧-೧೮೫೯
20. ಅದೇ, ಸಂಖ್ಯೆ ೧೧೮೫, ೩-೯-೧೮೫೯
21. ಎಡ್ಮಿನಿಸ್ಟ್ರೇಟಿವ್ ರಿಪೋರ್ಟ್, ಮದ್ರಾಸ್ ಪ್ರೆಸಿಡೆನ್ಸಿ, ೧೮೬೦-೬೧

ಕಮಲಾ ಸಂಪಳ್ಳಿ

# ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೀರವನಿತೆಯರು

ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ನಡೆದ ಭಾರತದ ಸ್ವಾತಂತ್ರ್ಯ ಸಂಗ್ರಾಮವು ಪ್ರಪಂಚದ ಇತಿಹಾಸದಲ್ಲೇ ಅಪೂರ್ವವಾದುದು. ಇಡೀ ಜಗತ್ತಿನ ಜನಾಂಗ ಬೆರಗುಗೊಂಡ ಅದ್ವಿತೀಯ ಹೋರಾಟ ಭಾರತದಲ್ಲಿ ಜರುಗಿತು. ಯುದ್ಧರಂಗದಲ್ಲಿ ಖಡ್ಗ ಹಿಡಿದು ಹಿರಿದುಕೊಲ್ಲುವ ಸೈನಿಕರ ಸಾಮರ್ಥ್ಯಕ್ಕಿಂತ ಹೆಚ್ಚಿನ ಮಹತ್ವಪೂರ್ಣ ಮಾರ್ಗವನ್ನು ಮಹಾತ್ಮಾ ಗಾಂಧಿ ಹಾಕಿಕೊಂಡರು. ಈ ಮಾರ್ಗದಲ್ಲಿ ತಾಳ್ಮೆ, ತ್ಯಾಗ, ಕಷ್ಟಸಹಿಷ್ಣುತೆ, ದೇಹದಂಡನೆ, ಮನೋವೇದನೆ, ನಿಸ್ವಾರ್ಥತೆ, ಬಲಿದಾನಗಳ ಪರಮಾವಧಿಯ ಸಮರ್ಥತೆ ಬೇಕಾಗಿತ್ತು.

ಭರತಖಂಡದಾದ್ಯಂತ ಚಳವಳಿ ನಡೆಯಬೇಕೆಂದು ಮಹಾತ್ಮರು ಘೋಷಿಸಿದಾಗ,ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರಪ್ರೇಮದಿಂದ ಸರ್ವಸ್ವವನ್ನೂ ತ್ಯಾಗಮಾಡಿ ತನು ಮನ ಧನವನ್ನು ಸಮರ್ಪಿಸಿ ಭಾರತೀಯರು ಸಂಗ್ರಾಮದಲ್ಲಿ ಧುಮುಕಿದರು. ಸ್ವಾತಂತ್ರ್ಯ ಸಿಕ್ಕುವವರೆಗೂ ನಿದ್ರಾಹಾರವಿಲ್ಲದೆ ತಮ್ಮನ್ನು ತಾವೇ ದೇಶಕ್ಕಾಗಿ ಅರ್ಪಿಸಿಕೊಳ್ಳುತ್ತೇವೆಂದು ಪ್ರತಿಜ್ಞೆ ಮಾಡಿದರು. ಇಂತಹ ಹೋರಾಟಕ್ಕೆ ಪುರುಷರೂ ಸ್ತ್ರೀಯರೂ ಸಿದ್ಧರಾದರು.

ತಾಳ್ಮೆ ತ್ಯಾಗ ಕಷ್ಟಸಹಿಷ್ಣುತೆಯಲ್ಲಿ ಮಹಿಳೆಯರ ಪಾತ್ರ ಪ್ರಮುಖವಾಯಿತು. ಪುರುಷರ ಪರಿಶ್ರಮ ಒಂದು ರೀತಿಯಲ್ಲಿ ಬ್ರಿಟಿಷ್ ಸರ್ಕಾರವನ್ನು ಧಿಕ್ಕರಿಸುತ್ತಾ ಹೋದರೆ, ಮಹಿಳೆಯರ ಪಾತ್ರ ಮತ್ತೊಂದು ರೀತಿಯಲ್ಲಿ ಬ್ರಿಟಿಷ್ ಸರ್ಕಾರವನ್ನು ನಡುಗಿಸಿತು. ತಂಡತಂಡವಾಗಿ ಮನೆಯಿಂದ ಹೊರಬಂದ ವನಿತೆಯರ ಭಾರತಾಂಬೆಯ ಸಂಕೋಲೆಯ ಬಿಡುಗಡೆಗಾಗಿ ಛಲವಂತರಾದರು.

ಸ್ವಾತಂತ್ರ್ಯ ಗಳಿಸುವ ಛಲವನ್ನು ಮುಂದಿಟ್ಟುಕೊಂಡು ಹೊರಟ ಮಹಾತ್ಮಾ ಗಾಂಧಿಯವರ ಧರ್ಮಪತ್ನಿ ಕಸ್ತೂರಿಬಾ ಗಾಂಧಿ ಮತ್ತು ಇತರ ಮುಖಂಡರಾದ ಡಾ॥ ಅನಿಬಸೆಂಟ್, ಸರೋಜಿನಿನಾಯ್ಡು, ಸುಚೇತ ಕೃಪಲಾನಿ ಮುಂತಾಗಿ ಇಂತಹವರ ದಿಟ್ಟಹೆಜ್ಜೆಯ ಪ್ರಭಾವದಿಂದ ಮಹಿಳೆಯರು ದೇಶಸೇವೆಯಲ್ಲಿ ಪಾಲ್ಗೊಂಡರು. ಮಹಾತ್ಮರ ನಾಯಕತ್ವದಲ್ಲಿ ಬಲವಾದ ಹಾಗೂ ದೃಢವಾದ ಅಸಹಕಾರ ಚಳವಳಿ ಪ್ರಾರಂಭವಾದಾಗ, ಈ ಕ್ರಾಂತಿಯಲ್ಲಿ ಕರ್ನಾಟಕದ ವನಿತೆಯರು ಸಹನೆ, ತಾಳ್ಮೆ, ತ್ಯಾಗ ಮತ್ತು ಧೀಮಂತಶಕ್ತಿಯಿಂದ ಹೋರಾಡಿ ಭಾರತ ಇತಿಹಾಸದಲ್ಲಿ ಪ್ರಮುಖ ಸ್ಥಾನ ಗಳಿಸಿದರು.

ಕರ್ನಾಟಕದ ಸ್ತ್ರೀಯರು ರಾಷ್ಟ್ರನಾಯಕರ ಕರೆಗೆ ಎದ್ದು ಸೆಟೆದು ನಿಂತು ಸಜ್ಜಾದರು. ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ನರನಾಡಿಗಳನ್ನು ಹೊಸೆದು ಹುರಿಗೊಳಿಸಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರೂ ನಿಂತರು. ಕಟ್ಟುಕಟ್ಟಳೆಯ ಸಂಪ್ರದಾಯ ಕುಟುಂಬದ ನಾರಿಯರೂ ವೀರರಮಣಿಯರಾಗಿ ಸಂಗ್ರಾಮಕ್ಕೆ ಧುಮುಕಲು ಪರಿಸರ ಮತ್ತು ವ್ಯಕ್ತಿಗಳ ಪ್ರಭಾವಗಳೂ ಕಾರಣವಾದವು.

ತ್ಯಾಗ, ಶೌರ್ಯ, ಸಮರ್ಪಣಾಭಾವದ ಪರಿಸರ ಎಲ್ಲೆಲ್ಲೂ ಹರಡಿತು. ಸ್ವಾತಂತ್ರ್ಯದ ಛಲದ ಜ್ವಾಲಾ ಮುಖಿಯನ್ನೆಬ್ಬಿಸಿದ ವಾತಾವರಣ ತುಂಬಿತು. ಪ್ರತಿ ಮನೆಯಲ್ಲೂ ಇದೇ ಮಾತು. ಮನೆಯ ಹೊರಗೂ ಇದೇ ಮಾತು. ರಾಷ್ಟ್ರನಾಯಕರು ಪ್ರಾರಂಭಿಸಿದ ಚಳವಳಿಯ ಚಟುವಟಿಕೆಯ ಚುರುಕು ಮನೆ ಮನೆಯ ಮಕ್ಕಳಾದಿ ಯಾಗಿ ಎಲ್ಲರ ಮನ ಮುಟ್ಟಿತು. ಗುಪ್ತಸಂಚಿನ ಬಿಕ್ಕಟ್ಟಿನ ವಾತಾವರಣವು ನವಯುವಕ ಯುವತಿಯರಲ್ಲಿ ಸಾಹಸಮಯವಾಗಿ ಪರಿಣಮಿಸಿತು.

ದೇಶ ಬಾಂಧವ್ಯದಲ್ಲಿ ಅಣ್ಣ ತಂಗಿಯರೂ ಸತಿ ಪತಿಯರೂ ತಂದೆ ತಾಯಿ ಮಕ್ಕಳೂ ತಮ್ಮ ತಮ್ಮ ಪಾಲಿನಲ್ಲಿ ಧೈರ್ಯೋತ್ಸಾಹಭರಿತರಾದರು. ಬೀದಿ ಬೀದಿ ಯಲ್ಲಿ ಮೆರವಣಿಗೆ ನಡೆದು ಗಗನದೆತ್ತರಕ್ಕೆ ವೀರಗೀತೆಯ, ದೇಶಭಕ್ತಿಯ ಘೋಷಣೆಯು ಕೇಳಿಸಿತು. ಪತಿಯು ಸಂಗ್ರಾಮದಲ್ಲಿ ಧುಮುಕಿ ಶ್ರಮಜೀವನ ಅನುಭವಿಸುತ್ತಿದ್ದಾಗ ಸತಿಯೂ ಸಹಕರಿಸಿ ಭೋಗಜೀವನಕ್ಕೆ ಬದಲಾಗಿ ತ್ಯಾಗಜೀವನವನ್ನು ಸ್ವೀಕರಿಸಿದಳು.

ಮನೆಯ ಒಳಗೂ ಹೊರಗೂ ಇಂತಹ ವಾತಾವರಣ ಹಬ್ಬಿಹರಡಿದಾಗ ಮಹಿಳೆಯರು ಅಡಿಗೆಮನೆಯ ಸೆರೆ ತೊರೆದು ಸೆರೆಮನೆಯ ಕಠಿಣಶಿಕ್ಷೆಯ ವಾಸವನ್ನು ಮನಃಪೂರ್ವಕವಾಗಿ ಅನುಭವಿಸಿದರು. ಇಂಗ್ಲಿಷರಿಗೆ ಆಶ್ಚರ್ಯವಾಗುವ ರೀತಿಯಲ್ಲಿ ನಮ್ಮ ನಾಡಿನ ಮಹಿಳೆಯರು ವೀರವನಿತೆಯರಾದರು.

ಯುದ್ಧಕ್ಕೆ ಸೈನ್ಯವನ್ನು ಕೂಡಿಸುವುದಕ್ಕಿಂತ ಹೆಚ್ಚು ಪಾಲು ಕ್ರಾಂತಿಗಾಗಿ ಜನಸಂಗ್ರಹದ ಅಗತ್ಯವಿತ್ತು. ಅಹಿಂಸಾ ಮಾರ್ಗವನ್ನನುಸರಿಸಿ ಸತ್ಯಾಗ್ರಹದ ನಿಯಮವನ್ನು ಕಟ್ಟುನಿಟ್ಟಾಗಿ ಪರಿಪಾಲಿಸುವ ವ್ಯಕ್ತಿಗಳನ್ನು ಚಳವಳಿಗಾಗಿ ಸಿದ್ಧಪಡಿಸಲು ತರಬೇತಿ ಕೊಡುವ ಸೇವಾದಳದ ಕ್ಯಾಂಪ್‌ಗಳು ಪ್ರಾರಂಭವಾದವು.

ಚಳವಳಿಗೆ ಪೂರಕವಾಗಿ ರಾಜ್ಯದಾದ್ಯಂತ ಮಹಿಳಾ ಸಂಸ್ಥೆಗಳಾದುವು. ಕುಮಟಾ ಮಹಿಳಾ ಮಂಡಲ, ಮಂಗಳೂರು ಮಹಿಳಾ ಸಭಾ, ಗದಗ ಮಹಿಳಾ ಸಮಿತಿ, ಹುಬ್ಬಳ್ಳಿಯ ಭಗಿನಿ ಮಂಡಳ, ಹಾನಗಲ್‌ನ ರಾಷ್ಟ್ರೀಯ ಕನ್ಯಾಶಾಲೆ, ಧಾರವಾಡದ ಮಹಿಳಾ ಸಮಾಜ, ಹಾವೇರಿಯ ಭಗಿನೀ ಮಂಡಲ ಮುಂತಾದ ಮಹಿಳಾ ಸಂಸ್ಥೆಗಳು ಮಹಿಳೆಯರಿಗೆ ಮಾರ್ಗದರ್ಶನ ನೀಡುವ ಸಂಘಗಳಾದವು.

ತರಬೇತಿ ಕೇಂದ್ರಗಳೂ ಮತ್ತು ಮಹಿಳಾ ಸಂಸ್ಥೆಗಳೂ ಹೆಚ್ಚು ಪ್ರಭಾವ ಬೀರಿ ಮಹಿಳೆಯರು ತರಬೇತಿ ಪಡೆದರು. ಮಹಿಳಾ ಸಂಘಗಳು ಸ್ಥಾಪನೆಯಾಗಬೇಕೆಂದು ಸಲಹೆ ಕೊಟ್ಟು ಡಾ॥ ಹರ್ಡಿಕರ್‌ರವರು ಕರ್ನಾಟಕದ ಅನೇಕ ಮಹಿಳೆಯರ ಸಾಮರ್ಥ್ಯವನ್ನು ಗುರ್ತಿಸುವುದರಲ್ಲಿ ಯಶಸ್ವಿಯಾದರು.

೧೯೨೪ರಲ್ಲಿ ಬೆಳಗಾವಿ ಕಾಂಗ್ರೆಸ್ಸಿಗೆ ಪ್ರಪ್ರಥಮವಾಗಿ ೧೫೦ ಜನ ಸೇವಿಕೆಯರು ಬಂದುದು ಕರ್ನಾಟಕದ ಸ್ತ್ರೀಯರಿಗೆ ಸಾರ್ವಜನಿಕ ರಂಗಪ್ರವೇಶಕ್ಕೆ ಅವಕಾಶವಾಯಿತು. ಅಪಾಯಕರವಾದ ಚಳವಳಿಗಳಲ್ಲಿ ಅಸಂಖ್ಯಾತ ಸ್ತ್ರೀಯರು ಪಾಲ್ಗೊಂಡರು. ಸಾರಾಯಿ ಅಂಗಡಿ ಪಿಕೆಟಿಂಗ್, ಕರನಿರಾಕರಣ ಚಳವಳಿಯಲ್ಲಿ ಜಪ್ತಿಯಾದ ಸತ್ಯಾಗ್ರಹಿಗಳ ವಸ್ತುಗಳನ್ನು ಕೊಂಡೊಯ್ದವರ ಮನೆ ಮುಂದೆ ಸತ್ಯಾಗ್ರಹ ಹೂಡುವುದು, ವಿದೇಶೀ ಬಟ್ಟೆಗಳನ್ನು ಭಸ್ಮ ಮಾಡುವುದು ಮುಂತಾದ ಚಟುವಟಿಕೆಗಳು ಮಹಿಳೆಯರ ಸಾಹಸದ ಪ್ರಸಂಗಗಳಾಗಿ ಚಿರಸ್ಮರಣೀಯವಾದುವು.

ರಾಷ್ಟ್ರೀಯ ಶಿಕ್ಷಣ ಪಡೆದ ಕರ್ನಾಟಕದ ಸ್ತ್ರೀಯರು ಎಚ್ಚೆತ್ತು ಹೆಚ್ಚು ಹೆಚ್ಚಾಗಿ ಎಲ್ಲಾ ಚಳವಳಿಗಳಲ್ಲೂ ಭಾಗವಹಿಸಿದರು. ಶಾಲಾ ಕಾಲೇಜುಗಳ ತ್ಯಾಗ, ನೌಕರಿ ತ್ಯಾಗ, ಕಾನೂನು ಭಂಗ, ಕ್ವಿಟ್ ಇಂಡಿಯಾ ಚಳವಳಿ ಈ ಎಲ್ಲಾ ಆಂದೋಳನಗಳಲ್ಲೂ ಸ್ತ್ರೀ ಹೋರಾಟಗಾರರು ತಮ್ಮ ತ್ಯಾಗ, ತಪಸ್ಸು, ಪರಿಶ್ರಮ ಮತ್ತು ಧ್ಯೇಯನಿಷ್ಠೆಯನ್ನು ತೋರಿಸಿದ್ದಾರೆ. ಬ್ರಿಟಿಷ್ ಸರ್ಕಾರ ಕೊಟ್ಟ ಕಠಿಣಶಿಕ್ಷೆಯನ್ನು ಅನುಭವಿಸಿದ್ದಾರೆ. ಜೈಲುವಾಸ ಕಂಡಿದ್ದಾರೆ. ಖಾಯಿಲೆಗೆ ತುತ್ತಾಗಿ ಪ್ರಾಣ ತೆತ್ತಿದ್ದಾರೆ. ಹಿಂಸಾಚಾರ, ದೌರ್ಜನ್ಯ ಕಂಡು ಕೆಲವರು ಪ್ರಾಣಹತ್ಯೆ ಮಾಡಿಕೊಂಡಿದ್ದಾರೆ. ಸತ್ಯಾಗ್ರಹ ಉಪವಾಸ ಮಾಡಿ ಮಹಿಳೆಯರು ಸ್ವಾತಂತ್ರ್ಯ ಗಳಿಕೆಯ ಸಾಧನೆ ಮಾಡಿದ್ದಾರೆ.

ತರಬೇತಿ ಪಡೆದ ಮಹಿಳಾ ಸ್ವಯಂಸೇವಿಕೆಯರು ಆಂದೋಳನದ ನಾಯಕಿಯರಾದರು. ಸಮಾಜಸೇವೆ, ದೇಶಸೇವೆ ಮಾಡುವ ಮನೋಭಾವ ಉಕ್ಕಿತು. ಸ್ವಾತಂತ್ರ್ಯ ಸಂಗ್ರಾಮದ ರಚನಾತ್ಮಕ ಕಾರ್ಯಗಳಿಗಾಗಿ ಜೀವನವನ್ನೇ ಮುಡುಪಾಗಿಟ್ಟರು. ಸ್ತ್ರೀ ಸಾಮರ್ಥ್ಯವನ್ನು ಗುರ್ತಿಸಿ ಪ್ರೋತ್ಸಾಹಿಸಿದ ಮಹಾತ್ಮಾ ಗಾಂಧಿಯವರಿಗೆ ಮನಮೆಚ್ಚುವ ರೀತಿಯಲ್ಲಿ ಸತ್ಯಾಗ್ರಹಗಳನ್ನು ನಡೆಸಿ ಜಯಿಸಿದರು.

ಇಂತಹ ಮಹಿಳಾ ವೀರರ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ. ಸರದಾರ ವೆಂಕಟರಾಮಯ್ಯನವರ ಪತ್ನಿ ಶ್ರೀಮತಿ ಗೌರಮ್ಮನವರು ಕರನಿರಾಕರಣ ಚಳವಳಿಯ ನಾಯಕಿಯಾದರು. ಕರ್ನಾಟಕದಲ್ಲಿ ನಡೆದ ಈ ಚಳವಳಿ ಅತ್ಯಂತ ಯಶಸ್ವಿಯಾಗಲು ಗೌರಮ್ಮನವರಂತಹ ವೀರತ್ಯಾಗಿಗಳೇ ಕಾರಣ.

ಚಳವಳಿಗಳ ಪಟ್ಟಿಯನ್ನು ನೋಡಿದರೆ ಬಹುಶಃ ಕರನಿರಾಕರಣ ಚಳವಳಿಗೇ ಪ್ರಥಮಸ್ಥಾನ ಕೊಡಬೇಕು ಎಂದಿದ್ದಾರೆ ಬಾಪೂ. ಅಹಿಂಸಾತ್ಮಕ ಹೋರಾಟದಲ್ಲಿ ಅಂತಿಮ ಹಂತವೇ ಕರನಿರಾಕರಣ ಚಳವಳಿ ಎಂದು ಬಾಪೂಜಿ ಅಭಿಪ್ರಾಯಪಟ್ಟಿದ್ದಾರೆ.

ಗೌರಮ್ಮನವರು ಸೇವಾದಳದ ಶಿಬಿರಕ್ಕೆ ಸೇರಿದ ನಂತರ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಲು ಧೈರ್ಯವಂತೆಯಾದರು. ಅವರ ಅಭಿಪ್ರಾಯದಲ್ಲಿ, ನೈತಿಕ ಬಲ ಬಹು ಶಕ್ತಿಶಾಲಿ. ಇದರಿಂದ ಮನೋನಿಶ್ಚಲತೆ, ಮನೋಧೈರ್ಯ ಬರುತ್ತದೆ. ಗೌರಮ್ಮನವರ ಸ್ವಾತಂತ್ರ್ಯ ಸಂಗ್ರಾಮದ ಪಾತ್ರಕ್ಕೆ ಮತ್ತೊಂದು ಪೂರಕವೆಂದರೆ, ಗಂಡ ಚಳವಳಿಗೆ ಸೇರಿದಾಗ ಹೆಂಡತಿಯೂ ಸೇರಬೇಕಾಯಿತು. ಆದ್ದರಿಂದ ಗೌರಮ್ಮ ಇಷ್ಟಪಟ್ಟೇ ಚಳವಳಿಗಾರರಾದರು. ದೇಶಸೇವೆಯ ಪಣತೊಟ್ಟು ಅವಿಶ್ರಾಂತರಾಗಿ ಹೋರಾಡಿದರು. ಇವರ ತ್ಯಾಗ ಜೀವನ, ದೇಶಪ್ರೇಮವು ಸ್ಫೂರ್ತಿಯ ವಾತಾವರಣವನ್ನುಂಟು ಮಾಡಿ ಮತ್ತಷ್ಟು ಮಹಿಳೆಯರನ್ನು ಹೊರಗೆ ಬರುವಂತೆ ಮಾಡಿತು.

ಬೆಳಗಾವಿ ಅಧಿವೇಶನಕ್ಕಾಗಿ ಭಾರತ ಸೇವಾದಳಕ್ಕೆ ಸ್ವಯಂಸೇವಿಕೆಯರನ್ನು ಆರಿಸುವ ಉದ್ದೇಶದಿಂದ ಉಮಾಬಾಯಿ ಕುಂದಾಪುರರವರು ಕರ್ನಾಟಕ ಪ್ರವಾಸ ಕೈಗೊಂಡಾಗ ಅವರಿಂದ ಅನೇಕ ಮಹಿಳೆಯರು ಪ್ರಭಾವಿತರಾದರು. ಇಂತಹವರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರೂ ಒಬ್ಬರು.

೧೯೨೭ರಲ್ಲಿ ಪುಣೆಯಲ್ಲಿ ನಡೆದ ಅಖಿಲ ಭಾರತ ಮಹಿಳಾ ಪರಿಷತ್ತಿನ ಅಧಿವೇಶನ ಕಾರ್ಯ ನಿರ್ವಾಹಕ ಸಮಿತಿಯಲ್ಲಿ ಮಹಿಳಾ ಕಾರ್ಯದರ್ಶಿನಿಯಾಗಿ ದುಡಿದರು. ಆಲ್ ಇಂಡಿಯಾ ನ್ಯಾಷನಲ್ ಕ್ಯಾಂಪ್‌ಗೆ ಬೇಕಾದ ತ್ಯಾಗಮಯಿಗಳೂ ಕಷ್ಟಸಹಿಷ್ಣುಗಳೂ ಆಗಿದ್ದ ಮಹಿಳೆಯರನ್ನು ಇಡೀ ಕರ್ನಾಟಕ ಸುತ್ತಿ ಆರಿಸಿ ತಂದರು. ಒಂದು ಮಹಿಳಾ ಸೇವಾದಳವನ್ನು ಸೃಷ್ಟಿಸಿದರು.

೧೯೪೨ರ ಆಗಸ್ಟ್ ೮ನೇ ದಿನ ಭಾರತ ಬಿಟ್ಟು ತೊಲಗಿ ಆಂದೋಲನ ಪ್ರಾರಂಭದಲ್ಲಿ, ಭಾರತೀಯರು ಕ್ರಾಂತಿಯನ್ನೇ ಹೂಡಬೇಕು, ಸ್ವತಂತ್ರ ಬರುವವರೆಗೂ ನೆಮ್ಮದಿ ಇಲ್ಲ, 'ಮಾಡು ಇಲ್ಲವೇ ಮಡಿ'—ಎಂದು ಮಹಾತ್ಮಾ ಗಾಂಧಿಯವರು ಘೋಷಿಸಿದಾಗ, ಕಮಲಾದೇವಿಯವರು ಸ್ತ್ರೀಯರನ್ನೂ ಪುರುಷರನ್ನೂ ಉಗ್ರರೂಪ ಆಂದೋಳನಕ್ಕೆ ಸೇರಿಸಿ ಸಫಲಕಾರಿಯಾದರು.

ತಾಂಡೂರು ಸುನಂದಮ್ಮನವರು ತ್ಯಾಗ ವೈರಾಗ್ಯ ನಿಧಿಯಾಗಿ ದೇಶಸೇವೆಯೇ ತಮ್ಮ ಉಸಿರಾಗಿದ್ದು ಜೀವಸವೆದರು. ದೇಶಸೇವಾ ನಿಮಿತ್ತ ದಾಂಪತ್ಯ ಜೀವನ ಬೇಡವೆಂದು ಬ್ರಹ್ಮಚಾರಿಣಿಯಾಗಿದ್ದರು. ಮನೆ ಆಸ್ತಿ ಸ್ವಜನರು ಎಲ್ಲವನ್ನೂ ತೊರೆದು ಓಡಾಡುತ್ತಾ ಕಾಂಗ್ರೆಸ್ ಸಂಸ್ಥೆಯ ಕೆಲಸ ಮಾಡಿದರು. ಸಮಾಜ ಆಡುತ್ತಿದ್ದ ವ್ಯಂಗ್ಯನುಡಿಗಳನ್ನು ಲೆಕ್ಕಿಸದೆ ಮುನ್ನುಗ್ಗಿದರು. ಕಾಂಗ್ರೆಸ್ ವರ್ಕಿಂಗ್ ಕಮಿಟಿಯಲ್ಲಿ ಇವರೊಬ್ಬರೇ ಮಹಿಳೆಯಾಗಿದ್ದು ಕಾರ್ಯನಿರ್ವಹಿಸಿದರು. ಮಹಿಳಾ ಸ್ವಯಂಸೇವಿಕೆಯರ ನಾಯಕಿಯಾದರು.

ದಾಸಪ್ಪನವರ ಪತ್ನಿ ಯಶೋಧರಾ ತಮ್ಮ ಮನೆಯನ್ನು ಭೂಗತ ಚಳವಳಿಯ ನಿರ್ದೇಶನದ ಕೇಂದ್ರವಾಗಿ ಮಾಡಿದ್ದರು. ಭೂಗತ ಚಳವಳಿ ನಡೆಸುವುದು ಅತ್ಯಂತ ಅಪಾಯಕಾರಿಯಾಗಿತ್ತು. ಬ್ರಿಟಿಷ್ ಸರ್ಕಾರದಿಂದ ಶಿಕ್ಷಾರ್ಹವಾಗಿತ್ತು. ಯಶೋಧರಾಗೆ ದಿಟ್ಟತನದ

ಸ್ವಭಾವ. ತಮ್ಮ ಕರ್ತವ್ಯನಿಷ್ಠೆ ಮತ್ತು ಕಾರ್ಯ ದಕ್ಷತೆಯಲ್ಲಿ ಮಹಾತ್ಮಾಜಿಯವರ ಮನವನ್ನು ಗೆದ್ದಿದ್ದಾರೆ.

೧೯೩೮ರ ಶಿವಪುರದ ಧ್ವಜಸತ್ಯಾಗ್ರಹದಲ್ಲಿ ಯಶೋಧರಾ ಪ್ರಮುಖ ಪಾತ್ರವಹಿಸಿದರು. ವಂದೇ ಮಾತರಂ ಹಾಡುವುದು, ಧ್ವಜ ಹಾರಿಸುವುದು ಬ್ರಿಟಿಷ್ ಸರ್ಕಾರದಿಂದ ನಿರ್ಬಂಧಿಸಲ್ಪಟ್ಟಿದ್ದವು. ಗುಂಡು ಹಾರಿಸುತ್ತಾರೆಂಬ ಆಜ್ಞೆ ಇದ್ದಾಗಲೂ ಯಶೋಧರಾ ಹಾಗೂ ಸುನಂದಮ್ಮನವರು ಧ್ವಜಾರೋಹಣ ಮಾಡಿ ಶಿವಪುರ ಧ್ವಜಸತ್ಯಾಗ್ರಹವನ್ನು ಯಶಸ್ವಿಗೊಳಿಸಿ ಎಲ್ಲರನ್ನೂ ಆಚ್ಚರಿಗೊಳಿಸಿದರು.

ಸಂಪ್ರದಾಯಸ್ಥ ಕುಟುಂಬದ ಹೆಣ್ಣುಮಕ್ಕಳು ಹೊಸಲು ದಾಟಿದರೆ ಜನರು ಹುಬ್ಬೇರಿಸುತ್ತಿದ್ದ ಕಾಲದಲ್ಲಿ ಮಾವನವರಿಂದ ಉತ್ತೇಜಿತರಾದ ಉಮಾಬಾಯಿ ಕುಂದಾಪುರರವರು ಸಮಾಜಸೇವೆಗೆ ಹೊರಟುನಿಂತರು. ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ೧೯೨೧ರಲ್ಲಿ ಕಾಂಗ್ರೆಸ್ ಸೇರಿದರು. ಬೆಳಗಾವಿ ಕಾಂಗ್ರೆಸ್ ಅಧಿವೇಶನಕ್ಕೆ ೧೦೦ ಜನ ಮಹಿಳಾ ಸ್ವಯಂಸೇವಿಕೆಯರನ್ನು ಕಲೆ ಹಾಕಿದರು. ಟಿಳಕ ಕನ್ಯಾಶಾಲೆಯನ್ನು ತೆರೆದರು. ಭಗಿನಿ ಮಂಡಲವನ್ನು ಪ್ರಾರಂಭಿಸಿದರು. ಭಗಿನಿ ಮಂಡಲಕ್ಕೆ ಸೇರಿದವರಲ್ಲಿ ವಿದ್ಯೆ ಕಡಿಮೆ, ಅಡಿಗೆಮನೆ ಆಚೆಯ ಜಗತ್ತನ್ನರಿಯದವರೂ, ಸಂಕುಚಿತ ಬುದ್ಧಿಯವರೂ ಇರುತ್ತಿದ್ದರು. ಇಂತಹವರನ್ನು ಕೂಡಿಸಿ ಸಾರ್ವಜನಿಕ ಕಾರ್ಯದಲ್ಲಿ ಆಸಕ್ತಿ ಬರುವಂತೆ ಮಾಡುವುದು ಕಷ್ಟ ಕೆಲಸವೆಂದು ಉಮಾಬಾಯಿ ಹೇಳಿದ್ದಾರೆ.

ನಾಗಮ್ಮ ಪಾಟೀಲರು ಮಹಿಳಾ ವಿದ್ಯಾಪೀಠದ ನೆಪದಲ್ಲಿ ಕನ್ಯೆಯರನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರಚೋದಿಸಿದರು. ಹರಿಜನ ಮಕ್ಕಳನ್ನು ತಂದು ಸಾಕಿ ಸಲಹಿದರು.

ಕೃಷ್ಣಾಬಾಯಿ ಪಂಜೇಕರ್ ವಿದೇಶೀ ವಸ್ತ್ರಗಳ ಮಾರಾಟದ ವಿರುದ್ಧ ಪಿಕೆಟಿಂಗ್ ನಡೆಸಲು ಸ್ತ್ರೀ ಸಮೂಹವನ್ನೇ ಸೃಷ್ಟಿಸಿದರು. ಗ್ರಾಮಾಂತರಗಳಿಗೆ ಹೋಗಿ ಉಗ್ರ ಭಾಷಣ ಮಾಡಿ ಬಿರುಸಾದ ಕಾರ್ಯಕ್ರಮಗಳನ್ನು ನಡೆಸಿ ಕರ್ನಾಟಕದ ಮಹಿಳೆಯರನ್ನು ಸಾಧ್ಯವಾದ ಮಟ್ಟಿಗೂ ಮಹಾತ್ಮರ ಸತ್ಯಾಗ್ರಹ ರೀತಿಗೆ ಎಳೆದರು.

ರಮಾಬಾಯಿ ಯಾಳಗಿ, ಪ್ರಮಿಳಾ ದೇಶಪಾಂಡೆ, ಶಕುಂತಲಾ ಕುರ್ತಕೋಟಿ, ಮಣಿಬೆನ್, ಮೃಣಾಲಿನಿ ಸಾರಾಬಾಯಿ—ಇಂತಹ ಮಹಿಳೆಯರೊಡನೆ ಸಂಪರ್ಕವು ರಾಷ್ಟ್ರೀಯ ವಿಚಾರಗಳ ಮಂಥನಕ್ಕೆ ಅವಕಾಶ ಕೊಟ್ಟಿತು ಎಂದಿದ್ದಾರೆ ಲೀಲಾವತಿ ಮಾಗಡಿ.

ವಾತಾವರಣ ಪ್ರಚೋದನೆಯಿಂದಲೂ ವ್ಯಕ್ತಿಗಳ ಪ್ರಭಾವದಿಂದಲೂ ರಾಷ್ಟ್ರಸೇವೆಯ ಕೂಗಿನಿಂದಲೂ ಕರ್ನಾಟಕದಲ್ಲಿ ಮಹಿಳೆಯರು ವೀರರಾದರು. ತ್ಯಾಗಿಯಾದರು. ಸುಖವನ್ನು ತ್ಯಜಿಸಿ ತಮ್ಮ ದೇಹವನ್ನು ಕಷ್ಟಕ್ಕೊಡ್ಡಿದರು. ಕಾಲ್ನಡಿಗೆಯಲ್ಲಿ ಊರೂರು ಸುತ್ತಿದರು. ಸಂಗ್ರಾಮದಲ್ಲಿ ಧುಮುಕಿ ಬಲಿದಾನವಾದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರ ವನಿತೆಯರ ಪಾತ್ರವು ಪಾಶ್ಚಾತ್ಯರಿಗೆ ಅನುಕರಣೀಯವಾಯಿತು.

ಡಾ॥ ಬಿ. ಲೀಲಾ

# ಸಾಮಾಜಿಕ ಸುಧಾರಣೆಯಲ್ಲಿ ಬ್ರಹ್ಮಸಮಾಜದ ಪಾತ್ರ: ಮೈಸೂರಿಗೆ ಸಂಬಂಧಿಸಿದಂತೆ

ಈ ಲೇಖನದ ಮುಖ್ಯ ಉದ್ದೇಶ ಮೈಸೂರಿನ ಸಾಮಾಜಿಕ ಸುಧಾರಣೆಯಲ್ಲಿ ಬ್ರಹ್ಮಸಮಾಜವು ಎಷ್ಟರ ಮಟ್ಟಿಗೆ ಯಶಸ್ವಿಯಾಯಿತು ಎಂಬುದು. ಇದಕ್ಕೆ ಆಧಾರ ಗ್ರಂಥಗಳು, ಕರ್ನಾಟಕ ಸರ್ಕಾರದ ಪತ್ರಾಗಾರ ಇಲಾಖೆ ಮತ್ತು ಮುಂಬಯಿ ವಿಶ್ವವಿದ್ಯಾನಿಲಯದ ಗ್ರಂಥಾಲಯ ಬಿಡಿಪತ್ರಿಕೆ ಮತ್ತು ಇತರ ಲೇಖನಗಳು.

ಹಳೆಯ ಮೂಢನಂಬಿಕೆಗಳಿಗೆ ಒಂದು ಕಡಿವಾಣವನ್ನು ಹಾಕಿ, ವಿಜ್ಞಾನ, ಸಾಮಾಜಿಕ ಮತ್ತು ರಾಜಕೀಯ ಪ್ರಣಾಳಿಕೆಯನ್ನು ಎತ್ತಿಹಿಡಿದು ಸಮಾಜಕ್ಕೆ ಒಂದು ದಾರಿಯನ್ನು ತೋರಿಸಿದ ರಾಜಾರಾಮ್ ಮೋಹನ್‌ರಾಯ್‌ರವರನ್ನು ಆಧುನಿಕ ಭಾರತದ ತಂದೆಯೆನ್ನಲು ಅಡ್ಡಿಯಿಲ್ಲ. ಪಂಡಿತ ಶಿವನಾಥಶಾಸ್ತ್ರಿಯುವರೆಂದಂತೆ, "ಬ್ರಹ್ಮಸಮಾಜವೆಂದರೆ ನಿಜವಾದ ದೇವರನ್ನು ಪೂಜಿಸುವ ಒಂದು ಸಮಾಜ ಮತ್ತು ಇದಕ್ಕೆ ವಿಗ್ರಹಾರಾಧನೆ ಸಲ್ಲ."[1] ಈ ಪ್ರಣಾಳಿಕೆಯನ್ನು ಎತ್ತಿ ಹಿಡಿದು ರಾಯ್‌ರವರು ಸಮಾಜದಲ್ಲಿ ಬೇರೂರಿದ್ದ ಕುರುಡು ನಂಬಿಕೆಗಳನ್ನು ಎತ್ತಿತೋರಿಸಿ ತಮ್ಮದೇ ಆದ ಸ್ವತಂತ್ರವಾದ ಸಮಾಜವನ್ನು ನಿರ್ಮಿಸಿದರು. ಬ್ರಹ್ಮಸಮಾಜದ ಉಗಮ ೧೮೨೮. ಇದರ ವ್ಯಾಪ್ತಿ ಕಲಕತ್ತೆಯಿಂದ ಹಿಡಿದು ಮೈಸೂರಿನವರೆಗೂ ಹಬ್ಬಿತ್ತು. ೧೮೨೮ ಸಮಾಜದ ಸಂಖ್ಯೆ ೧ ಇದ್ದದ್ದು ೧೮೯೫ರಲ್ಲಿ ೧೯೭ಕ್ಕೆ ಏರಿತ್ತು.[2] ಬ್ರಹ್ಮಸಮಾಜದ ಉಗಮವಾದ ಕಲಕತ್ತೆಯಲ್ಲಿ ನಾವು ಹೆಚ್ಚಿನ ವ್ಯಾಪ್ತಿಯನ್ನು ಕಾಣಬಹುದಾದರೂ ದಕ್ಷಿಣಭಾರತದಲ್ಲಿ ಅಂದರೆ ಆಂಧ್ರ, ಮದ್ರಾಸ್ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಕೂಡ ಬ್ರಹ್ಮಸಮಾಜದ ವ್ಯಾಪ್ತಿ ಇತ್ತು.

ಬ್ರಹ್ಮಸಮಾಜದ ಚಲನೆಯನ್ನು ವೀಕ್ಷಿಸಿದಾಗ, ಇದು ೧೯ನೇ ಶತಮಾನದ ಒಂದು ಸಾಮಾಜಿಕ–ಮತೀಯ ಚಲನೆಯೆಂದೇ ಹೇಳಬಹುದು. ಇದಕ್ಕೆ ಮೂಲಭೂತ ಕಾರಣ ಆಂಗ್ಲರ ಪ್ರಭಾವ ಮತ್ತು ರಾಜಮನೆತನದವರ ಪ್ರೋತ್ಸಾಹ. ಮೂಲಭೂತ ನಂಬಿಕೆಗೂ ಆದರ್ಶಕ್ಕೂ ಸಂಘರ್ಷಣೆ ಉಂಟಾಗಿದ್ದರಿಂದ ಉತ್ಪನ್ನವಾದದ್ದು ಬ್ರಹ್ಮಸಮಾಜ. ಈ ಒಂದು ಹಿನ್ನೆಲೆಯಲ್ಲಿ ಬ್ರಹ್ಮಸಮಾಜವನ್ನು ವೀಕ್ಷಿಸಬೇಕು. ಬ್ರಹ್ಮಸಮಾಜಕ್ಕೆ ಒಲಿದವರು ವಿದ್ಯಾವಂತವರ್ಗದ ಕುಲೀನರು ಮತ್ತು ಸಮಾಜದಲ್ಲಿ ಪ್ರತಿಷ್ಠಿತರಾದ ವ್ಯಕ್ತಿಗಳು; ಇವರುಗಳೇ ಮೈಸೂರಿನಲ್ಲಿ ಇದರ ಆಧಾರ ಸ್ತಂಭವಾದರು.

---

1. Shivanath Sastri : *History of Brahma Samaj*, 1974, p. 2
2. Atulchandra Gupta (Ed.) : *Studies in the Bengal Renaissance*, 1958, p. 479

ಬ್ರಹ್ಮಸಮಾಜದ ವಿಸ್ತಾರ : ಬೆಂಗಳೂರಿನಲ್ಲಿ ಬ್ರಹ್ಮಸಮಾಜದ ಉಗಮವಾದದ್ದು ಒಂದು ಆಕಸ್ಮಿಕ ವೆಂದು ಹೇಳಬಹುದು.[3] ೧೮೬೯ರಲ್ಲಿ ಪೆಟ್ಟಾ ಸಮಾಜವು ಅಸ್ತಿತ್ವದಲ್ಲಿತ್ತು. ಕೋಲೆಟ್ ಅವರ ಬ್ರಹ್ಮ ವಾರ್ಷಿಕ ಪುಸ್ತಕದಲ್ಲಿ ಮತ್ತೆರಡು ಸಮಾಜಗಳ ಉಲ್ಲೇಖ ವನ್ನು ಕಾಣುತ್ತೇವೆ. ಬಾಬು ದೇವೇಂದ್ರನಾಥ ಠಾಗೂರರವರಿಂದ ಸ್ಥಾಪಿಸಲ್ಪಟ್ಟ ತತ್ವಬೋಧನ ಸಮಾಜವು (೧೮೩೯) ತನ್ನ ಪ್ರಭಾವವನ್ನು ಬಂಗಾಳದಲ್ಲಿ ಮತ್ತಿತರ ಸುತ್ತಮುತ್ತ ಊರಿನಲ್ಲಿ ಸಾಕಷ್ಟು ಪ್ರಚಾರ ಮಾಡಿತು ಮತ್ತು ರಾಯ್‌ರವರ ವಿಗ್ರಹಾರಾಧನೆಯ ಖಂಡನೆ ಮತ್ತಿತರ ಸಾಮಾಜಿಕ ಸುಧಾರಣೆಗಳ ಕಡೆ ಮಹತ್ವವಾದ ಗಮನವನ್ನು ಕೊಟ್ಟಿದ್ದರಿಂದ ಬಂಗಾಲದ ಜನಜೀವನದ ಮೇಲೆ ಯಶಸ್ವೀ ಪರಿಣಾಮವನ್ನು ಬೀರಿತು. ತತ್ವಬೋಧನ ಸಮಾಜದ ಪತ್ರಿಕೆಯೇ ತತ್ವ ಬೋಧಿನಿ ಪತ್ರಿಕೆ. ತತ್ವಬೋಧಿನಿ ಪತ್ರಿಕೆಯಲ್ಲಿ ಬರ ತಕ್ಕಂತಹ ಸಂಪಾದಕೀಯವೆಂದರೆ ಸಾಮಾನ್ಯವಾಗಿ ದೇವೇಂದ್ರನಾಥ ಮಹರ್ಷಿಗಳ ಭಾಷಣ. ಈ ಭಾಷಣ ಗಳು ಬೋಧನಾಯುಕ್ತವೂ ಆಗಿದ್ದವು. ಈ ಮೂಲಕ ಪತ್ರಿಕೆ ತನ್ನ ಧೋರಣೆಯಲ್ಲಿ ಹಿಂದೂ ಸಮಾಜದ ಹುಳ ಕನ್ನೂ ಸಾಮ್ರಾಜ್ಯಶಾಹಿ ನಡವಳಿಕೆಯನ್ನೂ[4] ಎತ್ತಿಹಿಡಿ ಯುವುದೇ ಆಗಿತ್ತು. ಈ ಪತ್ರಿಕೆಯು ತಮಿಳಿನಲ್ಲಿ ಪ್ರಕಟ ಗೊಳ್ಳುತ್ತಿದ್ದರಿಂದ ತಮಿಳಿನವನಾದ ರಾಜವೇಲು ನಾಯ್ಡು ತನ್ನ ಇತರ ಸಂಗಡಿಗರಿಗೆ ಪ್ರತಿಕೆಯಲ್ಲಿದ್ದ ಸುದ್ದಿಯನ್ನು ವಿವರಿಸುತ್ತಿದ್ದು, ಅದರಲ್ಲಿ ಅತ್ಯಂತ ಆಕ ರ್ಷಕವಾದುದೆಂದರೆ ವಿಗ್ರಹಾರಾಧನೆಯ ಖಂಡನೆ. ಬರ್ಮಾದಲ್ಲಿದ್ದ ರಾಜವೇಲುನಾಯ್ಡು ತನ್ನ ಇತರ ಸಂಗ ಡಿಗರಿಗೆ ಬ್ರಹ್ಮಸಮಾಜದ ಬಗ್ಗೆ ವಿವರಿಸಿ ಚರ್ಚಿಸುತ್ತಿ ದ್ದನು ಮತ್ತು ಆಸಕ್ತಿಯನ್ನೂ ಹುಟ್ಟಿಸಿದ್ದನು. ಇವನು ಬರ್ಮಾದಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸಿದನು. ಇದಾ ದದ್ದು ಸಮಾರು ೧೮೭೧ ರಲ್ಲಿ. ಆದರೆ ೧೮೭೨ರಲ್ಲಿ ಬರ್ಮಾದ ರೆಜಿಮೆಂಟನ್ನು ಬೆಂಗಳೂರಿಗೆ ವರ್ಗಾಯಿಸಿದ್ದ ರಿಂದ ಸಮಾಜವೂ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಿತು. ಆಗ ಮದ್ರಾಸ್ ಮತ್ತು ಬೆಂಗಳೂರಿಗೆ ಸಮಾಜದ ಸಂಪರ್ಕವು ಹೆಚ್ಚಾಯಿತು.[5] ಇದೇ ಸಮಯದಲ್ಲಿ ಪೂನಾ ಚಂದ್ರಶೇಖರ್ ಐಯ್ಯರ್ ಎಂಬುವರು ವಿಗ್ರಹಾ ರಾಧನೆಯು ತಮಗೆ ಒಗ್ಗದ ಮಾರ್ಗವೆಂದರಿತು ಬ್ರಹ್ಮ ಸಮಾಜದ ಪೋಷಣೆಗೆ ನಿಂತರು. ಅವರು ಹಲವಾರು ವರ್ಷಗಳು ಸನ್ಯಾಸಿಯಂತೆ ತಿರುಗಾಡಿ ೧೮೬೬ರಲ್ಲಿ ಬೆಂಗಳೂರಿನಲ್ಲಿ ನೆಲಸಿದಾಗ ಅವರಿಗೆ ಹಲವಾರು ಅನು ಯಾಯಿಗಳು ದೊರೆತರು. ಅವರು ಬ್ರಹ್ಮಸಮಾಜದ ಅತ್ಯಂತ ಮೇಧಾವಿ ಮತ್ತು ಪ್ರಭಾವಶಾಲಿ ಬೋಧಕ ರಾದರು. ಕ್ರಮೇಣ ಬ್ರಹ್ಮಾನಂದಸ್ವಾಮಿಯಾಗಿ ವಿಗ್ರಹಾರಾಧನೆ, ಮೂಢನಂಬಿಕೆ, ಜಾತಿಪದ್ಧತಿ–ಇವು ಗಳನ್ನು ಖಂಡಿಸಿ, ಸೂಕ್ತರೀತಿಯಲ್ಲಿ ಬೋಧನೆ ಮಾಡ ತೊಡಗಿದರು.[6] ಇಂತಹ ಮತ್ತೊಬ್ಬರೆಂದರೆ ರೆಜಿ ಮೆಂಟಲ್ ಹೈಸ್ಕೂಲಿನ ಪ್ರಾಧ್ಯಾಪಕರಾದ ಗೋಪಾಲ ಸ್ವಾಮಿಯವರು. ಗೋಪಾಲಸ್ವಾಮಿಯವರ ನಿಷ್ಠೆ ಮತ್ತು ಸೇವೆಯಿಂದ ಸಮಾಜವು ಊರ್ಜಿತವಾಯಿತು. ಇದರಿಂದಾಗಿ ಸಮಾಜಕ್ಕೆ ಆರ್ಕಾಟ್ ನಾರಾಯಣಸ್ವಾಮಿ ಯವರಂತಹ ಪ್ರಮುಖ ಧುರೀಣರು ಸೇರುವಂತಹವ ರಾದರು. ಅವರು ಬೆಂಗಳೂರಿನ ವರ್ತಕವರ್ಗದ ಪ್ರಮುಖರಾಗಿದ್ದವರು. ಅವರ ಸಹಾಯದಿಂದ ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಿಕ್ಕಿತು.

ಪಂಡಿತ ಶಿವನಾಥಶಾಸ್ತ್ರಿಗಳ ದೇಶಪರ್ಯಟಣ ಬೆಂಗಳೂರಿನವರಲ್ಲಿ ನವಚೇತನವನ್ನು ಉಂಟುಮಾಡಿತು. ಮೈಸೂರಿನ ಮೊದಲನೇ ದಿವಾನರಾದ ಸಿ. ರಂಗಾ ಚಾರ್ಲುರವರು ತಾವೇ ಸ್ಥಾಪಿಸಿದ ಲಿಟರರಿ

---

3. R. Srinivasan : *Brahma Samaj in Tamilnadu,* Journal of the University of Bombay, Vol. XLIV-XIV, Oct. 1975-76, pp. 213-221
4. Arundhati Mukhopadhyay : *Attitudes Towards Religion and Culture in the Ninteenth Century Bengal*, p. 10
5. *History of Brahma Samaj*, p. 496
6. *78th All India Brahmo Conference,* Bangalore, 30th Sept. 1968, pp. 63-69

ಯೂನಿಯನ್ (೧೮೭೬) ಸಂಸ್ಥೆಯಲ್ಲಿ ಬ್ರಹ್ಮಸಮಾಜದ ಧುರೀಣರಾದ ಪಂಡಿತ ಶಿವನಾಥಶಾಸ್ತ್ರಿಗಳ ಭಾಷಣವನ್ನು ಏರ್ಪಡಿಸಿ (೧೮೮೧)[7] ತಾವೇ ಅಧ್ಯಕ್ಷಸ್ಥಾನವನ್ನೂ ವಹಿಸಿದ್ದರು. ಶಿವನಾಥಶಾಸ್ತ್ರಿಗಳು ಮತ್ತೆರಡು ಬಾರಿ ಬೆಂಗಳೂರಿಗೆ ೧೮೮೪ ಮತ್ತು ೧೯೦೪ರಲ್ಲಿ ಭೇಟಿಕೊಟ್ಟು ೧೫ ದಿವಸ ತಂಗಿದ್ದು, ಬ್ರಹ್ಮಸಮಾಜದ ತತ್ವಗಳನ್ನು ಸಾಕಷ್ಟು ಪ್ರಚಾರಮಾಡಿದರು. ಶಾಸ್ತ್ರಿಗಳ ಆಗಮನ ಬೆಂಗಳೂರಿನ ನಾಗರಿಕರಲ್ಲಿ ಹೆಚ್ಚು ಪ್ರಭಾವವನ್ನು ಉಂಟುಮಾಡಿತು. ರಂಗಾಚಾರ್ಲುರವರು ಬ್ರಹ್ಮ ಸಮಾಜದ ಶಿವನಾಥಶಾಸ್ತ್ರಿಗಳಲ್ಲಿ ವಿಶ್ವಾಸ ಉಳ್ಳವ ರಾದರೂ ಅವರು ಸಮಾಜ ಸುಧಾರಣ ಧುರೀಣರೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅವರು ಕೇವಲ ಒಂದೂವರೆ ವರ್ಷ ಮಾತ್ರ ದಿವಾನ ಪದವಿಯಲ್ಲಿದ್ದರು. ಆದರೆ ಬ್ರಹ್ಮಸಮಾಜದ ತತ್ವಗಳನ್ನು ರಾಜಕೀಯ ಅನು ಷ್ಠಾನದಲ್ಲಿ ಅಳವಡಿಸಿದವರು ದಿವಾನ್ ಶೇಷಾದ್ರಿ ಐಯರ್ ರವರು. ಮೈಸೂರು ದೇಶವು ತನ್ನ ನೆರೆಹೊರೆ ಪ್ರಾಂತ್ಯ ಗಳಿಗಿಂತ ಸಾಮಾಜಿಕ ಸುಧಾರಣೆಯಲ್ಲಿ ಹಿಂದುಳಿದಿದ್ದಾಗ, ೧೮೯೪ರಲ್ಲೇ[8] ಬಾಲ್ಯವಿವಾಹವನ್ನು ಸಶಕ್ತ ಕಾನೂನಿ ನಿಂದ ನಿಲ್ಲಿಸುವಂತೆ ಮಾಡಿದ ಕೀರ್ತಿ ಶೇಷಾದ್ರಿ ಐಯರ್ ರವರದ್ದು. ಬಹುಶಃ ಇದು ಬ್ರಹ್ಮಸಮಾಜದ ಪರೋಕ್ಷ ರೂಪ ಇರಬಹುದು.

೧೮೮೧ರಲ್ಲಿ ಬಿಪಿನ್‌ಚಂದ್ರಪಾಲರವರು ರಾವ್ ಬಹದ್ದೂರ್ ಆರ್ಕಾಟ್ ನಾರಾಯಣಸ್ವಾಮಿ ಮುದಲಿ ಯಾರ್ ಹೈಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯ ರಾದರು.[9] ಇದು ಸಮಾಜ ವಿಸ್ತರಣದಲ್ಲಿ ಒಂದು ಮೈಲಿಗಲ್ಲು ಎನ್ನಬಹುದು. ಕಂಟೋನ್ಮೆಂಟ್ ಸಮಾಜವು ಒಂದು ಬ್ರಹ್ಮಮಂದಿರವನ್ನು ಕಟ್ಟಿತು ಮತ್ತು ವೀರೇಶಲಿಂಗಂ ಪಂತುಲುರವರ ಸಹಾಯದಿಂದ ಸಮಾಜದ ಬೆಳವಣಿಗೆ ಸಾಧ್ಯವಾಯಿತು. ಮತ್ತೊಂದು ಸಮಾಜವು ಹನುಮಂತಪ್ಪನವರ ನೇತೃತ್ವದಲ್ಲಿ ಬೆಳೆಯಿತು. ಕಂಟೋನ್ಮೆಂಟ್ ಸಮಾಜವು ಡಾ॥ ಎಸ್. ವಿ. ರಾಮ ಸ್ವಾಮಿ ಐಯಂಗಾರ್‌ರವರ ನೇತೃತ್ವದಲ್ಲಿ ಮುಂದುವರೆ ಯಿತು. ರಾಮಸ್ವಾಮಿ ಐಯಂಗಾರ್‌ರವರು ಬ್ರಹ್ಮ ಸಮಾಜದ ಪ್ರಕಾರ ಬಂಗಾಳಿ ಹೆಣ್ಣುಮಗಳನ್ನು ಮದುವೆಯಾದರು ಮತ್ತು ಅಜಿತ್‌ಮೋಹನರವರ ಬೆಂಬಲದಿಂದ ಸಮಾಜದ ಕರ್ತವ್ಯವನ್ನು ನಿರ್ವಹಿಸಿದರು. ಬೆಂಗಳೂರು ಕಂಟೋನ್ಮೆಂಟ್ ಸಮಾಜಕ್ಕೆ ಒಂದು ಸ್ವರೂಪ ವನ್ನು ಕೊಟ್ಟವರು ನಾರಾಯಣಸ್ವಾಮಿ ಮುದಲಿಯಾರ್. ತಮ್ಮ ಉದಾರವಾದ ದಾನದಿಂದ ಬ್ರಹ್ಮಮಂದಿರವನ್ನು ಕಟ್ಟಿಸಿದ್ದಲ್ಲದೆ, ಅದನ್ನು ನಡೆಸಿಕೊಂಡು ಬರತಕ್ಕಂತಹ ಜನರನ್ನು ನೇಮಿಸಿ ಭದ್ರವಾದ ಬುನಾದಿಯನ್ನು ಹಾಕಿದರು. ಬ್ರಹ್ಮಮಂದಿರದ ಶಂಕುಸ್ಥಾಪನೆ ಮಾಡಿದ ವರು ಪ್ರತಾಪಚಂದ್ರ ಮಜುಮ್‌ದಾರರು (೧೮೯೬).

## ಬ್ರಹ್ಮಸಮಾಜದ ಧುರೀಣರು

೧. ರಾವ್‌ಬಹದ್ದೂರ್ ಆರ್ಕಾಟ್ ನಾರಾಯಣ ಸ್ವಾಮಿ ಮುದಲಿಯಾರ್ (೧೮೩೭-೧೯೧೦) : ಬಿಪಿನ್ ಚಂದ್ರಪಾಲ್‌ರವರಂತಹ ಕರ್ತೃತ್ವಶಾಲಿಯನ್ನು ತಾವು

---

7. Hemachandra Sarkar : *Sivanath Shastri*, 1929, pp. 49, 52

8. ವೀರೇಶಲಿಂಗಂ ಪಂತುಲುರವರ ಆಗಮನ ಸ್ವಾಭಾವಿಕವಾಗಿಯೇ ಬೆಂಗಳೂರು ನಿವಾಸಿಗಳಲ್ಲಿ ಪರಿಣಾಮವನ್ನು ಉಂಟು ಮಾಡಿತು. ವೀರೇಶಲಿಂಗಂರವರ ಬೆಂಗಳೂರಿನ ಮನೆಯಲ್ಲಿ ಮೈಸೂರು ದೇಶದ ಸಾಮಾಜಿಕ ಸುಧಾರಣೆಯ ಶಂಕು ಸ್ಥಾಪನೆ ಮಾಡಿದಂತಾಯಿತು. ಮೈಸೂರುದೇಶದ ಮೊದಲನೇ ವಿವಾಹ ಅವರ ಮನೆಯಲ್ಲಿ ನಡೆಯಿತು (೧೯೦೦). ಆದರೆ ಈ ಮದುವೆ ಮೈಸೂರಿನ ಹೊರಗೆ ಅಂದರೆ ದಂಡಿನಲ್ಲಿ ನಡೆದದ್ದು. ಆದರೆ ಇದಕ್ಕೆ ಮೊದಲೇ 'ಕರ್ಣಾಟಕ ಪ್ರಕಾಶಿಕ' ವೆಂಬ ಕನ್ನಡಪತ್ರಿಕೆ (೧-೬-೧೮೯೬) ಈ ರೀತಿ ಬರೆಯಿತು : "ಮೈಸೂರಿಗೆ ಸಾಮಾಜಿಕ ಸುಧಾರಕರು ಬಂದದ್ದು ವ್ಯರ್ಥವಾಗಲಿಲ್ಲ. ಯಾಕೆಂದರೆ ವಿಧವಾ ವಿವಾಹಕ್ಕೆ ಸಾಕಷ್ಟು ವಿರೋಧವಿದ್ದರೂ ಮೈಸೂರಿನಲ್ಲಿ ವಿಧವಾ ವಿವಾಹ ನಡೆದಿದೆ." ಈ ಎರಡೂ ಹೇಳಿಕೆಯನ್ನು ಗಮನಿಸಿದಾಗ ೧೮೯೬ಕ್ಕಿಂತ ಮೊದಲೇ ಸಮಾಜ ಸುಧಾರಣ ಜಾಗೃತಿ ಮೈಸೂರಿನಲ್ಲಿ ಇತ್ತೆಂಬುದು ವ್ಯಕ್ತವಾಗುತ್ತದೆ. ಶೇಷಾದ್ರಿ ಐಯರ್‌ರವರ ಸಮಾಜ ಸುಧಾರಣೆ ಈಗಾಗಲೇ ವ್ಯಕ್ತ ವಾಗಿದೆ.

9. Bipinchandra Pal : *Memories of My Life and Times*, 1932, p. 309

ಸ್ಥಾಪಿಸಿದ ಸ್ಕೂಲಿಗೆ ಮುಖ್ಯೋಪಾಧ್ಯಾಯರನ್ನಾಗಿ ನೇಮಿಸಿದ ಯಶಸ್ಸು ಆರ್ಕಾಟ್ ನಾರಾಯಣಸ್ವಾಮಿ ಯವರದ್ದು. ೧೮ನೇ ಶತಮಾನದ ಕ್ಷಾಮಪೀಡಿತ ಪ್ರದೇಶವಾದ ಮದ್ರಾಸ್ ಮತ್ತಿತರ ಊರಿನಲ್ಲಿ ಸಂಚರಿಸಿ ಕರಾರಿನ ಮೇಲೆ ಅಕ್ಕಿ ಸರಬರಾಜು ಮಾಡುತ್ತಿದ್ದು, ಆಂಗ್ಲ ಸರ್ಕಾರದಿಂದ ಉನ್ನತ ಹುದ್ದೆಯನ್ನು ಹೊಂದಿದರು. ತಮ್ಮ ಹಣದ ಸದ್ವಿನಿಯೋಗ ಮಾಡಬಯಸಿದ ಮುದಲಿಯಾರರು ಬ್ರಹ್ಮತತ್ವಗಳನ್ನು ಮೆಚ್ಚಿದ್ದಲ್ಲದೆ, ತಮ್ಮ ದೇಶದ ಪ್ರಜೆಗಳು ಉತ್ತಮ ವ್ಯಾಸಂಗವನ್ನು ಹೊಂದಬೇಕೆಂಬ ಇಚ್ಛೆಯಿಂದ ಪಂಡಿತ ಶಿವನಾಥಶಾಸ್ತ್ರಿಗಳಿಗೆ ತಮ್ಮ ಸ್ಕೂಲಿಗಾಗಿ ಮುಖ್ಯೋಪಾಧ್ಯಾಯರನ್ನು ಸೂಚಿಸಲು ಕೋರಿದಾಗ, ಅವರು ಬಿಪಿನ್‌ಚಂದ್ರಪಾಲರವರನ್ನು ಸೂಚಿಸಿದರು. ಪಾಲ್‌ರವರು ತಮ್ಮ ವಿದ್ಯಾರ್ಥಿ ದೆಸೆಯಿಂದಲೇ ಪಂಡಿತ ಶಿವನಾಥಶಾಸ್ತ್ರಿಗಳ ಬ್ರಹ್ಮ ಸಮಾಜಕ್ಕೆ ಒಲಿದವರು. "ಕೇಶಬ್ ಮತ್ತು ಅವರ ಧರ್ಮಪ್ರಚಾರಕರ ನೇತೃತ್ವಕ್ಕಿಂತ ಶಿವನಾಥಶಾಸ್ತ್ರಿಗಳ ಬ್ರಹ್ಮತತ್ವ ನನಗೆ ಹಿಡಿಸಿತು" ಎಂದು ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿದ್ದಾರೆ.

೨. ಬಿಪಿನ್‌ಚಂದ್ರಪಾಲ್ : ಇವರು ಮುಖ್ಯೋಪಾಧ್ಯಾಯ ಹುದ್ದೆಯನ್ನು ವಹಿಸಲು ಬೆಂಗಳೂರಿಗೆ ಬಂದಾಗ (೧೮೮೧), ಅವರಿಗೆ ಕನ್ನಡ ಅಥವಾ ತಮಿಳು ಭಾಷೆಯ ಪರಿಚಯವಿಲ್ಲದ್ದರಿಂದ, ಮೊದಲನೇ ದಿವಸ 'ಪಾಲ್' ಎಂದು ಕೂಗಿ ಎಬ್ಬಿಸಿದ್ದು 'ಹಾಲಿನವಳು' ಎಂದು ಗೊತ್ತಾಗಲಿಲ್ಲವಂತೆ. ಪಾಲ್ ಎಂದರೆ ತಮಿಳಿನಲ್ಲಿ ಹಾಲು ಎಂದರ್ಥ. ಕಾಲಕ್ರಮೇಣ ಅವರಿಗೆ ಕನ್ನಡ-ತಮಿಳಿನ ಭಾಷಾನುಭವ ಆಯಿತು. ಬ್ರಹ್ಮ ಸಮಾಜದ ಅನುಸಾರ ಮುಂಬಯಿಯಲ್ಲಿ ವಿಧವೆಯನ್ನು ಮದುವೆಯಾದವರ ಪೈಕಿ ಪಾಲ್‌ರವರೇ ಮೊದಲಿಗರು. ತಮ್ಮ ಮುಖ್ಯೋಪಾಧ್ಯಾಯ ಹುದ್ದೆಯನ್ನು ಪಾಲ್‌ರವರು ಕೇವಲ ಒಂದೇ ವರುಷ ಅಲಂಕರಿಸಿದ್ದರೂ ಅವರ ವರ್ಚಸ್ಸು ಬೆಂಗಳೂರಿನಲ್ಲಿ ಪಸರಿಸಿತ್ತು. ಬೆಂಗಳೂರಿನ ನಾಗರಿಕ ಪ್ರಜೆಗಳು ಪಾಲ್‌ರವರ ಉದಾರವಾದ ಆದರ್ಶ ನಡವಳಿಕೆಯನ್ನು ಮೆಚ್ಚಿದ್ದರು. ಅವರು ಕಾರಣಾಂತರದಿಂದ ೧೮೮೨ರಲ್ಲಿ ಕಲಕತ್ತೆಗೆ ಹಿಂದಿರುಗಿದರು.

೩. ಬ್ರಜೇಂದ್ರನಾಥ ಸೀಲ್ : ೧೮೮೪ರಲ್ಲಿ ತತ್ವಶಾಸ್ತ್ರದಲ್ಲಿ ಪದವಿ ಪಡೆದ ಬ್ರಜೇಂದ್ರನಾಥ ಸೀಲ್‌ರವರಿಗೆ ಕುಚ್‌ಬಿಹಾರಹ ಮಹಾರಾಜರು ವಿದ್ಯಾವ್ಯಾಸಂಗಕ್ಕೆ ಸಹಾಯಮಾಡಿದ್ದಲ್ಲದೆ, ಅವರನ್ನು ಯೂರೋಪ ನಗರಕ್ಕೆ ಕಳುಹಿಸಿದರು. ಸೀಲ್‌ರವರು ಕಲಕತ್ತೆಯ ವಿಕ್ಟೋರಿಯಾ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಹುದ್ದೆಯನ್ನು ಅಲಂಕರಿಸಿದರು. ೧೮೯೯, ೧೯೦೭ ಮತ್ತು ೧೯೧೧ರಲ್ಲಿ ಇಂಗ್ಲೆಂಡ್ ಮತ್ತಿತರ ದೇಶಗಳಿಗೆ ಉಪನ್ಯಾಸಕರಾಗಿ ಹೋಗಿದ್ದರು. ಬ್ರಹ್ಮಸಮಾಜದ ಕೇಶಬ್‌ಸೇನ್‌ರವರ ಅಳಿಯಂದಿರು ಇವರಿಗೆ ಸಹಾಯ ಮಾಡಿದರು. ಸ್ವಾಮಿ ವಿವೇಕಾನಂದರ ಸಮಕಾಲೀನರಾದ ಬ್ರಜೇಂದ್ರನಾಥ ಸೀಲರು ಬ್ರಹ್ಮತತ್ವದ ಕಡೆಗೆ ಕಾಲೇಜನಲ್ಲಿ ವ್ಯಾಸಂಗ ಮಾಡುವಾಗಲೇ ಆಕರ್ಷಿತರಾಗಿದ್ದರು. ೧೯೨೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿಯೂ ನೇಮಿಸಲ್ಪಟ್ಟರು. ಅವರು ೧೯೨೧ ರಿಂದ ೧೯೩೦ರವರೆಗೆ ಉಪಕುಲಪತಿಯಾಗಿ ಮುಂದುವರೆದು, ೧೯೨೪ರಲ್ಲಿ *Classical Syllabus of Indian Philosophy* ಮತ್ತು *Ram Mohan Roy, A Universal Man* ಎಂಬ ಉದ್ಗ್ರಂಥಗಳನ್ನು ರಚಿಸಿದರು. ಇವರು ತತ್ವಶಾಸ್ತ್ರ ಪ್ರಾಧ್ಯಾಪಕರಾದರೂ ರಾಯ್‌ರವರ ಮಾನವೀಯತೆಯನ್ನು ಹೆಚ್ಚಾಗಿ ಮೆಚ್ಚಿದ್ದರು.

ಸೀಲ್‌ರವರ ಬಗ್ಗೆ ಹೆಚ್ಚು ಮಾಹಿತಿ ದೊರೆಯದಿದ್ದರೂ ಅವರ *Quest Eternal* ಎಂಬ ಪದ್ಯದಿಂದ ಅವರ ಆದರ್ಶದ ಸಾಕಷ್ಟು ಪುರಾವೆಯನ್ನು ಗುರುತು ಮಾಡಬಹುದು.[10] "ಸಮಾನತೆಯನ್ನು ಮಾನವತೆಗೆ ತೋರಿಸಿಕೊಟ್ಟ ಮತ್ತು ಜೀವನದ ಉದ್ದಕ್ಕೂ ಸಮನ್ವ

10. Kopf David : *The Brahma Samaj and the Shaping of the Modern Indian Mind*, 1979, p. 61

ಯತೆಯನ್ನು ಸಾಧಿಸಲು ಹೊರಟ ರಾಯ್‌ರವರ ಸಿದ್ಧಾಂತ ದೊಡ್ಡದು" ಎಂದಿದ್ದಾರೆ ಅವರು.[11]

೪. ಡಬ್ಲ್ಯು.ಹೆಚ್. ಹನುಮಂತಪ್ಪ (೧೮೮೫–೧೯೭೭) : ಇವರು ಬೆಂಗಳೂರಿನ ಹಿರಿಯ ಬ್ರಹ್ಮಾನು ಯಾಯಿಗಳಲ್ಲಿ ಒಬ್ಬರು. ಬೆಂಗಳೂರಿನ ಗಾಂಧಿನಗರದ ಐದನೇ ಮುಖ್ಯರಸ್ತೆಯು ಅವರ ಹೆಸರಿನಲ್ಲಿ ಕರೆಯ ಲ್ಪಟ್ಟಿದೆ. ಇವರು ತಮ್ಮ ಚಿಕ್ಕವಯಸ್ಸಿನಲ್ಲಿಯೇ ಬ್ರಹ್ಮಾನಂದಸ್ವಾಮಿಗಳ ಶಿಷ್ಯರಾಗಿ ಬ್ರಹ್ಮಧರ್ಮವನ್ನು ಪ್ರಸಾರ ಮಾಡಿದರು. ಅವರು "ಬ್ರಹ್ಮ ಧರ್ಮವೆಂಬ ಪುಸ್ತಕವು ನನ್ನ ಆದರ್ಶ ದೀವಿಗೆಯಾಗಿದೆ" ಎಂದಿರು ವರು.[12] ಇವರು ಬೆಂಗಳೂರಿನ ಗಂಗಾಧರಶೆಟ್ಟಿ ರೋಡಿ ನಲ್ಲಿ ಮತ್ತು ಕಾಟನ್‌ಪೇಟೆಯಲ್ಲಿ ಇರುವ ಬ್ರಹ್ಮ ಸಮಾಜ ಗಳಿಗೆ ಅತ್ಯಂತ ಪ್ರೋತ್ಸಾಹವನ್ನು ಕೊಟ್ಟರು. ಗಾಂಧಿ ಯವರ ಪ್ರಭಾವ ಇವರ ಮೇಲಾಯಿತು. ಹಲವಾರು ವಿದ್ಯಾಸಂಸ್ಥೆಗಳನ್ನು ನಡೆಸಿಕೊಂಡು ಬಂದರು. ಇವರು ಬೆಳಸಿದ ವಿದ್ಯಾಸಂಸ್ಥೆಗಳೆಂದರೆ ಅಪ್ಪಾವುಪಿಳ್ಳೆ ಹೆಣ್ಣು ಮಕ್ಕಳ ಶಾಲೆ, ಗಾಂಧಿನಗರ ಹೈಸ್ಕೂಲು ಮತ್ತು ವಯ ಸ್ಕರ ವಿದ್ಯಾಸಂಘ. ಇವೆಲ್ಲವೂ ಇವರ ಮುಂದಾಳತ್ವದಲ್ಲಿ ನಡೆದುವು. ಇವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರೂ ರಾಜಕೀಯ ಮಂದಾಳುಗಳೂ ಮೈಸೂರು ಕಾಂಗ್ರೆಸ್ ಸ್ಥಾಪಕರೂ ಸ್ವಾತಂತ್ರ್ಯಕ್ಕೆ ಹೋರಾಡಿದವರೂ ಆಗಿ ದ್ದರು. ವೀರೇಶಲಿಂಗಂ ಪಂತುಲು ಅವರು ಬ್ರಹ್ಮ ಸಮಾಜವನ್ನು ಕಾಟನ್‌ಪೇಟೆಯಲ್ಲಿ ಕಟ್ಟಿಸಿಕೊಟ್ಟ ಮೇಲೆ ಇವರು ಅದರಲ್ಲಿ ಅತ್ಯಂತ ಉತ್ಸಾಹವನ್ನು ತೋರಿದರು. ಮೂರು ದಶಕಗಳಿಗಿಂತಲೂ ಹೆಚ್ಚುಕಾಲ ಬ್ರಹ್ಮ ಸಮಾಜದ ಪಂಥವನ್ನು ಬೆಳಸಲು ಪ್ರಯತ್ನಿಸಿದರು.

ವಿದ್ಯಾಸಂಸ್ಥೆಗಳು : ಬ್ರಹ್ಮಸಮಾಜದ ಬೆಳವಣಿಗೆ ಯಾದದ್ದು ವಿದ್ಯಾಸಂಸ್ಥೆಗಳಿಂದ. ಮೈಸೂರಿನ ಮಟ್ಟಿಗೆ ಹೇಳುವುದಾದರೆ, ಬೆಂಗಳೂರಿನಲ್ಲಿ ಮೇಜರ್ ಅಪ್ಪಾವು ಪಿಳ್ಳೆ ಸ್ಥಾಪಿಸಿದ ಸ್ಕೂಲು(೧೮೭೨) ಪ್ರಮುಖವಾದುದು. ವಿದ್ಯಾಸಂಸ್ಥೆಯೇ ಇಲ್ಲದಿದ್ದ ಪ್ರದೇಶದಲ್ಲಿ ಇವರು ಸ್ಕೂಲನ್ನು ಸ್ಥಾಪಿಸಿ ಜಾತಿಭೇದವನ್ನು ಎಣಿಸದೆ ವಿದ್ಯಾ ಭ್ಯಾಸವನ್ನು ಪ್ರೋತ್ಸಾಹಿಸಿದರು. ಇದು ಬ್ರಹ್ಮಸಮಾ ಜದ ಒಂದು ಮುಖ್ಯ ವಿಸ್ತರಣವಾದರೂ ಇದರ ಮೂಲಕ ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದು ಮೆಚ್ಚಬೇಕಾದುದು. ಈ ಸ್ಕೂಲಿನಲ್ಲಿ ಬ್ರಹ್ಮತತ್ವವನ್ನು ಪ್ರೋತ್ಸಾಹಿಸುವಂತೆ ಪ್ರತಿದಿನ ಬೆಳಿಗ್ಗೆ ಬ್ರಹ್ಮತತ್ವದ ಧ್ಯಾನ ಮತ್ತು "ಓಂ ನಮತೆ ಜಗತತರನೇಯ" ಎಂಬ ಉಪನಿಷತ್ತಿನ ವಾಕ್ಯ ಹಾಗೂ ಠಾಕೂರರವರ ಗೀತಾಂಜಲಿ ಗಳನ್ನು ಪಠಿಸಲಾಗುತ್ತಿತ್ತು. ಈ ವಿದ್ಯಾಸಂಸ್ಥೆಗೆ ನೆರ ವಾದವರು ಬಹ್ಮಾನುಯಾಯಿಗಳು. ಈ ಸ್ಕೂಲು ಆಂಗ್ಲ ವಿದ್ಯಾಭ್ಯಾಸವನ್ನು ಪ್ರಚಾರ ಮಾಡಿತು. ಹಡ್‌ಸನ್ ಸರ್ಕಲ್‌ನಿಂದ ರಿಚ್‌ಮಂಡ್ ಸರ್ಕಲ್‌ವರೆಗೆ 'ರಾಜಾ ರಾಮ್ ಮೋಹನ್‌ರಾಯ್ ಸರ್ಕಲ್' ಎಂದು ಹೆಸರಿಸ ಲಾಗಿದೆ. ಇತ್ತೀಚೆಗೆ ರಾಜಾರಾಮ್ ಮೋಹನ್‌ರಾಯ ರವರ ಅಂಚೆಚೀಟಿಯನ್ನು ಸರ್ಕಾರವು ಮುದ್ರಿಸಿ ಹೊರ ತರುವುದಕ್ಕೆ ಕಾರಣರಾದವರು ಡಬ್ಲ್ಯೂ. ಹೆಚ್. ಹನು ಮಂತಪ್ಪ.[13] ಅನೇಕ ಪ್ರಮುಖ ವ್ಯಕ್ತಿಗಳಲ್ಲಿ ಡಾ॥ ಎನ್. ಗುರುದಾಸ್, ವೈ. ಮುನಿಸಾಮಪ್ಪ, ಬಿ. ಪಿ. ಚಂದ್ರಶೇಖರ್, ಪೊನ್ನಗೋಪಾಲಸ್ವಾಮಿ, ಬಿ. ಸಿ. ಪ್ರಭಾಕರ್, ಕೆ. ನಾರಾಯಣರಾವ್ ಮೊದಲಾದವರು ಬ್ರಹ್ಮಾನುಯಾಯಿಗಳಾಗಿದ್ದರು.

ಬ್ರಹ್ಮಸಮಾಜವು ಬೆಂಗಳೂರಿನಲ್ಲಿ ಜಾಗ್ರತವಾ ದದ್ದು ೧೯ನೇ ಶತಮಾನದಲ್ಲಿ. ಆದರೆ ಸಾಮಾನ್ಯ ಮನುಷ್ಯನಿಗೆ ಮನಮುಟ್ಟುವ ರೀತಿಯಲ್ಲಿ ಹೆಚ್ಚಿನ ಪರಿಣಾಮವನ್ನು ಬೀರುವ ಯಾವ ಪ್ರಕಟಿತ ಗ್ರಂಥ ರೂಪಕವನ್ನೂ ನಾವು ಕಾಣುವುದಿಲ್ಲ. ೧೯೦೯ರಲ್ಲಿ ಪ್ರಕಟವಾದ ಬಾರ್ನೆಟ್ ಸೂಚಿಯನ್ನು ತಿರುವಿದಾಗ, ಬ್ರಹ್ಮಸಮಾಜದ ಬಗ್ಗೆ ಕೇವಲ ಎರಡು ಪುಸ್ತಕಗಳು ಕಂಡುಬರುತ್ತವೆ. ಅವುಗಳೆಂದರೆ, ಬೆಂಗಳೂರು ಬ್ರಹ್ಮ

11. *Rajamantra Praveena Dr. Brajendranath Seal ; Address at the Ram Mohan Roy Anniversary at Bangalore, 27th September 1924*
12. ಬೆಂಗಳೂರು ಬ್ರಹ್ಮಸಮಾಜದ ಅಧ್ಯಕ್ಷ ಶ್ರೀ ಡಬ್ಲ್ಯೂ. ಹೆಚ್. ಹನುಮಂತಪ್ಪನವರ ಭಾಷಣ, ೧೮-೪-೬೫
13. *Arya Vidya Shlala Parents Association ; Sri W. H. Hanumanthappa grand old Brahmo of Bangalore, an account of his Services to the people and the Samaj,* p. 1

ಸಮಾಜದವರು ಹೊರತಂದ 'ಭಕ್ತಿಸುಧಾರಸ' (೧೮೭೦) ಮತ್ತು ಬೆಂಗಳೂರು ಉಪಾಸನ ಸಮಾಜದವರು ಪ್ರಕಟಿಸಿದ 'ಬ್ರಹ್ಮಧರ್ಮಸಾರ' (೧೮೯೫). ಆದರೆ ತೆಲುಗಿನಲ್ಲಿ ೧೮೭೭ರಲ್ಲಿ 'ಸ್ತ್ರೀ ವಿದ್ಯಾಭ್ಯಾಸ' ಎಂಬ ಪುಸ್ತಕವನ್ನು ಪ್ರಕಟಿಸಲಾಯಿತು, ೧೮೭೮ರಲ್ಲಿ ಐಯಾಸ್ವಾಮಿ ಎಂಬುವರು ತಮಿಳಿನಲ್ಲಿ ಒಂದು ಪತ್ರಿಕೆಯನ್ನು ಹೊರಡಿಸಿದರು. ಮದ್ರಾಸಿನಲ್ಲಿ ಕ್ಷಾಮ ಒದಗಿದಾಗ ನೆರವನ್ನೂ ನೀಡಿದರು.

ಬಂಗಾಳದ ಕವಿಗಳ ಪ್ರಭಾವ ಕನ್ನಡದ ಮೇಲಿತ್ತಾದರೂ ಸಾಮಾಜಿಕ ಸುಧಾರಣೆಗಳ ಬಗ್ಗೆ ಹೆಚ್ಚಿನ ಬರವಣಿಗೆ ಹುಟ್ಟಿದುದು ಕಾಣಬರುವುದಿಲ್ಲ. ಆದರೆ 'ಇಂದಿರೆ' ಎಂಬ ಕಾದಂಬರಿಯಲ್ಲಿ (೧೯೨೪) ವಿಧವಾವಿವಾಹ ಕುರಿತು ವಿಮರ್ಶೆಯನ್ನೂ ಮಾಡಲಾಗಿದೆ. ಇಂದಿರೆ ಚಿಕ್ಕವಯಸಿನಲ್ಲಿಯೇ ವಿಧವೆಯಾದರೂ ಸುಂದರೇಶನನ್ನು ಬ್ರಹ್ಮಸಮಾಜದ ರೀತಿಯಲ್ಲಿ ಮದುವೆಯಾದಳು[14] ಎಂಬ ಉಲ್ಲೇಖನವನ್ನು ಕಾಣುತ್ತೇವೆ. ಇದು ಕಾದಂಬರಿಕಾರ್ತಿ ಆರ್. ಕಲ್ಯಾಣಮ್ಮನವರ ಸುಧಾರಣ ಮನೋಭಾವವನ್ನೂ ಬ್ರಹ್ಮಸಮಾಜದ ನಿಲುವನ್ನೂ ಪ್ರತಿಪಾದಿಸುತ್ತದೆ. ಆರ್. ರಘುನಾಥರಾಯರ 'ವಿವಾಹವಿಧಿಗಳನ್ನು ಬೋಧಿಸುವ ಆರ್ಯಧರ್ಮಶಾಸ್ತ್ರವು'(೧೮೯೨) ಎಂಬ ಗ್ರಂಥವು ವಿಧವಾವಿವಾಹವನ್ನು ಯಾವ ಸಂದರ್ಭದಲ್ಲಿ ಮಾಡಬಹುದು ಎಂಬುದರ ಬಗ್ಗೆ ನಿರ್ದೇಶಿಸುತ್ತದೆ.

ಶಾಸ್ತ್ರಸಮ್ಮತವಾಗಿ ವಿಧವಾವಿವಾಹ ಮಾಡಬಹುದಾದರೂ ಸಮಾಜದ ಮನ್ನಣೆ ಹೆಚ್ಚು ದೊರಕದೆ ಇದ್ದುದರಿಂದ ವಿಧವಾವಿವಾಹ ಹಲವೆಡೆ ಮುರಿದದ್ದೂ ಉಂಟು. ೧೯೦೩ರಲ್ಲಿ ಆರಂಭವಾದ 'ದೇಶಾಭ್ಯುದಯ ಸಂಘ'ವು ಸಮಾಜ ಸುಧಾರಣೆಯನ್ನು ಎತ್ತಿ ಹಿಡಿಯಿತು. ವೆಂಕಟ ವರದೈಂಗಾರರು ವಿಧವಾವಿವಾಹವಾಗಿದ್ದಲ್ಲದೆ, ದೇಶಾಭ್ಯುದಯ ಸಂಘದ ಮೂಲಕ ಕೈಬರಹದಲ್ಲಿ ಸಮಾಜದ ಕೈಪಿಡಿಯನ್ನೂ 'ಹಿತವಾದಿ' ಎಂಬ ಪತ್ರಿಕೆಯನ್ನೂ ಹೊರಡಿಸಿದ್ದರು. ಇದರಿಂದ ಜಾಗ್ರತಿ ಉಂಟಾದರೂ ಇದೆಲ್ಲಾ 'ಕುಲೀನ'ರಲ್ಲಿ ನಡೆದ ಅಲ್ಪ ಸ್ವಲ್ಪ ಪ್ರಯತ್ನಗಳು ಮಾತ್ರ. ಬ್ರಹ್ಮಸಮಾಜವು ಸಾಹಿತ್ಯದ ಮೂಲಕ ತನ್ನ ನಿಲುವನ್ನು ಎತ್ತಿ ಹಿಡಿದ ಮತ್ತು ತೋರಿಸಿದ ಪ್ರಸಂಗಗಳು ಅತ್ಯಂತ ಕಡಿಮೆ.

ಬ್ರಹ್ಮಸಮಾಜಕ್ಕೆ ಸೇರಿದ ಕುಲೀನರೆಂದರೆ ಸಾಮಾನ್ಯವಾಗಿ ವಕೀಲರು, ಉಪಾಧ್ಯಾಯರು ಮತ್ತಿತರರು. ಹಲವು ಧುರೀಣರು ಸಂಘವನ್ನು ವ್ಯವಸ್ಥಿತಗೊಳಿಸಲು ಪ್ರಯತ್ನಿಸಿದರಲ್ಲದೆ, ತಮ್ಮದೇ ಆದ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅವರುಗಳು ಗತಿಸಿದ ನಂತರ ನಿಸ್ವಾರ್ಥ ಮನೋಧರ್ಮದ ತಂಡವು ರಚಿತವಾಗಲಿಲ್ಲ. ಇದಕ್ಕೆ ಕಾರಣವೆಂದರೆ, ಬ್ರಹ್ಮಸಮಾಜದ ಅನುಯಾಯಿಗಳೆನಿಸಿದರು ಬಹಳ ಕಡಿಮೆ ಸಂಖ್ಯೆಯಲ್ಲಿದ್ದರು. ಬ್ರಹ್ಮತತ್ವದ ಅರಿವು ಕಠಿಣವಾದುದಲ್ಲದೆ, ಅದರ ಅನುಷ್ಠಾನವೂ ಕಷ್ಟಕರವಾದುದು; ಅದು ಕೇವಲ ಬುದ್ಧಿಗೆ ನಿಲುಕುವಂತಹದು. ಹೀಗಾಗಿ ಜನಸಾಮಾನ್ಯರಿಗೆ ಇದರ ನಿಲುವಿಗೆ ಒಗ್ಗುವುದು ಕಷ್ಟಮಯವಾಗಿತ್ತು. ಮತ್ತೊಂದು ಪ್ರಬಲವಾದ ಅಂಶವೆಂದರೆ, ಸ್ವಾತಂತ್ರ್ಯ ಆಂದೋಲನ ಮತ್ತು ವಿವೇಕಾನಂದರ ವಾಣಿ. ವಿವೇಕಾನಂದರ ಹಿಂದೂಧರ್ಮದ ಪ್ರಚಾರ ಹೆಚ್ಚು ಪರಿಣಾಮಕಾರಿಯಾಯಿತು. ಅನಿಬೆಸೆಂಟ್‌ರವರ ಭಾಷಣಗಳು ಹೆಚ್ಚು ಆಕರ್ಷಿತವಾಗಿದ್ದವು. ೧೯೨೦ರ ಹೊತ್ತಿಗೆ ಮಹಾತ್ಮಾಗಾಂಧಿಯವರು ಆರಂಭಿಸಿದ ಸ್ವಾತಂತ್ರ್ಯ ಚಳವಳಿಯು ಸಾಮಾನ್ಯ ಜನರಲ್ಲಿ ಹೆಚ್ಚು ಪ್ರಜ್ಞೆಯನ್ನು ಮೂಡಿಸಿತಲ್ಲದೆ, 'ಸಾಮಾಜಿಕ ಸುಧಾರಣ ಪ್ರಜ್ಞೆ' ಹಿಂದುಳಿಯುವಂತೆ ಮಾಡಿತು.

ಪ್ರಮುಖರ ಮತ್ತು ಬ್ರಹ್ಮಪಂಥಕ್ಕೆ ಸೇರಿದ ಹಲವರ ಚರಿತ್ರೆಯನ್ನು ಗಮನಿಸಿದಾಗ ಕೇಶಬ್‌ಸೇನ್‌ರವರ ತೊಳಲಾಟವನ್ನು ಈ ಮುಂದಿನಂತೆ ಕಾಣುತ್ತೇವೆ : "The paradox vacillation and the self contradiction that invariably followed from the confrontation of two opposing

14. ಆರ್. ಕಲ್ಯಾಣಮ್ಮ : ಇಂದಿರೆ ಅಥವಾ ನಿರ್ಭಾಗ್ಯವಂತೆ, ೧೯೨೪, ಪು. ೧೦೨

culture and civilization could be aptly illustrated from the life of Keshubchander Sen."[15]

ಆಂಗ್ಲ ಪ್ರಭಾವದಿಂದ ಪಾರುಗೊಳಿಸಿ ಹಿಂದೂ ಧರ್ಮದ ಪುನರ್‌ರಚನೆಯನ್ನು ಮಾಡಹೊರಟ ಬ್ರಹ್ಮ ಸಮಾಜವು, ಮೈಸೂರಿನಲ್ಲಿ ಸಾಮಾಜಿಕ ಸುಧಾರಣ ಜಾಗ್ರತಿಯನ್ನು ಉಂಟು ಮಾಡಿದ್ದು ನಿಜವಾದರೂ ಆ ಬಗೆಯ ಸಾಮಾಜಿಕ ಸುಧಾರಣೆಯ ಸಂಗ್ರಾಮ ಇನ್ನೂ ನಡೆಯುತ್ತಲೇ ಇದೆ.

15. Arabinda, Poddar : *Renaissance in Bengal, a Search for Identity*, 1975, p. 41

ವೇಮುಗಲ್ ಸೋಮಶೇಖರ್

# ಬೆಂಗಳೂರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಚರ್ಮಪ್ರಸಾದನ ಕಲೆ

ಚರ್ಮಪ್ರಸಾದನ ಕಲೆಗೆ ಆಂಗ್ಲಭಾಷೆಯಲ್ಲಿ 'ಟಾಕ್ಸಿ ಡರ್ಮಿ' (Taxi Dermy) ಎಂದು ಹೆಸರು. ಚರ್ಮ ಪ್ರಸಾದನ ಕಲೆ ಎಂದರೆ ನಿರ್ಜೀವ ಪ್ರಾಣಿ ಅಥವಾ ಪಕ್ಷಿ ಗಳಿಗೆ ಜೀವಕಳೆಯನ್ನು ಅಳವಡಿಸುವುದು. ಈ ಕಲೆ ಯನ್ನು ಅರಿತವನಿಗೆ 'ಚರ್ಮಪ್ರಸಾದಕ' (Taxi-dermist) ಎಂದು ಹೆಸರು. ಮರಣಹೊಂದಿದ ಪ್ರಾಣಿ ಗಳನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬ ಹಂಬಲದ ಹಿನ್ನೆಲೆಯಲ್ಲಿ ಹುಟ್ಟಿದು ಈ ಕಲೆ. ಇದನ್ನು ಒಂದು ರೀತಿಯ ವೈಜ್ಞಾನಿಕ ಅದ್ಭುತ ಕಲೆ ಎಂದು ಹೇಳಬಹುದು.

ಒಂದು ಪ್ರಾಣಿಯು ಮರಣಹೊಂದಿದ ಇಪ್ಪತ್ನಾಲ್ಕು ಗಂಟೆಗಳ ಒಳಗೆ ಅದರ ದೇಹದಲ್ಲಿ ಇರುವುದೆಲ್ಲ ವನ್ನೂ ತೆಗೆದುಹಾಕಿ ಚರ್ಮಕ್ಕೆ ಸ್ಪಟಿಕ ಮತ್ತು ಉಪ್ಪನ್ನು ಸವರಿ ಬಿಸಿಲಿನಲ್ಲಿ ಒಣಗಿಸುವುದು ; ಅನಂತರ ಪ್ರಾಣಿಯ ಆಕಾರವನ್ನೇ ಹೊಂದುವ ಮಾದರಿಯನ್ನು ಮಣ್ಣಿನಲ್ಲಿ ಸೃಷ್ಟಿಸಿ ಪ್ರಾಣಿಯ ಚರ್ಮವನ್ನು ಅದಕ್ಕೆ ಹೊಂದಿಸಿ ಹೊಲಿಯುವುದು ; ಈ ಮರುಸೃಷ್ಟಿಯಲ್ಲಿ ಪ್ರಾಣಿಯ ತಲೆಬುರುಡೆ, ಕೊಂಬು ಮತ್ತು ಚರ್ಮಗಳು ಮಾತ್ರ ನೈಜವಾಗಿದ್ದು, ಮಿಕ್ಕದ್ದೆಲ್ಲಾ ಕೃತಕವಾದುದು ; ಮೂಲ ಕಣ್ಣಿನ ಬದಲು ಅದರ ಗುಳಿಯ ಗಾತ್ರಕ್ಕೆ ತಕ್ಕಂತೆ ಗಾಜಿನ ಗೋಲಿಗಳನ್ನು ಅಳವಡಿಸುವುದು ; ಇಷ್ಟಲ್ಲದೆ ಇನ್ನೂ ಹಲವು ವಿಧದಲ್ಲಿ ಸೂಕ್ಷ್ಮ ಕಲೆಗಾರಿಕೆಯನ್ನು ತೋರಿ ಆಕೃತಿಯನ್ನು ಪೂರೈಸುವುದು– ಇಷ್ಟು ಚರ್ಮ ಪ್ರಸಾದಕನು ನಿರ್ವಹಿಸಬೇಕಾದ ಕೆಲಸ.

ಹತ್ತೊಂಬತ್ತನೇ ಶತಮಾನದಲ್ಲಿ ಈ ಕಲೆಯು ಬಹಳ ಪ್ರಸಿದ್ಧಿಯಾಗಿದ್ದು, ಬಹಳಷ್ಟು ಜನರ ವೃತ್ತಿಯೂ ಆಗಿತ್ತು. ಇಂತಹ ಕಲೆಯು ಈ ಶತಮಾನ ದಲ್ಲಿ ಕಡಿಮೆಯಾಗುತ್ತಾ ಬಂತು.

ಆನೆ ಮುಂತಾದ ದೊಡ್ಡ ಪ್ರಾಣಿಗಳು ಮರಣ ಹೊಂದಿದರೆ ಇಡಿಯಾಗಿ ಚರ್ಮಪ್ರಸಾದನವನ್ನು ಮಾಡಲು ಬಹಳ ಕಷ್ಟವಾಗುತ್ತಿತ್ತು. ಆದಕಾರಣ ಆನೆಯ ರುಂಡವನ್ನು ಮಾತ್ರ ಪ್ರಸಾದನ ಮಾಡು ತ್ತಿದ್ದರು. ಇತರ ಭಾಗಗಳನ್ನು ಹಲವಾರು ರೀತಿ ಯಲ್ಲಿ, ಅಂದರೆ ಕಾಲುಗಳನ್ನು ಸ್ಟೂಲುಗಳನ್ನಾಗಿಯೂ ಹುಲಿಯ ಕಾಲುಗಳನ್ನು ಟೀಪಾಯಿಯ ಕಾಲುಗಳ ನ್ನಾಗಿಯೂ ಬಾಲವನ್ನು ಟೇಬಲ್ ಲ್ಯಾಂಪನ್ನಾಗಿಯೂ ಉಪಯೋಗಿಸಿಕೊಳ್ಳುತ್ತಿದ್ದರು.

ಬೆಂಗಳೂರು ವಸ್ತುಸಂಗ್ರಹಾಲಯವನ್ನು ಆರಂಭ ದಲ್ಲಿ 'ತಮಾಷೆ ಬಂಗಲೆ' ಎಂದು ಕರೆಯುತ್ತಿದ್ದರು. ಈ ವಸ್ತುಸಂಗ್ರಹಾಲಯವು ೧೮೬೫ರಲ್ಲಿ ಪ್ರಾರಂಭ ವಾದಾಗ ಮಾಹೆಯಾನ ವೇತನ ಹತ್ತುರೂಪಾಯಿ ಗಳೊಂದಿಗೆ ಒಬ್ಬ ಟಾಕ್ಸಿಡರ್ಮಿಸ್ಟನನ್ನು ನೇಮಿಸಿಕೊಳ್ಳ ಲಾಯಿತು. ಇದಕ್ಕೂ ಮುಂಚೆ ಪ್ರಾರಂಭವಾದ ಕಲ್ಕತ್ತ, ಬೊಂಬಾಯಿ, ಮದರಾಸ್ ಮತ್ತು ಇತರೆ ವಸ್ತುಸಂಗ್ರಹಾಲಯಗಳಲ್ಲಿಯೂ ಈ ಕಲೆಯು ಬಹಳ ಪ್ರಸಿದ್ಧಿ ಹೊಂದಿದ್ದಿತು. ಈ ಹಿನ್ನೆಲೆಯಲ್ಲಿ ಬೆಂಗ ಳೂರಿನ ವಸ್ತುಸಂಗ್ರಹಾಲಯದಲ್ಲೂ ಈ ಕಲೆಗೆ ಸರ್ಕಾರ ಪ್ರೋತ್ಸಾಹ ಕೊಟ್ಟಿತು. ಮುಖ್ಯವಾದ ಅಂಶವೆಂದರೆ, ಮದರಾಸಿನಲ್ಲಿಯ ವಸ್ತುಸಂಗ್ರಹಾಲಯವನ್ನು ಸ್ಥಾಪಿಸಿದ

ಮಹಾಶಯನೇ ಬೆಂಗಳೂರಿನ ವಸ್ತುಸಂಗ್ರಹಾಲಯವನ್ನೂ ಸ್ಥಾಪಿಸಿದನು. ಇದನ್ನು ಸ್ಥಾಪಿಸಿದ ಮುನ್ನವೇ ಅಂದರೆ ೧೮೬೩ರಲ್ಲೇ ಮೈಸೂರಿನ ಎಲ್ಲ ಡಿಸ್ಟ್ರಿಕ್ಟ್ ಆಫೀಸರ್ಸ್‌ಗೆ ವಸ್ತುಸಂಗ್ರಹಾಲಯಕ್ಕೆ ಸಂಬಂಧಪಟ್ಟಂತಹ ವಸ್ತುಗಳನ್ನು ಶೇಖರಿಸಿ ಕಳುಹಿಸಿಕೊಡಬೇಕೆಂದು ಕೇಳಿಕೊಳ್ಳಲಾಗಿದ್ದಿತು. ಆಗ ಸಂಗ್ರಹಗೊಂಡ ವಸ್ತುಗಳಲ್ಲಿ ಹಲವು ಮೆತ್ತೆ ತುಂಬಿದ ಪ್ರಾಣಿಗಳೂ ಸೇರಿದ್ದವು. ಈ ಕಾರಣದಿಂದ ಸಂಗ್ರಹಾಲಯದ ಪ್ರಾರಂಭದಲ್ಲೇ ಚರ್ಮಪ್ರಸಾದಕನೊಬ್ಬನನ್ನು ನೇಮಿಸಿಕೊಳ್ಳುವ ಅಗತ್ಯ ತೋರಿಬಂದಿತು.

ಸಂಗ್ರಹಾಲಯದ ಸೂಪರಿಂಟೆಂಡೆಂಟ್ ಮತ್ತು ಕ್ಯುರೇಟರ್ ಹೊರಸಂಚಾರದಲ್ಲಿದ್ದಾಗ ಅವರ ಜೊತೆಯಲ್ಲಿ ಚರ್ಮಪ್ರಸಾದಕನೂ ಹೋಗುತ್ತಿದ್ದನು. ಆಗ ಬೇಟೆಯಾಡಿದ ಪ್ರಾಣಿಗಳ ಚರ್ಮಪ್ರಸಾದನ ಮಾಡುತ್ತಿದ್ದನು. ಬೇರೆ ಬೇರೆ ಊರುಗಳಲ್ಲಿ ಇದೇ ವೃತ್ತಿಯನ್ನು ಅವಲಂಬಿಸಿದ್ದವರೂ ಇರುತ್ತಿದ್ದರು. ಅವರು ಶೇಖರಿಸಿದ ಪ್ರಾಣಿ ಮತ್ತು ಪಕ್ಷಿಗಳನ್ನು ಸಂಗ್ರಹಾಲಯದ ಪ್ರಸಾದಕನು ಹೋಗಿ ತೆಗೆದುಕೊಂಡು ಬರುತ್ತಿದ್ದನು.

೧೮೬೭ರಲ್ಲಿ ಕೊಡಗಿಗೆ ಹೋಗಿ ಶೇಖರಿಸಿದ ಕೆಲವು ಪ್ರಾಣಿಗಳು ಮತ್ತು ಪಕ್ಷಿಗಳ ದಾಖಲೆಯೂ ದೊರೆಯುತ್ತದೆ. ಇದೇ ರೀತಿ ಪ್ರತಿವರ್ಷವೂ ಪ್ರಾಣಿಗಳನ್ನು ಶೇಖರಿಸುತ್ತಿದ್ದುದುಂಟು. ಮೈಸೂರು ಪ್ರಾಂತ್ಯದ ಯಾವುದೇ ಮೂಲೆಯಲ್ಲಿ ಜನಿಸಿದ, ಆಶ್ಚರ್ಯವಾಗಿ ತೋರುವ ವಿಚಿತ್ರ ಹುಟ್ಟಿನ ಪ್ರಾಣಿಗಳನ್ನೂ ಸಂಗ್ರಹಿಸಿ ಇಲ್ಲಿಗೆ ತರಲಾಗುತ್ತಿತ್ತು.

೧೮೮೦ರ ನಂತರ ಸಂಗ್ರಹಾಲಯವು ಈಗಿರುವ ಕಟ್ಟಡಕ್ಕೆ ಬಂದನಂತರ ಈ ವಿಭಾಗವನ್ನು ಬೇರ್ಪಡಿಸಿ, ಸಂಗ್ರಹಾಲಯದ ಮಹಡಿಯ ಮೇಲೆ ಪ್ರಾಣಿಶಾಸ್ತ್ರ ವಿಭಾಗವನ್ನು ವೈಜ್ಞಾನಿಕ ರೀತಿಯಲ್ಲಿ ಪ್ರಾರಂಭಿಸಿ ಅಭಿವೃದ್ಧಿಗೊಳಿಸಲಾಯಿತು.

ಚರ್ಮಪ್ರಸಾದಕನ ಮಾಹೆಯಾನ ವೇತನವು ೧೮೯೦ರಲ್ಲಿ ೧೨ ರೂಪಾಯಿ, ೧೮೯೨ರಲ್ಲಿ ೧೫ ರೂಪಾಯಿ, ೧೮೯೮ರಲ್ಲಿ ೨೦ ರೂಪಾಯಿ ಮತ್ತು ೧೯೦೮–೦೯ರಲ್ಲಿ ೨೨ ರೂಪಾಯಿ ಹೀಗೆ ಕ್ರಮವಾಗಿ ಹೆಚ್ಚಿಸುತ್ತಾ ಬಂದಿರುವುದು ವ್ಯಕ್ತಪಡುತ್ತದೆ.

ಬೆಂಗಳೂರು ಲಾಲ್‌ಬಾಗಿನ ಪ್ರಾಣಿ ಸಂಗ್ರಹಾಲಯದಲ್ಲಿಯ ಪ್ರಾಣಿಗಳು ಮರಣ ಹೊಂದಿದ ನಂತರ ಕೂಡಲೇ ಅವುಗಳನ್ನು ಪ್ರಾಚ್ಯವಸ್ತುಸಂಗ್ರಹಾಲಯಕ್ಕೆ ಕಳುಹಿಸಿಕೊಡಲಾಗುತ್ತಿತ್ತು. ಇದೇ ರೀತಿ ಮೈಸೂರು ಪ್ರಾಣಿ ಸಂಗ್ರಹಾಲಯದಿಂದಲೂ ಮೃತಪ್ರಾಣಿಗಳನ್ನು ಇಲ್ಲಿಗೆ ತರಲಾಗಿತ್ತು. ೧೮೮೭–೮೮ರಲ್ಲಿ ಮೈಸೂರು ಅರಮನೆಯಿಂದಲೂ ಮೃತವಾದ ಒಂದು ನವಿಲು ಹಾಗೂ ಒಂದು ಕುರಿಮರಿಗಳನ್ನು ಇಲ್ಲಿಗೆ ಸಾಗಿಸಲಾಯಿತು. ಬೆಂಗಳೂರು ಅರಮನೆಯಿಂದಲೂ ಕೆಲವು ಪಕ್ಷಿಗಳು ಬಂದ ಬಗೆಗೆ ದಾಖಲೆಯಿದೆ. ಅರಮನೆಗಳಲ್ಲಿ ಕೆಲವು ಮುದ್ದುಪ್ರಾಣಿಗಳನ್ನು ಸಾಕಿರುತ್ತಿದ್ದರೆಂಬ ಅಂಶವು ಇದರಿಂದ ವ್ಯಕ್ತಪಡುತ್ತದೆ.

೧೮೮೯–೯೦ರಲ್ಲಿ ಮೈಸೂರಿನ ರೆಸಿಡೆಂಟ್ ಆಗಿದ್ದ ಕರ್ನಲ್ ಸರ್ ಆಲಿವರ್ ಸೇಂಟ್‌ಜಾನ್ ಅವರು ಆಗಾಗ್ಗೆ ಬೇಟೆಯಾಡುವುದಕ್ಕೆ ಹೋಗುತ್ತಿದ್ದು, ತಮ್ಮ ಜೊತೆಯಲ್ಲಿ ಸಂಗ್ರಹಾಲಯದ ಚರ್ಮಪ್ರಸಾದಕನನ್ನೂ ಕರೆದೊಯ್ಯುತ್ತಿದ್ದರು. ಈ ರೀತಿ ಜಾನ್ ಅವರು ೧೮೯೦–೯೧ರಲ್ಲಿ ಕೆಲವು ಪ್ರಾಣಿ ಮತ್ತು ಪಕ್ಷಿಗಳನ್ನು ಸಂಗ್ರಹಾಲಯಕ್ಕೋಸ್ಕರ ಶೇಖರಿಸಿದರು. ಸಂಗ್ರಹಾಲಯದ ಪ್ರಾಣಿಶಾಸ್ತ್ರ ವಿಭಾಗವನ್ನು ವೈಜ್ಞಾನಿಕ ರೀತಿಯಲ್ಲಿ ಅಭಿವೃದ್ಧಿಪಡಿಸಲು ಕಲ್ಕತ್ತದಲ್ಲಿರುವ ಪ್ರಸಿದ್ಧ ಇಂಡಿಯನ್ ಮ್ಯೂಸಿಯಂನಲ್ಲಿಯ ನುರಿತ ಚರ್ಮಪ್ರಸಾದಕರನ್ನು ಕರೆಯಿಸಿ ಮೂರುತಿಂಗಳ ಕಾಲ ಅವರಿಂದ ಇಲ್ಲಿಯ ಪ್ರಸಾದಕರಿಗೆ ತರಬೇತು ಕೊಡಿಸಲಾಯಿತು. ಪ್ರಸಾದನಗೊಂಡ ಇಲ್ಲಿಯ ಕೆಲವು ಪ್ರಾಣಿ ಮತ್ತು ಪಕ್ಷಿಗಳನ್ನು ಕಲ್ಕತ್ತಾದ ಇಂಡಿಯನ್ ಮ್ಯೂಸಿಯಂನ ನ್ಯಾಚುರಲ್ ಹಿಸ್ಟ್ರಿ ಸೆಕ್ಷನ್‌ಗೆ ತೆಗೆದುಕೊಂಡು ಹೋಗಲಾಯಿತು. ಆಲಿವರ್ ಸೇಂಟ್‌ಜಾನ್ ಅವರ ಪರಿಶ್ರಮದಿಂದಾಗಿ ಈ ವಿಭಾಗವು ಸಾಕಷ್ಟು ಅಭಿವೃದ್ಧಿ ಹೊಂದಿತು.

೧೮೯೧–೯೨ರಲ್ಲಿ ಬೆಂಗಳೂರು ಮತ್ತು ಮೈಸೂರಿನಲ್ಲಿಯೂ ವಿಕ್ಟೋರಿಯಾ ನಾಚ್ಯುರಲ್ ಹಿಸ್ಟ್ರಿ ಇನ್‌ಸ್ಟಿ

ಟ್ರ್ಯೂಟ್‌ಗಳು ಪ್ರಾರಂಭಗೊಂಡವು. ಅಲ್ಲಿ ಅನುಸರಿಸಿದ ನೂತನ ವಿಧಾನಗಳನ್ನು ಇಲ್ಲಿಯೂ ಅನುಸರಿಸಲಾಯಿತು. ಎಲ್ಲ ಪ್ರಾಣಿ-ಪಕ್ಷಿಗಳನ್ನು ವಿವರಣೆಗಳೊಂದಿಗೆ ಗಾಜಿನ ಕಪಾಟಿನಲ್ಲಿ ಸಂರಕ್ಷಿಸಿ ಇಡಲಾಯಿತು.

೧೮೯೩-೯೪ರಲ್ಲಿ ಹಾಸನದ ಡೆಪ್ಯೂಟಿ ಕಮೀಷನರ್‌ರವರು ಯಾಗಟಿ ನದಿಯಲ್ಲಿ ಸಿಕ್ಕಿದ ಒಂದು ದೊಡ್ಡ ಮೊಸಳೆಯನ್ನು ಕಳುಹಿಸಿಕೊಟ್ಟರು. ಈ ಸಮಯದಲ್ಲಿ ಮದರಾಸು ವಸ್ತುಸಂಗ್ರಹಾಲಯದಿಂದ ನುರಿತ ಚರ್ಮಪ್ರಸಾದಕನ ಸಹಾಯವನ್ನು ಪಡೆಯಲಾಗಿದ್ದಿತು.

೧೮೯೪ರಲ್ಲಿ ಬೆಂಗಳೂರಿನ ಲಾಲ್‌ಬಾಗಿನಲ್ಲಿ ಇದ್ದ ಪ್ರಾಣಿಸಂಗ್ರಹಾಲಯಕ್ಕೆ ಓರಾಂಗ್-ಓಟಾಂಗ್ ಜಾತಿಯ ಒಂದು ಜೀವಂತ ಕಾಡುಮನುಷ್ಯ (ಗೊರಿಲ್ಲಾ) ಬಂದು ಸೇರಿತು. ಅನಂತರ ಅದು ಬಹಳ ಪ್ರಸಿದ್ಧಿ ಹೊಂದಿತಲ್ಲದೆ, ಎಲ್ಲರನ್ನೂ ಆಕರ್ಷಿಸುವುದರೊಡನೆ ಪ್ರತಿಯೊಬ್ಬರ ಪ್ರೀತಿಗೂ ಪಾತ್ರವಾಯಿತು. ಈ ಕಾಡುಮನುಷ್ಯ ೧೮೯೭ನೇ ಏಪ್ರಿಲ್‌ನಲ್ಲಿ ಹಠಾತ್ ಮರಣ ಹೊಂದಿತು. ಆಗ ಲಾಲ್‌ಬಾಗಿನ ಸೂಪರಿಂಟೆಂಡೆಂಟ್ ಆಗಿದ್ದವರು ಮಿ॥ ಜಾನ್ ಕ್ಯಾಮರಾನ್. ಆಗ ಇವರ ಆಡಳಿತಕ್ಕೆ ಮ್ಯೂಸಿಯಂ ಸಹಾ ಒಳಪಟ್ಟಿದ್ದಿತು. ಇವರು ಬೆಂಗಳೂರಿನಿಂದ ಹೊರಕ್ಕೆ ಪ್ರವಾಸ ಹೋಗಿದ್ದಾಗ ಈ ಘಟನೆ ನಡೆದು, ಅವರು ಹಿಂದಿರುಗುವ ವೇಳೆಗೆ ಈ ಕಾಡುಮನುಷ್ಯನ ಚರ್ಮಪ್ರಸಾದನ ಕೆಲಸವನ್ನು ಸಂಗ್ರಹಾಲಯದ ಪ್ರಸಾದಕನು ಮಾಡಿ ಮುಗಿಸಿದ್ದನು. ಕ್ಯಾಮರಾನ್ ಅವರು ಕಾಡುಮನುಷ್ಯ ಮರಣ ಹೊಂದಿದ ಘಟನೆ ತಿಳಿದು ತುಂಬಾ ನೊಂದುಕೊಂಡರು. ಆದರೆ ಸ್ಥಳೀಯ ಪ್ರಸಾದಕನು ಈ ಕಾಡುಮನುಷ್ಯನ ದೇಹದ ಪ್ರಸಾದನ ಕೆಲಸವನ್ನು ಸ್ವಲ್ಪ ಕೆಡಿಸಿರುವುದನ್ನು ಅವರು ಗಮನಿಸಿದರು. ಆದಕಾರಣ ಕ್ಯಾಮರಾನ್ ಅವರು ಆಗ ಮೈಸೂರಿನಲ್ಲಿದ್ದ ಭಾರತಕ್ಕೆಲ್ಲಾ ಒಬ್ಬ ಉತ್ತಮ ಚರ್ಮಪ್ರಸಾದಕರೆಂದು ಪ್ರಸಿದ್ಧಿ ಹೊಂದಿದ್ದ ಜೆ. ವ್ಯಾನ್ ಇಂಜಿನ್ ಅವರನ್ನು ಬೆಂಗಳೂರಿಗೆ ಕರೆಯಿಸಿಕೊಂಡರು. ಸ್ಥಳೀಯ ಪ್ರಸಾದಕನ ಕೆಲಸವನ್ನು ನೋಡಿದ ವ್ಯಾನ್ ಇಂಜಿನ್ ಅವರು "ಸ್ಥಳೀಯ ಪ್ರಸಾದಕನು ಸ್ವಲ್ಪ ಕೆಡಿಸಿಬಿಟ್ಟಿದ್ದಾನೆ, ಈಗ ಏನೂ ಮಾಡುವುದಕ್ಕೆ ಆಗುವುದಿಲ್ಲ" ಎಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು.

೧೮೯೭-೯೮ರಲ್ಲಿ ತುಮಕೂರಿನ ಎಮ್. ನಾರಾಯಣರಾವ್ ಎಂಬುವರು ಆಶ್ಚರ್ಯಕರವಾಗಿ ಹುಟ್ಟಿದ ಒಂದು ಎಮ್ಮೆಯ ಕರುವನ್ನು ಈ ಸಂಗ್ರಹಾಲಯಕ್ಕೆ ಕಳುಹಿಸಿಕೊಟ್ಟರು. ಹಾಗೆಯೇ, ೧೮೯೮-೯೯ರಲ್ಲಿ ಕಬಿನಿ ನದಿಯಲ್ಲಿ ಮಹಾಶೀರ್ ಎಂಬ ಅಪರೂಪದ ಪ್ರಾಣಿಯನ್ನು ಹಿಡಿದು ಸಂಗ್ರಹಾಲಯಕ್ಕೆ ಒಪ್ಪಿಸಲಾಯಿತು. ಆಗ ಸ್ವತಃ ವ್ಯಾನ್ ಇಂಜಿನ್‌ರವರೇ ಬೆಂಗಳೂರಿಗೆ ಬಂದು ಇದರ ಚರ್ಮಪ್ರಸಾದನ ಕಾರ್ಯವನ್ನು ಪೂರೈಸಿಕೊಟ್ಟರು.

೧೮೯೯ರಲ್ಲಿ ಬೆಂಗಳೂರಿನಲ್ಲಿ ಪ್ಲೇಗ್ ಮಹಾರೋಗ ಹಬ್ಬಿದಾಗ ಇಲ್ಲಿಯ ಸ್ಟಫ್ ಮಾಡುವ ಕಲೆಗಾರನೊಬ್ಬ ಮರಣಹೊಂದಿದನು. ಆಗ ಮದರಾಸ್ ವಸ್ತುಸಂಗ್ರಹಾಲಯದ ಮುಖ್ಯಸ್ಥರಾದ ಇ. ಥರ್‌ಸ್ಟನ್ ಅವರ ಕೈಕೆಳಗೆ ಅನುಭವ ಪಡೆದ ಚರ್ಮಪ್ರಸಾದಕನೊಬ್ಬನನ್ನು ಇಲ್ಲಿಗೆ ಕರೆಸಿಕೊಳ್ಳಲಾಯಿತು.

೧೯೦೦ರಲ್ಲಿ ಲಾಲ್‌ಬಾಗ್ ಪ್ರಾಣಿಸಂಗ್ರಹಾಲಯದಲ್ಲಿ 'ಗೋಪಾಲ' ಎಂಬ ಹೆಸರುಳ್ಳ ಒಂದು ಹುಲಿಯು ಮರಣಹೊಂದಿತು. ಹಳ್ಳಿಯ ಜನಗಳಿಗೆ ಅದು ಬಹಳ ಆಕರ್ಷಕ ಮೃಗವಾಗಿತ್ತು. ಅದನ್ನು ಪ್ರಸಾದನ ಮಾಡಿ ಒಂದು ದೊಡ್ಡ ಗಾಜಿನ ಕಪಾಟಿನಲ್ಲಿ ಇಡಲಾಯಿತು.

೧೯೦೧-೦೨ರಲ್ಲಿ ವ್ಯಾನ್ ಇಂಜಿನ್ ಅವರನ್ನು ಸಂಗ್ರಹಾಲಯದ ಕೆಲಸಕ್ಕೆ ಕೆಲವು ದಿನಗಳ ಮಟ್ಟಿಗೆ ನೇಮಿಸಿಕೊಳ್ಳಲಾಯಿತು.

೧೯೦೫-೦೬ರಲ್ಲಿ ತುಮಕೂರಿನ ದೊರೆಸ್ವಾಮಿ ಅಯ್ಯರ್ ಎಂಬುವರು ಉದ್ದನೆಯ ಬಾಲವುಳ್ಳ 'ಪ್ಯಾರಾಕೀಟ್' ಗಿಣಿಯೊಂದನ್ನು ಪ್ರಸಾದನಕ್ಕಾಗಿ ಕೊಟ್ಟರು. ೧೯೦೭-೦೮ರಲ್ಲಿ ಕೆಸ್ತೂರಿನ ವೆಂಕಟಯ್ಯರೆಂಬುವರು ಎರಡು ಕಾಲಿನ ಹಸುಕರುವೊಂದನ್ನು ಕಾಣಿಕೆಯಾಗಿತ್ತರು. ಇದೇ ರೀತಿ ೧೯೦೮-೦೯ರಲ್ಲಿ ನಾಲ್ಕು ಕಾಲಿನ ಎರಡು ಕೋಳಿಮರಿಗಳು ಇಲ್ಲಿಗೆ ದಾಖಲಾದವು. ಹಾಗೆಯೇ, ಎರಡು ತಲೆ ಹಸುಕರು ಹಾಗೂ ಎಮ್ಮೆಕರುಗಳು ಬಂದಿರುವ ದಾಖಲೆ ಸಿಕ್ಕುತ್ತದೆ.

೧೯೧೦-೧೧ರಲ್ಲಿ ನ್ಯೂಯಾರ್ಕಿನ ಜೂಆಲಜಿಕಲ್

ಸೊಸೈಟಿ ಮ್ಯೂಸಿಯಂಗೆ ಮೈಸೂರು ಪ್ರಾಂತದ ಕೆಲವು ಕಾಡುಕೋಳಿಗಳನ್ನು ಕಳುಹಿಸಿಕೊಡಲಾಯಿತು.

೧೯೦೦ಕ್ಕೂ ಮುಂಚೆ ಮೈಸೂರಿನಲ್ಲಿದ್ದ ವ್ಯಾನ್ ಇಂಜಿನ್ ಅವರ ಚರ್ಮಪ್ರಸಾದನ ಶಾಲೆ ಜಗತ್ಪ್ರಸಿದ್ಧವಾಗಿತ್ತು. ಇಂತಹ ಶಾಲೆಯಲ್ಲಿ ವ್ಯಾನ್ ಇಂಜಿನ್ ಅವರ ಕೈಕೆಳಗೆ ಪಳಗಿದಂತಹ ಹಾಗೂ ಈಗ ತೊಂಬತ್ತಾರು ವರ್ಷ ವಯಸ್ಸುಳ್ಳ ಪ್ರಧಾನಯ್ಯ ಎಂಬ ಚರ್ಮಪ್ರಸಾದಕರು ಇಂದಿಗೂ ಈ ಕಾರ್ಯವನ್ನು ಮುಂದುವರೆಸಿರುವುದನ್ನು ಹೆಮ್ಮೆಯಿಂದ ಪ್ರಸ್ತಾಪಿಸಬೇಕು. ಪ್ರಧಾನಯ್ಯನವರು ತಮ್ಮ ಅನುಭವದ ಹಿನ್ನೆಲೆಯೊಡನೆ ಮೈಸೂರಿನಲ್ಲಿ ಸ್ವತಂತ್ರವಾಗಿ ಪ್ರಸಾದನ ಶಾಲೆಯೊಂದನ್ನು ಸ್ಥಾಪಿಸಿರುವರು. ಅದಕ್ಕೆ ಮೈಸೂರು ಸರ್ಕಾರವು ಮಾನ್ಯತೆ ಕೊಟ್ಟಿತ್ತು. ಈ ಕಲೆಯಲ್ಲಿ ಎರಡುವರ್ಷಗಳ ಡಿಪ್ಲೋಮಾವನ್ನು ಈ ಶಾಲೆಯಲ್ಲಿ ನೀಡುತ್ತಿದ್ದರು. ಕೆಲವು ವರ್ಷಗಳ ಹಿಂದೆ ಇವರು ಹೊರದೇಶಕ್ಕೂ ಚರ್ಮಪ್ರಸಾದನ ಕಲೆ ಕುರಿತು ಬೋಧಿಸಲು ಹೋಗಿ ಬಂದದ್ದುಂಟು.

೧೯೪೭ರ ನಂತರ ಪ್ರಾಣಿ–ಪಕ್ಷಿಗಳ ಶಿಕಾರಿಯನ್ನು ಸಂಪೂರ್ಣ ನಿಷೇಧಿಸಲಾಯಿತು. ಈಗ ಕಾಡುಗಳೂ ನಾಶದ ಅಂಚಿನಲ್ಲಿವೆ. ವನ್ಯಪ್ರಾಣಿಗಳ ಸಂತತಿಯೂ ಕ್ರಮೇಣ ನಾಶಗೊಳ್ಳುತ್ತಿದೆ. ಹಾಗೆಯೇ, ಈ ಕಲೆಗೂ ಈಗ ಮಹತ್ವ ಕಡಿಮೆಯಾಗತೊಡಗಿದೆ.

ಅಳಿಯುತ್ತಿರುವ ಈ ಅದ್ಭುತ ಕಲೆಯನ್ನು ಈಗ ನಾವು ವಸ್ತುಸಂಗ್ರಹಾಲಯಗಳಲ್ಲೋ ಅರಮನೆಗಳಲ್ಲೋ ದೊಡ್ಡ ಮನೆಗಳಲ್ಲೋ ಪ್ರಸಾದನ ಕಲೆಯ ಪಳೆಯುಳಿಕೆಗಳಂತೆ ನೋಡಬಹುದಾಗಿದೆ. ಇದಕ್ಕೂ ಈ ಶತಮಾನವೇ ಕೊನೆ ಎಂದು ಹೇಳಬಹುದೇನೋ ! ಮುಂದಿನ ಶತಮಾನದಲ್ಲಿ ಈ ಕಲೆಯು ಸಂಪೂರ್ಣವಾಗಿ ಮರೆಯಾಗುವುದರಲ್ಲಿ ಸಂದೇಹವೇ ಇಲ್ಲ.

ಕೃತಜ್ಞತೆ : ಬೆಂಗಳೂರು ಪ್ರಾಚ್ಯವಸ್ತು ಸಂಗ್ರಹಾಲಯದ ಬಗೆಗೆ ಅಧ್ಯಯನ ಮಾಡಲು ಶಿಫಾರಸು ಮಾಡಿದ ಕರ್ನಾಟಕ ಗ್ಯಾಸೆಟಿಯರ್‌ನ ಮುಖ್ಯಸಂಪಾದಕ ಡಾ॥ ಸೂರ್ಯನಾಥ ಕಾಮತ್ ಅವರಿಗೂ ಅಧ್ಯಯನ ಮಾಡಲು ಅನುಮತಿ ನೀಡಿದ ಕರ್ನಾಟಕ ರಾಜ್ಯ ಪತ್ರಾಗಾರದ ನಿರ್ದೇಶಕರಾದ ಡಾ॥ ಆರ್. ಮುನಿಸ್ವಾಮಿ ಅವರಿಗೂ ಹಾಗೂ ಅನೇಕ ಸಲಹೆಗಳನ್ನು ನೀಡಿದ ಬೆಂಗಳೂರು ವಸ್ತುಸಂಗ್ರಹಾಲಯದ ಕ್ಯುರೇಟರ್ ಶ್ರೀ ಹೆಚ್. ಸಿದ್ದನಗೌಡರ ಅವರಿಗೂ ನಾನು ಕೃತಜ್ಞನಾಗಿದ್ದೇನೆ.

# ಅನುಬಂಧ

ಈ ಸಮ್ಮೇಳನದ ವಿವಿಧ ಗೋಷ್ಠಿಗಳಲ್ಲಿ ಮಂಡಿಸಲ್ಪಟ್ಟಿದ್ದ ಇತರ ಪ್ರಬಂಧಗಳು :

೧. ಸಿದ್ಧರಾಮನ ವಚನಗಳು

— ಡಾ॥ ಎಂ. ಚಿದಾನಂದಮೂರ್ತಿ

೨. ಕೊಡಗುಜಿಲ್ಲೆಯ ಕೈಮಡಗಳು

— ಎಂ. ಜಿ. ನಾಗರಾಜ್

೩. ನಿಡುಗಲ್ಲು : ಅವಲೋಕನ

— ಡಿ. ಆರ್. ಬಸವರಾಜಪ್ಪ

೪. ತುಮಕೂರು ಜಿಲ್ಲೆಯಲ್ಲಿ ಗಂಗ–ರಾಷ್ಟ್ರಕೂಟರ ಕದನಗಳು

— ದೇವರಕೊಂಡಾರೆಡ್ಡಿ

೫. ಮಹಾದೇವಯ್ಯನವರ ಲೇಖನಗಳಲ್ಲಿ ಚಾರಿತ್ರಿಕ ಅಂಶಗಳು

— ಬಿ. ವೀರಭದ್ರಯ್ಯ

ಹಾಗೂ ಶ್ರೀ ಎ. ಎಸ್. ಜಾಗೀರ್‌ದಾರ್ ಮತ್ತು ಡಾ॥ ಪರ್‌ವೀನ್ ರುಕ್ಸಾನಾ ಅವರ ಪ್ರಬಂಧಗಳು.

ಈ ಕೆಳಕಂಡ ಪ್ರಬಂಧಗಳು ಸಹಾ ಗೋಷ್ಠಿಗಳಲ್ಲಿ ಮಂಡಿಸಲ್ಪಟ್ಟಿದ್ದು, ಈಗಾಗಲೇ ಬೇರೆಡೆಯಲ್ಲಿ ಪ್ರಕಟಗೊಂಡಿರುತ್ತವೆ :

೧. 'ಮದಕರಿ' : ವಿಶ್ಲೇಷಣೆ

— ಲಕ್ಷ್ಮಣ್ ತೆಲಗಾವಿ

(ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೭೩-೨, ಡಿಸೆಂಬರ್ ೧೯೮೮)

೨. ಬಳ್ಳಿಗಾವೆ : ಒಂದು ವಿದ್ಯಾಕೇಂದ್ರವಾಗಿ

— ಸಿ. ನಾಗಭೂಷಣ

(ಬಸವಪಥ, ೧೦-೧೦, ಜನವರಿ ೧೯೮೯)

೩. ಕೆಳದಿ ರಾಜ್ಯದಲ್ಲಿ ತುಮಕೂರು ಜಿಲ್ಲೆಯ ಪ್ರದೇಶಗಳು

— ಕೆಳದಿ ಗುಂಡಾಜೋಯಿಸ್

(ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೭೪-೧, ೨ ಜೂನ್-ಡಿಸೆಂಬರ್ ೧೯೮೯)

**Dr. G. S. Gai**

# Presidential Speech

For the study of Indian history of the ancient and early medievel period, we are entirely dependant upon the inscriptions as source materials. Since a majority of these inscriptions are donative in character, one has to patiently and diligently study numerous inscriptions in order to reconstruct the history of a particular region, dynasty or period. It was only after the advent of the Muslim rule authentic works on contemporary history were made available. Several areas which geographically now form parts of Maharashtra, Andhra Pradesh and Tamil Nadu were included in ancient and medieval Karnataka as proved by the discovery of the inscriptions in those areas. In this connection, attention may be drawn to a recently published book on the inscriptions of Sholapur District edited by Shrinivas Ritti and Anand Kumbhar. Out of the forty inscriptions published, thirtynine are in Kannada script and language while the only remaining epigraph is written in Nagari script and Sanskrit language. Not a single inscription, belonging to the early and medieval period, is found written in Marathi language. This would show that though Sholapur District now is part of Maharashtra State, it formed an integral part of Karnataka only during early and medieval times.

Coming to the modern history of the British period, the Revolt of the Indian soldiers against the British has been claimed by several politicians and others as the first war of Independance. But, it is a misnomer to call this event as a war of Independance. This revolt or mutiny by the Indian soldiers is due to the fact that the dedicated service and seniority of these soldiers were overlooked by the British authorities by appointing only the British military officers to the higher and responsible positions. This caused simmering discontent amongst the rank and file of Indian soldiers and resulted in the revolt or mutiny of the Indian army against the British but it was soon quenched by the powerful British army. This revolt was confined mostly to the northern part of India and did not extend to south India. Similarly the fight of Rani Laxmibai of Jhansi and of Rani Channamma of Kittur against the British was undertaken with different motives and objectives and not with a view to liberating the country from the

British rule. It must, however, be stated that these revolts and local skirmishes did contribute in spreading discontent against the British in different parts of the country. But the idea of claiming Independance for Indian subjects was mooted for the first time in the year 1885 by the foundation of the Indian National Congress. It is significant to note that it was left to a Britisher and a retired official of the East India Company, A. O. Hume, to organise and preside over the first session of the Indian National Congress held at Bombay in 1885 when there were competent and patriotic Indians like Gopal Krishna Gokhale, Dadabhai Naorozi and Pherozeshah Mehta. Gokhale himself has tried to explain the then prevailing situations some what as follows : In view of the growing discontent in several parts of the country against the British, the authorities wanted to ascertain and assess the real position prevailing in the country and to adopt remedial measures. For this task, they selected A. O. Hume who was quite familiar with the prevailing conditions in India and who enjoyed the confidence of the British authorities. He advised these authorities that it would be better to negotiate with the urban and educated personalities rather than with the rural, uneducated and military soldiers. On the part of the elite and educated personalities of India mentioned above, they felt that it is advisable to put forth their demands for Independance through a Britisher who enjoyed the confidence of the authorities instead of adopting the method of confrontation with them who could easily suppress any agitation at that time. Hence they also approached A. O. Hume with a view to realising their objective and the result was the foundation of the Indian National Congress and that explains why Hume presided over the first session of this Congress.

I wish to conclude by exhorting the young historians that they should strive to find out the truth and nothing but the truth in their pursuit of studies and place the real facts of history before the public without any fear or reservation. They should not be carried away or influenced by any other motive or pressure which would suppress the truth in presenting the facts. From this point of view, many a chapter in the history of Karnataka requires to be re-written.

# Summary of Articles

## Kuntibetta : An Archaeological Note

*—Dr. M. S. Krishna Murthy*

Pandavapura, Old French Rocks, earlier known as Hirode has a site called Kuntibetta in the nearby Devarayanakoppalu village. Bruce-Foote had located some antiquities at the foot of the this Kuntibetta, which is a granite rocky hill, 2,882 feet high. My explorations here recently helped me unearth stone tools of palaeolithic and middle-palaeolithic period, hand axes (of 3″ to 5″ in length and of quartz), scrapers, discoids, cores and flakes, the last two being of the middle-palaeolithic period. Some pottery of Neolithic period, of burnished grey ware and a polished piece of stone axe (?) were also found. Pottery of megalithic (black ware and black-and-red ware) times was also located but not burials. The pottery has lustrous polish and graffiti marks. Typical pottery of early historic period was also found which included black-and-red ware of Andhra period, red, black, brown and grey ware, russet-coated and polished, and also painted with kaolin criss-cross lines. This is one of the most potential archaeological sites with unbroken sequence of cultures and a palaeolithic site newly identified together with Ramanathapura, Shivana Samudra, Talakadu, Ranganathapura etc.

## Some Observation on Early Kadamba Box-Head Characters

*– G. N. Shet*

Early Kadamba records used box-headed script, the heads of letters having small squares. The Vakatakas also used similar script. Who borrowed it from whom is not known. It was in imitation of writings on *bhurjapatra* or cloth using liquid medium when the point of beginning is likely to be thick. The box-headed variety might have originated in North India (one is not sure). But it is seen only in the 50 to 55 records of the Kadambas, and they served the purpose of calligraphy. But the box-headed characters contributed little to the growth of script in Karnataka.

## Nisidi Inscription from Sosale

*—Devarakonda Reddy*

Sosale in T. Narasipur tq. is a centre of the Madhwas, having the Vysaraja

Matha, and was a centre of Saptamatrika worship, having the Honnadevi temple as the centre. That the place had been a great centre of Jainism in good old days is brought to light by a newly discovered *nisidi* slab, found in front of the flooring of the Ammanavaru temple in the premises of the Gopalakrishna temple. Assignable to the fifth century A. D. paleographically, the record in Kannada script and Sanskrit language says that Gunasena who was 65 year old, became a Nirgrantha by giving up robes and also performed *sallekhana*. By this act of his 'Sosali' became a '*nirgrantha teertha*' (a holy place for the Jainas). (Text in original provided).

## Two Inscriptions of Chalukya Vikramaditya from Valaballary

*—Madhav N. Katti and N. N. Swamy*

Two new Kannada inscriptions from Valaballary, Sindhanur taluk, Raichur district, found near the plinth of the Ramalingaswamy temple were copied in 1978–79 by Sri. N. N. Swamy and are introduced here. The first is dated 25.12.1095 and the second 24.12.1117, both of the times of Chalukya Vikramaditya VI. The first record speaks of Lokkipana, perhaps coin having Lakshmi figure, and speaks of a feudatory called Mahadeva-battopadhyaya, a Sandhivigrahis for the first time, at whose exhortation grants were made to Mulasthanadeva of Piriya Bellahara by one Keshiraja, perhaps Konduguli Keshiraja. The second speaks grant to God Keshava on Uttarayana Sankranti, which then fell in December. This record speaks of one feudatory called Vasantanayaka of the Kalachuri lineage. Hole Ballary (on the banks of the Tunga-bhadra) must have become Valaballari. (Text of records given).

## A Tiger Hunting Hero Stone Inscription of Kaidala

*—H. S. Gopala Rao*

A Hero Stone found in a field of Kaidala has the sculpture of a hero stabbing a tiger. The inscription records the death of a hero Chanda, a servant of Guli Bachi, while stabbing a tiger. Several witnesses of the incident are also mentioned. This memorial stone is erected by Chanda's elder brother. Guli Bachi was an officer under Narasimha I of Hoysala dynasty. He had built several temples at Kaidala as *paroksha vinaya*. The hero of this Hero Stone inscription Chanda was a servant of Guli Bachi. The date of this inscription may be considered as *circa* 1151 A.D. This date can be accepted palaeographically also.

## Two Rare Inscriptions from Kodagu

*—M. M. Meenakshi*

Two stone inscriptions are seen at Palur and Bhagamandala situated in Madikeri Taluk, Coorg District. The inscription at Palur is located in Maha-lingesvara temple and the other at Bhagh-andesvara temple. Both the stone

inscriptions are having similar characteristics, and furnish some important and curious information. The first important feature worth noticing is the use of languages. Here we find four languages in the same inscription. They are Sanskrit, Tamil, Malayalam and Tulu. This is a very rare feature. Another interesting thing is about the script. We find four scripts in each inscription, such as Grantha, Malayalam, Tamil and Votteluttu. These two things are very rare and curious. Further, both the inscriptions mention about Bodarupa – Bagavar. Palur inscription states that he was the disciple of Avidyamrittyubattaraka of the Purushottama Parshad. But nothing is known in detail about this person. L. Rice thinks that he was a king. But no such king is known to us from other sources. Further, he has no titles of kingship. Hence it has been by the present writer that he must have been a Sthanattar of the temple. Another interesting information is that originally their inscription was written on copper plates and later it was engraved on stone so that it could come to the knowledge of all people. From palaeographical grounds, these two inscriptions can be dated to 12th century A. D. Perhaps it may belong to eleventh century A. D.

## Katihalli Inscription of Madarasa Dannayaka

*—B. Rajashekharappa*

The inscription newly found in a field near Katihalli village, Chitradurga taluk, is an important one. I happened to locate it. This inscription is of 25 lines and is in Kannada script and language. Though the date is not mentioned, paleographically it may be ascribed to the latter part of the 14 century A. D. It reveals the fact for the first time that a fendatory by name Madarasa Dannayaka was there at Chimmattanooru (ancient Chitradurga) during that period. The inscription tells about the grant of Madarasa Dannayaka to an *aravattige* (a place where generally drinking water was supplied freely to passengers, with philanthropic spirit) beside, perhaps, a highway between two provinces, namely Siddhapura and Hadavanahalli. This 'aravattige' was generally crowded, because of the passing of travellers and businessmen. For their relief, the *ambakala* (a kind of gruel) and also the *siddha-aushadhis* (medicines prepared according to the *siddha-marga*) used to be served with a religious intention of pleasing Lord Shiva. This activity was carried out effectively by a great person by name Parinami Devayya, perhaps, a Veerashaiva Sharana.

The ruler, Madarasa Dannayaka, very much pleased with this activity, granted land whose yield would be sufficient to continue this activity for ever. It is supposed that this Madarasa Dannayaka, formerly served under Vijayanagara Emperors Bukka I (1356–77 A. D.) and Harihara II (1377–1404 A. D.) as a Mahapradhana and a Mahamandalesvara (a provincial ruler) of Banavasi and so on. Later, he might have been posted to Chitradurga as a Mahamandalesvara.

## Hero Stones of Maravante and Trasi

—*Dr. K. G. Vasanta Madhava*

Find Spot of the hero stone is Kundapur Taluka, Dakshina Kannada District. The above hero stone belonging to the reign of Honna Devi Amma of Haduvalli (*sic* Chenna devi), was noticed by *Epigraphy Department* and its brief summary was published in the *Annual Report of South Indian Epigraphy 1931*, as No. 363. However, at present, the writings in many places of the hero stone are damaged. The hero stone has human sculptures in four panels. The fighting scene is well depicted. The study of existing letters in different parts of the hero stone gives impression that a hero belonging to *Hale Bali* Nayaka, resident of *Paduvakonenadu* died in encountering with the Parangadava Kapita (the Portuguese). One Basavakka Nayakiti of the same place set up Virakallu on 5th Kartika saka 1468 equivalent to 1546 A. D. The Virakallu mentions Honnadevi Amma of Haduvalli.

*Significance* : 1. It records the invasion of the Portuguese in the region of Paduvakonenadu and it was resisted by the people under Hale Bali Nayaka. This invasion might have taken place in the year 1465 Saka Kartika 15-- A. D. 1542 as known from one of the inscriptions from Bhatkal. 2. It indicates the prominence of women in the social set up in the region. 3. The principality of Haduvalli extended up to the find spot of the Virakallu (Trasi).

The Maravante hero stone is discussed by Dr. P. Gururaja Bhat. It speaks of a fight here and reads "Bhaichanayakar son ....lapa fought near Ajari .... grandson of ... yaka".

## A 2nd Century Stucco Figurine from Hampe

—*Dr. A. Sundara*

Around Feb. 1987 Sri Venkatesha Aithal of Chitradurga while exploring Hampe-Kamalapura area happened to pick up two solid stucco figurines also. He presented them to Sri Veerendra Heggade of Dharmasthala for the Museum that was then being set up in the pilgrimagecenter. I had an opportunity offered by Sri Veerendra Heggade to study stone sculptures, bronzes and also these two stucco pieces in May 88. The figurine particularly is found to be characteristically in Gandharan style of 1st-2nd Century A. D. Its occurrence in Hampe area is significant. Hence, though broken and unidentifiable, it is described and discussed here.

## Origin of Temples and Ladkhan Structure

—*M. N. Prabhakar*

The Ladhkhan structure, Goudara Gudi and the Konti temples complex of Aihole have contributed much in the discussion of origin of temple structure and scholars have different views while putting forth their theories. The ancient texts on *vastusastra* have also described structures which are simple as well as complex, the analysis of which has indicated that the Ladhkhan is basically a *sabha* structure, used for public meeting and later converted into temple. The stages in the growth of temple structure deciphered according to

